ಶ್ರೀಸರ್ವಜ್ಞಾಚಾರ್ಯ ಸೇವಾ ಸಂಘ (ರಿ), ದಾವಣಗೆರೆ



ವಿರಚಿತ

# ಪ್ರಾತಃಸಂಕಲ್ಪಗದ್ಯಮ್

ಅನುವಾದಕರು:

ಕೀರ್ತಿಶೇಷ ಮಾಧ್ವಭೂಷಣ

ಭೀಮರಾವ್, ದಾವಣಗೆರೆ

# ಲೇಖಕರ ಕಿರುಪರಿಚಯ

ದಾವಣಗೆರೆ ಕೀರ್ತಿಶೇಷ ಭೀಮರಾವ್‌ರವರು ತರುಣ ವಯಸ್ಕರಾಗಿದ್ದಾಗ, ಸಮಾನ ಮನಸ್ಸುಳ್ಳ ಗೌರವಾನ್ವಿತ ವ್ಯಕ್ತಿಗಳನ್ನು ತಮ್ಮ ಜೊತೆಯಲ್ಲಿ ಸೇರಿಸಿಕೊಂಡು ತತ್ವಪ್ರಚಾರದ ಉದ್ದೇಶವುಳ್ಳವರಾಗಿ, ಒಂದು ಸಂಸ್ಥೆಯನ್ನು 1934ರಲ್ಲಿ ಸ್ಥಾಪನೆ ಮಾಡಿ, ಸೂಕ್ತವಾದ ಕಟ್ಟಡವನ್ನೂ ನಿರ್ಮಿಸಿ ಸಂಘಕ್ಕೆ ಅರ್ಪಿಸಿದರು. ಇಂದಿಗೆ 81 ವರ್ಷಗಳು ಸಂದಿವೆ. ಸಂಘಕ್ಕೆ 'ಸೇವಾ' ಪದವನ್ನು ಸೇರಿಸಿ ತಾವೂ 'ಸೇವಾ' ಮನೋಭಾವವನ್ನು ಅನುಷ್ಠಾನದಲ್ಲಿರಿಸಿಕೊಂಡು ತಮ್ಮ ಬದುಕಿನುದ್ದಕ್ಕೂ ನಿಸ್ವಾರ್ಥ ಸೇವೆಯನ್ನು ಸಲ್ಲಿಸಿದರು. ಪಂಡಿತರಿಂದ ಪಾಠ-ಪ್ರವಚನಗಳನ್ನು ಏರ್ಪಡಿಸಿ, ತಾವು ಸಂಪ್ರದಾಯವನ್ನನುಸರಿಸಿ, ಅವರಲ್ಲಿ ಅಧ್ಯಯನಾದಿಗಳನ್ನು ಮಾಡಿದರು. ಸಂಘದ ಬಾಲ್ಯಾವಸ್ಥೆಯಲ್ಲಿಯೇ ಹೊರತಂದ ಚೊಚ್ಚಲ ಅನುವಾದಿಸಿದ ಕೃತಿ: **'ಶ್ರೀಮದ್ಭಾಗವತಸಾರೋದ್ಧಾರ'**. ಅಂದಿನಿಂದ ಅವರು ತಮ್ಮ ಲೇಖನಿಗೆ ವಿರಾಮ ಕೊಡದೆಯೇ ನಂತರದ ದಿನಗಳಲ್ಲಿ ವಿಷ್ಣು-ರಹಸ್ಯ, ಯುಕ್ತಿ-ಮಲ್ಲಿಕಾದಿ ಗ್ರಂಥಗಳನ್ನು ಅನುವಾದಿಸಿ, ಪ್ರಕಟಿಸುತ್ತ ತತ್ವಜ್ಞಾನ ಜಾಗೃತಿಯನ್ನುಂಟು ಮಾಡುವುದಕ್ಕೋಸ್ಕರ ತಮ್ಮ ಬದುಕನ್ನೇ ಮುಡುಪಾಗಿಟ್ಟರು. ಸಂಘದ 'ಮಧ್ವರಾಜ ಮಂದಿರ' ದಲ್ಲಿ ಪ್ರವಚನವನ್ನೂ ನಡೆಸುತ್ತ, ಅಲ್ಲಿಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಸಂಘದ ಹೆಸರನ್ನು ಚಿರಸ್ಥಾಯಿಯನ್ನಾಗಿ ಮಾಡಿದ್ದಾರೆ. ಈ ಸೇವೆಯನ್ನು ಗುರುತಿಸಿ, ಅಖಿಲ ಭಾರತ ಮಾಧ್ವ ಮಹಾಮಂಡಲವು ಅವರಿಗೆ **'ಮಾಧ್ವಭೂಷಣ'** ಎಂಬ ಪ್ರಶಸ್ತಿಯನ್ನು ನೀಡಿತು. ತಮ್ಮ 76ನೇ ವಯಸ್ಸಿನಲ್ಲಿ (1979) ಅವರು ದೈವಾಧೀನರಾದರು.

**ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀ ಪಾದಂಗಳವರ ಅನುಗ್ರಹ ಸಂದೇಶಃ** – 'ಸಂಸ್ಕೃತ ಬರದ ಜಿಜ್ಞಾಸುಗಳಿಗೆ ಶ್ರೀಮದಾಚಾರ್ಯರ ಸಿದ್ಧಾಂತದ ಪ್ರಮೇಯಗಳನ್ನು ತಿಳಿಯಲು ದಿ॥ ಭೀಮರಾವ್‌ರವರ ಕೃತಿಗಳು ಉತ್ತಮ ಸಹಾಯಕವಾಗಿವೆ'.

ದಿ॥ ಭೀಮರಾಯರು ರಚಿಸಿರುವ ಕೃತಿಗಳು "ಮೋಕ್ಷಾಪೇಕ್ಷಿಗಳಾಗಿ ಸಾಧಕ ವರ್ಗದಲ್ಲಿರುವವರಿಗೆ ಕೈದೀವಟಿಗೆಯಂತೆ-ಅಂದರೆ ತತ್ವಜ್ಞಾನ ಸಂಪಾದನೆಯಲ್ಲಿರುವವರಿಗೆ ಬೆಳಕು ನೀಡಿ ಉಪಕರಿಸುತ್ತೆ" ಹೀಗೆಂದು ಜ್ಞಾನಪ್ರಸಾರವನ್ನೇ ತಮ್ಮ ಧ್ಯೇಯವನ್ನಾಗಿಟ್ಟುಕೊಂಡಿರುವ **ಶ್ರೀ ಶ್ರೀ ಸುವಿದ್ಯೇಂದ್ರತೀರ್ಥರು** ವ್ಯಕ್ತಪಡಿಸಿದ್ದಾರೆ.

"ಇಪ್ಪತ್ತನೆಯ ಶತಮಾನದಲ್ಲಿ ಹೆಚ್ಚು ಉಪಯುಕ್ತವೆನ್ನಿಸಿರುವ ಅನೇಕ ಅನುವಾದ ಕೃತಿಗಳನ್ನು ವಿದ್ವಾಂಸರಾದ ಭೀಮರಾಯರು ರಚಿಸಿದ್ದಾರೆ.... ಭಾಷೆಯ ಮೇಲೆ ಅವರ ಹಿಡಿತ, ಅದರ ಪರಿಣಾಮಕಾರಿಯಾದ ಬಳಕೆ ಗಮನಾರ್ಹವಾಗಿದೆ. **ನೇರ ನಿರೂಪಣೆ, ಸುಲಭ ಭಾಷೆ, ಸರಳ ಶೈಲಿ** ಮೊದಲಾದ ಕಾರಣಗಳಿಂದ ಅವು **ಹೆಚ್ಚಿನವರಿಗೆ ತಲುಪಲು ಸಾಧ್ಯವಾಗಿದೆ...**" – ಹೀಗೆಂದು, ಪ್ರಸಿದ್ಧ ಲೇಖಕರೂ, ಸಂಶೋಧಕರೂ, ವಾಗ್ಮಿಗಳೂ ಆಗಿರುವ **ಡಾ॥ ಪ್ರಭಂಜನಾಚಾರ್ಯರು** ಪ್ರಶಂಸಿಸಿದ್ದಾರೆ.

॥ ಶ್ರೀಃ ॥

ಶ್ರೀಮದ್ ರಾಘವೇಂದ್ರತೀರ್ಥ ವಿರಚಿತ

# ಪ್ರಾತಃಸಂಕಲ್ಪಗದ್ಯಮ್

(ಕನ್ನಡ ಮೂಲ, ಪ್ರತಿಪದಾರ್ಥ, ತಾತ್ಪರ್ಯ ಮತ್ತು ಪ್ರಮೇಯ ಸಹಿತ)



ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮ ರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥

ವ್ಯಾಖ್ಯಾನಕಾರರು
ಕೀರ್ತಿಶೇಷ ಮಾಧ್ವಭೂಷಣ ಶ್ರೀ ಬಿ. ಭೀಮರಾವ್
ದಾವಣಗೆರೆ

ಪ್ರಕಾಶಕರು:
ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ (ರಿ.)
'ಮಧ್ವರಾಜ ಮಂದಿರ', ಕಸ್ತೂರಿಬಾ ಬಡಾವಣೆ
3ನೇ ತಿರುವು, ಕುವೆಂಪು ರಸ್ತೆ, ದಾವಣಗೆರೆ - 577 002
ಮೊ. : 99451 98849

ಶ್ರೀಮದ್ ಶ್ರೀರಾಘವೇಂದ್ರತೀರ್ಥ ವಿರಚಿತ

# ಪ್ರಾತಃಸಂಕಲ್ಪಗದ್ಯಮ್

ವ್ಯಾಖ್ಯಾನ : ದಾವಣಗೆರೆಯ ದಿ|| ಮಾಧ್ವಭೂಷಣ ಭೀಮರಾವ್

ಪ್ರಕಾಶಕರು:
ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ (ರಿ.), ದಾವಣಗೆರೆ - 577 002

ಸಂಘದ ವತಿಯಿಂದ ಪ್ರಥಮ ಮುದ್ರಣ : 2003

ದ್ವಿತೀಯ ಮುದ್ರಣ : 2013

ತೃತೀಯ ಮುದ್ರಣ : 2016

ಹಕ್ಕುಗಳು ಪ್ರಕಾಶಕರಿಂದ ಕಾದಿರಿಸಲ್ಪಟ್ಟಿವೆ.

ಪುಟಗಳು : xxiv + 136

ಪ್ರತಿಗಳು : 1000

ಬೆಲೆ : ರೂ. **80/-**

ಪುಸ್ತಕಗಳು ದೊರೆಯುವ ಸ್ಥಳ:

1. ಸಂಘದ ಕಾರ್ಯಾಲಯ, ಕೆ. ಬಿ. ಬಡಾವಣೆ, ದಾವಣಗೆರೆ. ☎ 08192-230340 99451 98849
2. ಬಿ. ವಿ. ಪ್ರಹ್ಲಾದ, ರಾಜಾಜಿನಗರ, ಬೆಂಗಳೂರು. Mob: 9448171859
3. ವಂದನಾ ಬುಕ್ ಹೌಸ್, ಎನ್. ಆರ್. ಕಾಲೋನಿ, ಬೆಂಗಳೂರು.
4. ವೇದಾಂತ ಬುಕ್ ಹೌಸ್, ಚಾಮರಾಜಪೇಟೆ, ಬೆಂಗಳೂರು.
5. ಪೂರ್ಣಪ್ರಜ್ಞ ವಿದ್ಯಾಪೀಠ — ಪುಸ್ತಕ ಮಳಿಗೆ, ಬೆಂಗಳೂರು
6. ಉತ್ತರಾದಿಮಠ — ಪುಸ್ತಕ ಮಳಿಗೆ, ಬೆಂಗಳೂರು
7. ಬಿ. ಎಸ್. ರಘುನಾಥರಾವ್, Mob: 9343718286

ಮುಖಪುಟ ವಿನ್ಯಾಸ: ಕೆ. ಎಂ. ಶೇಷಗಿರಿ

ಮರು ಮುದ್ರಣ:
ಪರಿಮಳ ಮುದ್ರಣಾಲಯ
ನಂ. 184, 14ನೇ ಮುಖ್ಯರಸ್ತೆ, ಹನುಮಂತನಗರ,
ಬೆಂಗಳೂರು–560 050. ದೂ. : 26606061

## ದ್ವಿತೀಯ ಪ್ರಕಟನೆಗೆ (2013) ನೀಡಿರುವ ಅನುಗ್ರಹ ಸಂದೇಶ

।। श्री दिग्विजयरामो विजयते ।।


श्रीमज्जगद्गुरु श्रीमध्वाचार्य मूलमहासंस्थानम्

# उ त्त रा दि म ठः

5th Cross, Shankarapuram, Basavanagudi, BANGALORE-560004

Ph: 080-2242 6203


Camp: Chennai Date : 26-01-2013

---

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

### ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ

## ಅನುಗ್ರಹ ಸಂದೇಶ

ಕರ್ಮಕ್ಷೇತ್ರಂ ಹಿ ಮಾನುಷ್ಯಂ ತದನ್ಯತ್ರ ನ ವಿದ್ಯತೇ॥ ಎಂದು ಭಗವಾನ್ ವ್ಯಾಸರ ಉಕ್ತಿ. ಎಲ್ಲ ದೇಹದಲ್ಲೂ ಕರ್ಮಾಚರಣೆ ನಿರಂತರವಾಗಿ ಸಾಗುತ್ತದೆ. ಮೋಕ್ಷ ಸಾಧನ-ವಾದ ಯಾವುದೇ ಕರ್ಮದ ಆಚರಣೆಗೆ ಮನುಷ್ಯ ದೇಹ ಮಾತ್ರ ಮಾಧ್ಯಮವಾಗ-ಬಲ್ಲದು. ಅದಕ್ಕಾಗಿಯೇ ಶ್ರುತಿ-ಸ್ಮೃತಿಗಳು ಮಾನವರಿಗೆ ವಿಹಿತಕರ್ಮಗಳ ಆಚರಣೆಗೆ ಆದೇಶಿಸಿವೆ, ಉಪದೇಶಿಸಿವೆ. ಮೋಕ್ಷಸಾಧನವಾದ ಕರ್ಮಾಚರಣೆಯಲ್ಲಿ ಮಾನವೇತರ ಪ್ರಾಣಿ-ಪಶುಗಳಿಗೆ ಅಧಿಕಾರವಿಲ್ಲ. ಅಂತೆಯೆ ಅವುಗಳಿಗೆ ಉಪದೇಶವಿಲ್ಲ. ಆಚರಣೆಗೆ ಆದೇಶವೂ ಇಲ್ಲ.

ತಿಳುವಳಿಕೆ ಆಕಳಿನ ತುಪ್ಪವಿದ್ದಂತೆ. ತುಪ್ಪವನ್ನು ತಿಂದು ತೆಪ್ಪಗೆ ಕುಳಿತುಬಿಟ್ಟರೆ ದೇಹಕ್ಕೆ ಬಲ ಬರುವುದಿಲ್ಲ. ಬದಲಾಗಿ ದೇಹ ರೋಗದ ಗೂಡಾಗುತ್ತದೆ. ಅದೇ ತುಪ್ಪವನ್ನು ತಿಂದ ಬಳಿಕ ಬೆವರು ಹರಿಯುವಂತೆ ದೇಹವನ್ನು ಚೆನ್ನಾಗಿ ದಂಡಿಸಿ ದಣಿಸಿದರೆ ಅಂಗ-ಗಳಿಗೆ ಪುಷ್ಟಿಯನ್ನು ನೀಡುತ್ತದೆ. ಅದರಂತೆ ಬರೀ ದೇವರನ್ನು ಅರಿತರೆ ಸಾಲದು; ನುರಿತ ಅರಿವು ಅನುಷ್ಠಾನವಾಗಿ ಹೊರಗೆ ಹರಿಯಬೇಕು. ಭಗವಂತ ತೋರಿದ ಕರ್ಮಮಾರ್ಗ-ದಲ್ಲಿ ನಡೆಯಬೇಕು. ಭಗವಂತನನ್ನು ಆದರದಿಂದ ಉಪಾಸಿಸಬೇಕು. ನಮ್ಮ ಮುಂದೆ ಶ್ರೀಮದಾನಂದತೀರ್ಥರೇ ಮೊದಲಾದ ಮಹನೀಯರು ಹಾಕಿ ಕೊಟ್ಟ ಮಾರ್ಗವಿದೆ. ಗುರಿ ಇದೆ. ಆದರೆ ಮೊದಲು ಮುಟ್ಟುವ ಧಾವಂತದಲ್ಲಿ ಭಗವಂತನ ಇರುವನ್ನೇ ಮರೆಯಬಾರದು. ಹೀಗೆ ಜ್ಞಾನಕ್ಕಾಗಿ, ಜ್ಞಾನಸಹಿತವಾಗಿ ಕರ್ಮವನ್ನು ಮಾಡಬೇಕು. ಆಗಲೇ ಕರ್ಮಾಚರಣೆ ಸಿದ್ಧಿಯ ರೂಪ ಪಡೆಯುವುದು.

ನ್ಯೂನತೆಗಳಿರುವುದು ಮನುಷ್ಯನಲ್ಲಲ್ಲ, ಅವನ ಸಂಕಲ್ಪದಲ್ಲಿ. ಹೀಗಾಗಿ ಸಂಕಲ್ಪ ಸರಿಯಾಗಿರಬೇಕು. ಗಟ್ಟಿಯಾಗಿರಬೇಕು. ನಮ್ಮ ಸಂಕಲ್ಪ ಹೇಗಿರಬೇಕೆಂದು ತಿಳಿಯ ಬೇಕಾದರೆ ಮಹನೀಯರಾದ ಶ್ರೀಮದ್ರಾಘವೇಂದ್ರಸ್ವಾಮಿಗಳು ರಚಿಸಿರುವ ಪ್ರಾತಃಸಂಕಲ್ಪಗದ್ಯವನ್ನು ನಿತ್ಯದಲ್ಲಿಯೂ ನಸುಕಿನಲ್ಲೇ ಹೇಳಿಕೊಳ್ಳಬೇಕು. ಅದು ಸರ್ವಮೂಲದ ಸಾರ ತುಂಬಿದ ಕಿರುಕೃತಿ. ಶ್ರೀಮದಾಚಾರ್ಯರು ತಿಳಿಸಿದ ಅನೇಕ ಪ್ರಮೇಯಗಳನ್ನು ಪುಟ್ಟಪದಗಳಲ್ಲಿ ಕಟ್ಟಿಹಾಕಿದ ಸುಂದರ ಮಾಲೆ.

ನಮ್ಮ ಮಠದ ಆತ್ಮೀಯ ಶಿಷ್ಯರಾಗಿದ್ದ ದಾವಣಗೆರೆಯ ದಿ|| ಭೀಮರಾಯರು ಸಂಸ್ಕೃತದಲ್ಲಿರುವ ಅನೇಕ ಶಾಸ್ತ್ರೀಯ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದಿಸಿ ಶ್ರೀವ್ಯಾಸಮಧ್ವರ ಅತ್ಯುತ್ತಮ ಸೇವೆಯನ್ನು ಮಾಡಿದ್ದಾರೆ. ಸಂಸ್ಕೃತ ಬರದ ಜಿಜ್ಞಾಸು-ಗಳಿಗೆ ಶ್ರೀಮದಾಚಾರ್ಯರ ಸಿದ್ಧಾಂತದ ಪ್ರಮೇಯಗಳನ್ನು ತಿಳಿಯಲು ಅವರ ಕೃತಿಗಳು ಉತ್ತಮ ಸಹಾಯಕವಾಗಿವೆ. ಪ್ರಕೃತ ಪ್ರಾತಃಸಂಕಲ್ಪಗದ್ಯದ ಅನುವಾದವನ್ನು ಬಹಳ ಸುಂದರವಾಗಿ ತಮ್ಮ ಈ ಕೃತಿಯಲ್ಲಿ ತಿಳಿಸಿದ್ದಾರೆ. ಇದು ಜಿಜ್ಞಾಸುಗಳಿಗೆ ಉಪಯುಕ್ತ-ವಾಗುವುದರಲ್ಲಿ ಸಂದೇಹವಿಲ್ಲ.

ಪ್ರಕೃತ ಈ ಕೃತಿಯ ಪ್ರಕಾಶನವನ್ನು ದಾವಣಗೆರೆಯ ಸರ್ವಜ್ಞಸೇವಾಸಂಘದವರು ಮಾಡುತ್ತಿರುವುದು ಅತ್ಯಂತ ಪ್ರಶಂಸನೀಯವಾದುದು. ಶ್ರೀಮತ್ಸತ್ಯಧ್ಯಾನತೀರ್ಥರಿಂದ ಪ್ರತಿಷ್ಠಾಪಿತವಾದ ಈ ಸಂಸ್ಥೆಯು ಸುಮಾರು ೭೫ಕ್ಕೂ ಹೆಚ್ಚು ವರ್ಷಗಳಿಂದ ಪಾಠ-ಪ್ರವಚನ-ಗ್ರಂಥಪ್ರಕಾಶನಗಳ ಮೂಲಕ ಸರ್ವಜ್ಞಾಚಾರ್ಯರ ಸೇವೆಯನ್ನು ಮಾಡುತ್ತಿದೆ. ಇದೇ ರೀತಿಯಾಗಿ ಸಂಸ್ಥೆ ನಿರಂತರವಾಗಿ ಇತೋಪ್ಯತಿಶಯವಾಗಿ ಬೆಳೆಯಲಿ, ಸಂಸ್ಥೆಯ ಪ್ರತಿಯೊಬ್ಬ ಸದಸ್ಯರಿಗೂ ಭಗವಂತ ವಿಶೇಷವಾಗಿ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ಕರುಣಿಸಲಿ, ಇದೇ ರೀತಿಯಾಗಿ ಇನ್ನೂ ಹೆಚ್ಚಿನ ಉತ್ಸಾಹ-ಶಕ್ತಿಗಳನ್ನು ನೀಡಿ ಹೆಚ್ಚಿನ ಸೇವಾಕಾರ್ಯಗಳನ್ನು ಅವರಿಂದ ಮಾಡಿಸಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮನ್ಮೂಲಸೀತಾಸಮೇತ ಶ್ರೀಮೂಲರಾಮದಿಗ್ವಿಜಯರಾಮವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ. ಈ ಕೃತಿಯ ಲಾಭವನ್ನು ಎಲ್ಲ ಸಾಧಕರೂ ಪಡೆಯುವಂತಾಗಲಿ.

ಇತಿ ಅನೇಕ ನಾರಾಯಣ ಸ್ಮರಣೆಗಳೊಂದಿಗೆ

ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

# ಅಭಿನಂದನ

ಶ್ರೀಗುರುಸಾರ್ವಭೌಮರೆಂದು ಪ್ರಖ್ಯಾತರಾದ ಶ್ರೀರಾಘವೇಂದ್ರಸ್ವಾಮಿಗಳಿಂದ ರಚಿತವಾದ ಪ್ರತಿನಿತ್ಯ ಸಜ್ಜನರಿಂದ ಅವಶ್ಯ ಪಠನೀಯವಾದ ಪ್ರಾತಃಸಂಕಲ್ಪಗದ್ಯ-ವನ್ನು ದಾವಣಗೆರೆ ಭೀಮರಾಯರು ಪ್ರತಿಪದಾರ್ಥ, ತಾತ್ಪರ್ಯ, ಪ್ರಮೇಯ ನಿರೂಪಣ ಈ ಮೂರು ಪ್ರಕಾರದಿಂದ ಅತ್ಯಂತ ಸುಂದರವಾಗಿ ವಿವರಿಸಿದ್ದಾರೆ. ಸತ್ಸಿದ್ಧಾಂತಕ್ಕೆ ಅವಿರುದ್ಧವಾಗಿ ಸಕಲ ಶಾಸ್ತ್ರಸಾರಸಂಗ್ರಹರೂಪವಾಗಿ ಸಂಸ್ಕೃತದ ಗದ್ಯವನ್ನು ಕನ್ನಡದಲ್ಲಿ ವಿವರಿಸಿ ಸಜ್ಜನವರ್ಗಕ್ಕೆ ಅಪಾರ ಉಪಕಾರವನ್ನು ಮಾಡಿರುವ ಈ ಭೀಮರಾಯರು ಶ್ರೀಹರಿವಾಯುಗಳ ಪೂರ್ಣವಾದ ಅನುಗ್ರಹಕ್ಕೆ ಪಾತ್ರರಾಗಿ-ದ್ದಾರೆ. ವಕೀಲ್ ವೃತ್ತಿಯಲ್ಲಿ ಪ್ರಖ್ಯಾತರಾಗಿದ್ದರೂ ಅನಿತರ ಸಾಧಾರಣ ಶಾಸ್ತ್ರ-ವೈದುಷ್ಯವನ್ನು ಹೊಂದಿ ಸರ್ವಜ್ಞಶಾಸ್ತ್ರದ ಸೇವೆಯನ್ನು ಅಖಂಡವಾಗಿ ನಡೆಸಿ ತಮ್ಮ ಜೀವನವನ್ನು ಸಾರ್ಥಕಗೊಳಿಸಿ ಲೌಕಿಕ ಸದ್ಗೃಹಸ್ಥರುಗಳಿಗೆ ಆದರ್ಶ ವ್ಯಕ್ತಿಗಳಾಗಿ ಇರುವ ಈ ಭೀಮರಾಯರು ಬರೆದ ಈ ಗ್ರಂಥವನ್ನು ತುಳಸಮ್ಮ ಧರ್ಮಸಂಸ್ಥೆಯು ಪ್ರಕಾಶಪಡಿಸಿ ಧರ್ಮಸಂಸ್ಥೆ ಎಂಬ ತನ್ನ ಹೆಸರನ್ನು ಅನ್ವರ್ಥಗೊಳಿಸಿರುತ್ತದೆ.

ಜಗದ್ಗುರು ಶ್ರೀಮಧ್ವಾಚಾರ್ಯ ಸಂಸ್ಥಾನ<br>ಉಡುಪಿ ಶ್ರೀಫಲಿಮಾರು, ಭಂಡಾರಕೇರಿ ಮಠಾಧಿಪತಿಗಳಾದ<br>ಶ್ರೀವಿದ್ಯಾಮಾನ್ಯತೀರ್ಥಶ್ರೀಗಳವರು

(ವಿಶೇಷ ಸೂಚನೆ: ಪ್ರಪ್ರಥಮವಾಗಿ 'ತುಳಸಮ್ಮ ಧರ್ಮಸಂಸ್ಥೆ'— ಇವರಿಂದ ೧೯೭೨ನೇ ಇಸವಿಯಲ್ಲಿ ಪ್ರಕಾಶಗೊಂಡ ಸಂದರ್ಭದಲ್ಲಿ ಶ್ರೀಗಳವರು ನೀಡಿದ ಆಶೀರ್ವಚನ)

**ಪ್ರೊ॥ ಪಂ. ಜಯತೀರ್ಥಾಚಾರ್ಯ ವಾ ಮಳಗಿ**
**ಎಂ.ಎ. (ಸಂಸ್ಕೃತ), ಎಂ.ಎ. (ಕನ್ನಡ), ಎಂ.ಎ. (ಹಿಂದಿ)**
**ಪ್ರಾಧ್ಯಾಪಕರು (ನಿವೃತ್ತ), ಕರ್ನಾಟಕ ವಿಶ್ವವಿದ್ಯಾಲಯ**

ಧಾರವಾಡ
10–04–2016

# ಪ್ರಾತಃಸಂಕಲ್ಪಗದ್ಯದ ಹಿನ್ನೋಟ

ಜಗದ ಜೀವರ ಜೀವ ಮುಖ್ಯಪ್ರಾಣ. ಅನಂತ ಜೀವ ನಿಯಾಮಕ. ಋಜುಯೋಗಿ. ಕುಳಿತಲ್ಲಿಯೇ ವಿಶ್ವದರ್ಶಿ. ಸರ್ವಜ್ಞ. ಜೀವೋತ್ತಮ. ಶ್ರೀಹರಿಯ ಹಿರಿಯಮಗ. ಭಾವಿಬ್ರಹ್ಮ. ಸಕಲರ ಶ್ವಾಸದೊಡೆಯ. ಪ್ರಾಣಪತಿ. ಹರಿಯಿಂದ 'ಜಗದ್‌ಗುರು' ಸ್ಥಾನ ಪಡೆದವ. ಜಗದ ಹುಟ್ಟು ಇವನಿಂದ. ಪಾಲನ, ಪೋಷಣ, ಲಯ, ನಿಯಮನಗಳು ಈ ಪ್ರಾಣನಿಂದ. ಈತ ಭಾರತೀಪತಿ. ಸಕಲವೇದ ಪ್ರತಿಪಾದ್ಯ. ಸದಾ ಕೃತಯುಗದ ಧರ್ಮ ಪಾಲಕ. ಶುದ್ಧ ಭಾಗವತ ಧರ್ಮದ ಮೂರ್ತಿ. ಶ್ರೀಹರಿಯ ಸೇವೆಗೆ ಮೂರು ಯುಗದಲ್ಲಿಯೂ ಅವತರಿಸಿದ ಸಾಧಕೇಶ. ಬ್ರಹ್ಮಚರ್ಯ, ಗೃಹಸ್ಥ, ಸಂನ್ಯಾಸ ಮೂರೂ ಆಶ್ರಮಗಳಿಂದ ರಾಮಕೃಷ್ಣ, ವೇದವ್ಯಾಸರ ಸೇವೆ ಮಾಡಿದವರು. ಹನುಮ, ಭೀಮ, ಮಧ್ವಾವತಾರಿಗಳು ಈ ಮುಖ್ಯಪ್ರಾಣರು. ಅನಾದಿಯಾದ ಪರಂಪರಾಪ್ರಾಪ್ತವಾದ ಶ್ರೀಮದ್ ವೈಷ್ಣವ ಸಿದ್ಧಾಂತ ಪ್ರತಿಷ್ಠಾಪಕರು ಶ್ರೀ ಮುಖ್ಯಪ್ರಾಣರು. ಇವರ ಚಾರಿತ್ರಿಕ ವಾಙ್ಮಯವೇ ಅನಂತ ವೇದಗಳು. ಆಸ್ತಿಕ ಸಮಾಜದಲ್ಲಿ ಮೂರು ಹರಿವಾಯುಸ್ತುತಿಗಳು ಪ್ರಸಿದ್ಧ–ಪ್ರಚಲಿತ, ಒಂದು **'ವೈದಿಕ' ವಾಯುಸ್ತುತಿ.** ಅದು ಸಮಗ್ರ ವೇದಗಳು–ಪವಮಾನ ಸೂಕ್ತ, ಒಳಿತ್ಥಾದಿಗಳು.

ಎರಡನೆಯದು **ಪದ್ಯಮಯ ವಾಯುಸ್ತುತಿ,** ತ್ರಿವಿಕ್ರಮ ಪಂಡಿತರು ರಚಿಸಿದ ವಾಯುಸ್ತುತಿ. ಇದು ಮಾಧ್ವರ ಮಾಂಗಲ್ಯ. ಇದು ಆಸ್ತಿಕರ ಆಸ್ತಿ. ಇಂದಿಗೂ ಮಾಧ್ವರ ಮನೆಯಲ್ಲಿ, ಮನದಲ್ಲಿ ಸದಾ ಮೊಳಗುವ ಧ್ವನಿ ಕೇಳಿಬರುವ ಸ್ತುತಿ ಈ ವಾಯುಸ್ತುತಿ. ಮೂರನೇಯಸ್ತುತಿಯೇ **"ಗದ್ಯಮಯ" ವಾಯುಸ್ತುತಿ.** ಇದುವೇ ಶ್ರೀ ರಾಘವೇಂದ್ರಸ್ವಾಮಿಗಳು ರಚಿಸಿದ **"ಪ್ರಾತಃ ಸಂಕಲ್ಪಗದ್ಯ"** ಸಮಗ್ರ ಸರ್ವಮೂಲಗಳಲ್ಲಿಯ ಹರಿವಾಯುಗಳ ಮಹಿಮೆಯನ್ನು ಸಾರುವ ಕೃತಿ. ಸರ್ವಮೂಲ ಟೀಕಾ ಟಿಪ್ಪಣಿಗಳ ಸಾರ ಸಂಗ್ರಹ. ಶ್ರೀ ಹರಿಯ ಬಗ್ಗೆ ಮುಖ್ಯಪ್ರಾಣ ದೇವರ ಬಗ್ಗೆ, ಅನುಸಂಧಾನ ಮಾಡಬೇಕಾದ ಪ್ರಮೇಯಗಳ ಸಂಕಲನ.

ಪದ್ಯ ಒಮ್ಮೊಮ್ಮೆ ಅರ್ಥವಾಗಲು ಕಠಿಣ. ಆದರೆ ಈ ಗದ್ಯವು ತಿಳಿಯಲು ಸುಲಭ. ಉಪಾಸಿಸಲು ಸರಳ. ಈ ಗದ್ಯ ಪಠಿಸಿದಂತೆ ಅರ್ಥ ತಿಳಿಯುತ್ತ, ಹರಿವಾಯುಗಳ ಮಹಿಮೆ ಮನದಲ್ಲಿ ಒಡಮೂಡಿ ಭಕ್ತಿ ಹೆಚ್ಚುವುದು, ಪ್ರೀತಿ ಉಕ್ಕುವುದು, ಆನಂದ ಅನುಭವಕ್ಕೆ ಬರುವುದು. ಇದು **"ಪ್ರಾತಃಸಂಕಲ್ಪ"** ಗದ್ಯದ ಹಿರಿಮೆ. ಗರಿಮೆ. ಮೇಲ್ಮೆ. ಮಹಿಮೆ.

**"ಪ್ರಾತಃಸಂಕಲ್ಪಗದ್ಯ"** ಇದೊಂದು ಸುವರ್ಣ ಸಂಪುಷ್ಪ. ಕೆಳಗೊಂದು ಸಂಪುಷ್ಪದ ಭಾಗ. ಮೇಲೊಂದು ಭಾಗ. ಮಧ್ಯದಲ್ಲಿ ಸಾಲಿಗ್ರಾಮವಿದ್ದಂತೆ. ಮೊದಲು 45 ವಾಕ್ಯಗಳಿಂದ ವಾಯುದೇವರ ಅಪಾರ ಮಹಿಮೆಯ ಸಂಪುಷ್ಪ. ಮಧ್ಯದಲ್ಲಿ ಶ್ರೀಹರಿಯ ಸಾಲಿಗ್ರಾಮದಂತೆ ಪರಮಾತ್ಮನ ಐದು ರೂಪಗಳು. ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣರೂಪಗಳ ಕಾರ್ಯ, ಸ್ವರೂಪ, ಫಲಗಳ ನಿರೂಪಣೆ. ಮತ್ತೆ ಮೇಲು ಸಂಪುಷ್ಪ ದಂತೆ 35 ವಾಕ್ಯಗಳಿಂದ ಮುಖ್ಯಪ್ರಾಣ ದೇವರು ಪ್ರತಿಯೊಬ್ಬರಲ್ಲಿದ್ದು ಮಾಡುವ ಕಾರ್ಯಗಳು, ಹರಿಯಲ್ಲಿ ಅವುಗಳ ಸಮರ್ಪಣೆಯ ವಿವರಗಳು. ಹೀಗೆ ಈ ಗದ್ಯ ಶಾಲಿಗ್ರಾಮದ ಸುವರ್ಣ ಸಂಪುಷ್ಪವಾಗಿದೆ. ಇದು ಪ್ರತಿಮನೆಯಲ್ಲಿ ಇರಬೇಕಾದ ದೇವರ ಸಂಪುಷ್ಪ.

ಈ "**ಪ್ರಾತಃಸಂಕಲ್ಪ**" ಗದ್ಯವನ್ನು ಐದು ಬಗೆಯಾಗಿ ಅಧ್ಯಯನ ಮಾಡಬೇಕು. ತಿಳಿಯುವ ಬಗೆ ಐದು ವಿಧ. 1) ಈ ಗದ್ಯದ ಪ್ರತಿಯೊಂದು ವಾಕ್ಯವು ವಾಯುದೇವರ ಸ್ವರೂಪವನ್ನು ತಿಳಿಸುವುದು. ವಾಯುದೇವರ ಲಕ್ಷಣವನ್ನು ಹೇಳುವುದು. 2) ಎರಡನೇಯದು-ಅವರ ಸಾಧನದ, ಉಪಾಸನೆಯ ನಿರೂಪಣೆಯಾಗಿದೆ. ಇದನ್ನು ಮಾಡಲು ಪ್ರಾಣದೇವರೇ ಸಮರ್ಥರು. ಅವರಿಗೆ ಆ ಯೋಗ್ಯತೆ. 3) ಮೂರನೇಯದು-ಈ ರೀತಿ ಉಪಾಸನೆ ಮಾಡಿದ್ದಕ್ಕೆ ದೇವರು ಪ್ರಾಣದೇವರಿಗೆ ನೀಡಿದ ಫಲ. 4) ನಾಲ್ಕನೇಯದು-ನಾವು ಹರಿವಾಯುಗಳ ಬಗ್ಗೆ ಮಾಡಬೇಕಾದ ಅನುಸಂಧಾನಪರ, ತಿಳಿಯಬೇಕಾದ ಪ್ರಮೇಯ ಪರವಾಗಿ. 5) ಐದನೇಯದು-ಹೀಗೆ ನಾವು ಉಪಾಸನೆ ಮಾಡುವದರಿಂದ ಹರಿವಾಯುಗಳು ನಮಗೆ ನೀಡುವ ಫಲ. ಪ್ರಯೋಜನಗಳ ಪರವಾಗಿ ಈ ಪ್ರಾತಃಸಂಕಲ್ಪಗದ್ಯವನ್ನು ಚಿಂತನೆ ಮಾಡಬೇಕು.

ಹೀಗೆ ಪ್ರಾತಃಸಂಕಲ್ಪಗದ್ಯದಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳು "ಮುಖ್ಯಪ್ರಾಣ" ಜಿಜ್ಞಾಸಾ ಮಾಡಿದ್ದಾರೆ. ಜಿಜ್ಞಾಸೆ ಎಂದರೆ "ಸ್ವರೂಪ, ಸಾಧನ, ಫಲ ಜಿಜ್ಞಾಸಹಿ ಜಿಜ್ಞಾಸಾ", ಇಲ್ಲಿ ಮುಖ್ಯಪ್ರಾಣರ ಸ್ವರೂಪ, ಅವತಾರ, ಸಾಧನ ಹಾಗೂ ಅವರು ಪಡೆದ ಫಲಗಳ ಜಿಜ್ಞಾಸೆ ಮೂಡಿಬಂದಿದೆ. ಈ ಗದ್ಯದ ಒಂದೊಂದು ಮಾತುಗಳೂ ಸೂತ್ರಪ್ರಾಯವಾಗಿವೆ. ಬಹುಶಾಖಾ ನಿರ್ಣಯಕ. ಬಹು ಪ್ರಮೇಯ ನಿರೂಪಕ. ವೈದಿಕವರ್ಣಗಳು ಅಪ್ರಾಕೃತ, ನಿತ್ಯ-ಲೌಕಿಕ ವರ್ಣಗಳು ಪ್ರಾಕೃತ. ಇವೆಲ್ಲ ಹರಿಯನಾಮಗಳು. ಹರಿಯ ಗುಣ, ಕ್ರಿಯಾ, ವಾಚಕಗಳು. ಉದಾಹರಣೆಗೆ ಗದ್ಯದ ಮೊದಲ ವಾಕ್ಯ : "ಲೌಕಿಕ ವೈದಿಕ ಭೇದ ಭಿನ್ನ ವರ್ಣಾತ್ಮಕ ಧ್ವನ್ಯಾತ್ಮಕ..............." ಧ್ವನಿಗಳು ಇಬ್ಬಗೆ. ಲೌಕಿಕ ವರ್ಣಗಳು ಹಾಗೂ ಧ್ವನಿಗಳು. ಹಾಗೆಯೇ ವೈದಿಕ ವರ್ಣಗಳು ಮತ್ತು ಧ್ವನಿಗಳು. ಹೀಗೆ ಧ್ವನಿಯು ನಾಲ್ಕು ಬಗೆಯಾಗಿ. ಸಾಮಾನ್ಯವಾಗಿ ಧ್ವನಿ ಮೂರು ಬಗೆಯಾಗಿ ಹುಟ್ಟುವುದು. 1) ಜಡದಿಂದಲೇ ಹಲವು ಧ್ವನಿಗಳು ಹುಟ್ಟುವುವು. ಹರಿಯುವ ನದಿಗಳಿಂದ, ಬೋರ್ಗರೆಯುವ ಸಮುದ್ರದಿಂದ, ಬೀಸುವ ಗಾಳಿಯಿಂದ, ಜಲಪಾತಗಳಿಂದ ಹುಟ್ಟುವ ಧ್ವನಿ. 2) ಚೇತನರಿಂದ ಸ್ಥಾನ, ಪ್ರಯತ್ನಗಳಿಂದ ಹುಟ್ಟುವ ಧ್ವನಿ, ಇದೂ ನಾಲ್ಕು ಬಗೆ "ಪರಾ, ಪಶ್ಯಂತಿ", "ಮಧ್ಯಮಾ, ವೈಖರೀ" ಎಂಬುದಾಗಿ ಧ್ವನಿ ವರ್ಣಗಳು ಹುಟ್ಟುವವು 3) ಚೇತನನು ಜಡದಿಂದ ಹೊರಡಿಸುವ ಧ್ವನಿಗಳು : ಶಂಖ, ಜಾಗಟೆ, ಗಂಟೆ, ಮೃದಂಗ, ತಬಲಾ, ಪಟೇ, ವೀಣೆ, ಗೆಜ್ಜೆ, ತಾಳಗಳಿಂದ ಚೇತನ ಧ್ವನಿ ಹೊರಡಿಸುವ. ಈ ಮೂರು ವಿಧದ ಧ್ವನಿಗಳನ್ನು ಭಗವಂತನ ಗುಣ, ಕ್ರಿಯಾ ಹೇಳುವ ನಾಮಗಳ ರೂಪದಲ್ಲಿ ಸದಾ ಅನುಸಂಧಾನ ಮಾಡುವವರು ಮುಖ್ಯಪ್ರಾಣದೇವರು ಮಾತ್ರ. ವರ್ಣಗಳು 51 "ಅ" ದಿಂದ "ಕ್ಷ" ದ ವರೆಗೆ ಅಕ್ಷ-ಅಂದರೆ ಐವತ್ತೊಂದು ವರ್ಣ. ಇವುಗಳಲ್ಲಿ ಶ್ರೀಹರಿ ಇದ್ದು ರಮತೆ. ಆದ್ದರಿಂದ "ಅಕ್ಷರ" ಎಂಬ ಶಬ್ದ. ಸಕಲ ವರ್ಣ ಪ್ರತಿವಾದ್ಯ ಎಂಬರ್ಥ ಹೇಳುವುದು. ಸಕಲ ಧ್ವನಿ, ವರ್ಣ, ಶಬ್ದ, ವಾಕ್ಯಗಳು ಹರಿಯ ನಮಗಳು. ಹೀಗೆ ತಿಳಿಯುವ ಯೋಗ್ಯತೆ ಉಳ್ಳವರು ಮುಖ್ಯಪ್ರಾಣರು ಮಾತ್ರ, ಅದರಂತೆ ತಿಳಿದು ಉಪಾಸನೆ, ಸಾಧನೆ ಮಾಡುವವರು. ಪ್ರಣವದ ಈ ಬಗೆಯ ವ್ಯಾಪಕತೆ ಅರ್ಥಾನುಸಂಧಾನ ಮಾಡುವವರೂ ಮುಖ್ಯಪ್ರಾಣರು ಮಾತ್ರ, ಇದೇ ಋಜುಯೋಗಿಯ ಸ್ವರೂಪ ಸಾಧನಗಳು. ಈ ರೀತಿಯ ಉಪಾಸನೆಯನ್ನು ಶ್ರೀ ಮಧ್ವರು ಪ್ರಾಣದೇವರು ಸದಾ ಮಾಡುತ್ತಿರುವುದರಿಂದ ದೇವರು ಅವರಿಗೆ ಅತ್ಯುನ್ನತ ಫಲ ನೀಡಿದ "**ಅನಂತವೇದ ಪ್ರತಿಪಾದ್ಯತ್ವ**" ವೆಂಬ ಅಸಾಧಾರಣ ಫಲ ಪ್ರಾಣದೇವರಿಗೆ ನೀಡಿದ. ಅಪೌರುಷೇಯ ವೇದ ಪ್ರತಿಪಾದ್ಯತ್ವ ಮುಖ್ಯಪ್ರಾಣದೇವರ ಅದ್ಭುತ ಹೆಗ್ಗಳಿಕೆ.

ಅವರ ಉಪಾಸನೆಗೆ ದೇವರು ನೀಡಿದ ಮಹಾಫಲ. ಅದಕ್ಕಾಗಿ ಎಲ್ಲರೂ ಪರಮಾತ್ಮನನ್ನು ಸಕಲ ಶಬ್ದ ವಾಚ್ಯ-ಎಂದು ತಿಳಿಯಬೇಕು. ಯಥಾಶಕ್ತಿ. "ಸತ್ ಚಿತ್, ಆನಂದ, ಆತ್ಮಾ" ಎಂದು ಉಪಾಸಿಸಬೇಕು. ಆಗ ದೇವರೂ ನಮಗೆ, ನಮ್ಮ ಬಗ್ಗೆ ನಾಲ್ಕು ಉತ್ತಮ ಮಾತುಗಳು, ಪ್ರಶಂಸೆ ದೊರೆಯುವಂತೆ ಮಾಡುವನು. ಹೀಗೆ ಪ್ರಾತಃಸಂಕಲ್ಪಗದ್ಯವು ವಾಯುದೇವರ, ನಮ್ಮ ಮೂಲ ಗುರುಗಳ ಸ್ವರೂಪ, ಸಾಧನ, ಫಲಗಳನ್ನು ತಿಳಿಸುವದು. ನಮಗೆಲ್ಲ ಸಾಧನದ ಬಗೆ ತಿಳಿಸಿ, ಅದರಿಂದ ದೊರೆಯುವ ಫಲಗಳನ್ನೂ ತನ್ನ ಪ್ರತಿ ಪದಗಳಿಂದ ಗದ್ಯವು ತಿಳಿಸುವುದು.

ಶ್ರೀ ರಾಘವೇಂದ್ರಸ್ವಾಮಿಗಳು ಈ ಕೃತಿಯಿಂದ ನಮಗೆ ಸಕಲಶಾಸ್ತ್ರಗಳಸಾರ, ಪ್ರಮೇಯ ಗಳ ಪರಿಚಯ, ಸಾಧನದ ದಾರಿ, ಉಪಾಸನೆಯ ಬಗೆ ತಿಳಿಸಿರುವರು. ಸಕಲ ತತ್ತ್ವಗಳನ್ನು ಸಂಕ್ಷೇಪವಾಗಿ ಸ್ಮರಿಸಲು ಅನುಕೂಲಮಾಡಿಕೊಟ್ಟಿರುವರು. ವಿಸ್ತಾರವಾದ ವಿಷಯಗಳನ್ನು ಸಂಕ್ಷೇಪವಾಗಿ ನಿರೂಪಿಸುವದರಲ್ಲಿ ಸಿದ್ಧಹಸ್ತರು ಶ್ರೀರಾಘವೇಂದ್ರಸ್ವಾಮಿಗಳು.

ಇಲ್ಲಿಯ ಸಂಸ್ಕೃತ ಗದ್ಯ ಹೃದ್ಯವಾಗಿದೆ. ಮಧುರ ಪದಗಳು, ಅರ್ಥ ಗರ್ಭಿತ ಶಬ್ದಗಳು, ಗಂಭೀರ ಸರಳವಾಕ್ಯಗಳು. ಸಂಸ್ಕೃತಬಲ್ಲವರ ಹೃದಯ ರಂಜಿಸುವವು. ಇಂದಿನ ದಿನ ಮಾಡುವ ಕರ್ಮಗಳ ಸಂಕಲ್ಪ, ವಿದ್ಯಾಸಂಬಂಧಿಗಳು, ದೇಹ ಸಂಬಂಧಿಗಳಿಂದ ಮಾಡಿಸುವ ಸಂಕಲ್ಪ, ಕರ್ಮಗಳ ಸಂಬಂಧಿಯಾದ ಸಕಲ ವಿಜ್ಞಾನ ಇಲ್ಲಿ ತುಂಬಿದೆ. ಇದು ಮಾಧ್ವರಿಗೆ ದೊರಕಿದ ಸಿದ್ಧ ಮಂತ್ರ, ಪ್ರಸಿದ್ಧಮಂತ್ರ, ಇದೊಂದು ಮೌಲಿಕಕೃತಿ. ಇಂತಹ ಅಪರೂಪದ, ಅನುಸಂಧಾನದ, ಅದ್ಭುತ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದ ಠಾಜರ್ಷಿಗಳು, ಮಧ್ವಶಾಸ್ತ್ರ ಸಂಪನ್ನರಾದ ಶ್ರೀ ಭೀಮರಾಯರು. ವೃತ್ತಿಯಲ್ಲಿ ಪ್ರಸಿದ್ಧ ನ್ಯಾಯವಾದಿಗಳು, ಪ್ರವೃತ್ತಿಯಲ್ಲಿ ದೊಡ್ಡ ವಿದ್ವಾಂಸರು. ಬಹುಶ್ರುತರು. ಸದಾ ಅಧ್ಯಯನ ಶೀಲರು. ಪಾಠ ಪ್ರವಚನ ನಿರತರು. **"ಯುಕ್ತಿಮಲ್ಲಿಕಾ, ಸತ್ತತ್ವರತ್ನಮಾಲಾ, ವಿಷ್ಣುರಹಸ್ಯಾದಿ ಮೂವತ್ತಕ್ಕೂ ಹೆಚ್ಚು ಗ್ರಂಥಗಳನ್ನು"** ಅನ್ವಯಾರ್ಥ ಸಹಿತ ಅನುವಾದಿಸಿದವರು. ಅನೇಕ ಸ್ವತಂತ್ರ ಗ್ರಂಥಗಳನ್ನು ರಚಿಸಿದವರು. ದಾವಣಗೇರಿಯಲ್ಲಿ ಮಾಧ್ವಸಂಘವನ್ನು ಸಂಸ್ಥಾಪಿಸಿದವರು. ಕಟ್ಟಿ ಬೆಳೆಸಿದವರು. ಪಾಠ ಪ್ರವಚನಗಳಿಂದ ನಿರಂತರ ಧರ್ಮ ಜಾಗೃತಿ ಮಾಡಿದವರು. **ಶಾಸ್ತ್ರಗ್ರಂಥಗಳನ್ನು ಕನ್ನಡಕ್ಕೆ ತರುವ ಕಾರ್ಯ ಇನ್ನೂ ಪ್ರಾರಂಭವಾಗದೆ ಇದ್ದಾಗ ಪಂಡಿತವರ್ಯ ಭೀಮರಾಯರು ಈ ಕಾರ್ಯಕ್ಕೆ ಆರು ದಶಕಗಳ ಹಿಂದೆಯೇ ಕೈಹಾಕಿದ್ದು ಸಾಹಸವೇ ಸರಿ.** ಇಂದು ಅವರ ದಾರಿಯನ್ನು ಅನುಸರಿಸಿ ಬಹಳ ಜನರಿಂದ ಅನುವಾದ ಕಾರ್ಯಗಳು ಮುಂದುವರೆದಿದೆ. ದಿ॥ ಭೀಮರಾಯರು ವೈಕುಂಠ ವರ್ಣನೆ ತತ್ತ್ವಸುವ್ವಾಲಿ, ಅನೇಕ ಸುಳಾದಿಗಳಿಗೂ ವ್ಯಾಖ್ಯಾನ ಮಾಡಿದ್ದಾರೆ. ನಾಸ್ತಿಕ್ಯನಿರಾಸ, ಆಗಮ ಪ್ರಾಮಾಣ್ಯ, ಮೊದಲಾದ ಸ್ವತಂತ್ರ ಕೃತಿಗಳನ್ನು ರಚಿಸಿದ್ದಾರೆ. ಮಾಧ್ವಸಮಾಜಕ್ಕೆ ಭೀಮರಾಯರ ಉಪಕಾರ ಮರೆಯಲಾರದ್ದು. ಪಂ. ಬೀಮರಾಯರ ಎಲ್ಲ ಕೃತಿಗಳ ಮರುಮುದ್ರಣ ಕಾರ್ಯ ಭರದಿಂದ ನಡೆಯುತ್ತಿದೆ. ಪಂ. ಭೀಮರಾಯರ ಅಳಿಯಂದಿರು ಶ್ರೀ ಆರ್. ಜಗನ್ನಾಥರಾಯರು ವಕೀಲರು, ವಿಮರ್ಶಕರು, ಪರಮಧಾರ್ಮಿಕರು, ಅವರು ಈ ಮರುಮುದ್ರಣದ ಕಾರ್ಯದಲ್ಲಿ ಮುಂದಾಳತ್ವ ವಹಿಸಿರುವುದು ಅಭಿನಂದನೀಯ. ಎಂಭತ್ತರ ಗಡಿಯಲ್ಲಿಯೂ ಶ್ರೀಜಗನ್ನಾಥ ರಾಯರ ಉತ್ಸಾಹ, ಲೇಖನ, ಸಂಶೋಧನ ನಿರಂತರವಾಗಿದೆ. ಮಾವಂದಿರ ಕೃತಿಗಳನ್ನೆಲ್ಲ ಪ್ರಕಾಶಿಸಿ ಸಮಾಜದ ಶ್ರೇಯಸ್ಸಿಗೆ ಕಾರಣರಾಗಲಿ ಮತ್ತು ಸಮಿತಿ ಸದಸ್ಯರುಗಳಿಗೆ ಶುಭವುಂಟಾಗಲಿ ಎಂದು ದೇವರಲ್ಲಿ ಪ್ರಾರ್ಥಿಸುವೆ. **ಪ್ರೊ॥ ಪಂ. ಜಯತೀರ್ಥಾಚಾರ್ಯ ವಾ ಮಳಗಿ**

# ಶ್ರೀಸರ್ವಜ್ಞಾಚಾರ್ಯ ಸೇವಾ ಸಂಘ (ರಿ), ದಾವಣಗೆರೆ

## ಪ್ರಕಾಶಕರ ಅರಿಕೆ

**ನ ಮಾಧವಸಮೋ ದೇವಃ ನ ಚ ಮಧ್ವಸಮೋ ಗುರುಃ ।**
**ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥**

ಕಳೆದ ಏಪ್ರಿಲ್ ಮಾಸದಲ್ಲಿ "**ವಿಷ್ಣುರಹಸ್ಯ**" ಪುಸ್ತಕವನ್ನು (ಪುಟಗಳು 1375) ಮರುಪ್ರಕಟಣೆ ಮಾಡಿ ತತ್ವಜ್ಞಾನ ಪ್ರಸಾರ ಕಾರ್ಯದಲ್ಲಿ ಮುಂದುವರೆದಿದ್ದೇವೆ ಎಂದು ತಿಳಿಸುವುದಕ್ಕೆ ಹರ್ಷವಾಗುತ್ತದೆ. ಈಗ "**ಪ್ರಾತಃಸಂಕಲ್ಪಗದ್ಯಮ್**" ಎಂಬ ಪುಸ್ತಕವನ್ನು ಮರುಮುದ್ರಣ ಮಾಡಿ ಆಸ್ತಿಕ ವರ್ಗದ ಮುಂದಿಡುತ್ತಿದೇವೆ.

ಸಂಘ ಸ್ಥಾಪನೆಗೊಂಡಿದ್ದು 1934ನೇ ಇಸ್ವಿಯಲ್ಲಿ. ಅಂದಿನಿಂದ 82ವರ್ಷಗಳಷ್ಟು ಅವಧಿಯಲ್ಲಿ ಮಾಧ್ವ ಸಮಾಜದ ಧಾರ್ಮಿಕ ಮತ್ತು ತತ್ವ ಪ್ರಚಾರಗಳ ವೃತ್ತದಲ್ಲಿ ಸಂಘ ತನ್ನದೇ ಆದ ಒಂದು ಸ್ಥಾನವನ್ನು ಪಡೆದುಕೊಂಡಿದೆ. ಆಸ್ತಿಕ ವರ್ಗದ ಪ್ರೋತ್ಸಾಹವೇ ಈ ರೀತಿಯ ಸ್ಥಾನ ಪಡೆಯುವುದಕ್ಕೆ ಕಾರಣವಾಗಿದೆ. ಈ ಪುಸ್ತಕದ ಹಿಂದಿನ ಪ್ರಕಟನೆಯ (ಫೆಬ್ರವರಿ –2013) ಪ್ರಕಾಶಕರ ಅರಿಕೆಯಲ್ಲಿ ಗ್ರಂಥದ ಪರಿಚಯಾತ್ಮಕ ಲೇಖನವಿದೆ. ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀ ಪಾದಂಗಳವರು ನೀಡಿರುವ ಆಶೀರ್ವಚನವಿದೆ. ಗ್ರಂಥದ ಬಗೆಗೆ ಮತ್ತು ಅದರ ಅನುವಾದದ ಬಗ್ಗೆ ಮಾಹಿತಿಗಳು ಅಂದು ಪ್ರಕಟಿಸಿದ ಪುಸ್ತಕದ ಪ್ರಾರಂಭದ ಪುಟಗಳಲ್ಲಿವೆ. ಆ ಪುಟಗಳಲ್ಲಿರುವುದನ್ನು ಈ ಪುಸ್ತಕದಲ್ಲಿಯೂ ಮರು ಮುದ್ರಣ ಮಾಡಿದ್ದೇವೆ.

ಶಾಸ್ತ್ರಗಳ ಅರಿವಿನಿಂದಲೇ ಭಗವಂತನ ಅದ್ಭುತ ಮಹಿಮೆಯ ಜ್ಞಾನ ಮತ್ತು ತ್ರೈಲೋಕ್ಯಾಚಾರ್ಯರಾದ ಪ್ರಾಣದೇವರ ಮಹಿಮಾತಿಶಯಗಳ ಜ್ಞಾನ ಇವುಗಳ ಸಂಪಾದನೆಯಾಗುತ್ತದೆ. ಈ ರೀತಿಯ ಶಾಸ್ತ್ರ ಸಹಕೃತ ಜ್ಞಾನದೊಂದಿಗೆ ಸತ್ಕರ್ಮಾಚರಣೆಯನ್ನು ಮಾಡುವುದರಿಂದ ಮತ್ತು ಇದರ ಪೂರ್ವದಲ್ಲಿ ಸೂಕ್ತವಾಗಿ "ಸಂಕಲ್ಪ" ಹೇಳುವುದರಿಂದ ಉತ್ತಮ ಫಲ ಲಭ್ಯವಾಗುತ್ತದೆ. ಈ ಕ್ರಮದ ಫಲವನ್ನು ಸಾಧಕರಿಗೆ ದೊರಕಿಸಿಕೊಡುವುದಕ್ಕೋಸ್ಕರವೇ ಕರುಣಾಳುಗಳಾದ ಶ್ರೀರಾಯರು "**ಪ್ರಾತಃಸಂಕಲ್ಪಗದ್ಯ**"ವನ್ನು ರಚಿಸಿ ಕೊಟ್ಟಿರುತ್ತಾರೆ. ಈ ಗದ್ಯವು ಶಾಸ್ತ್ರ ರಹಸ್ಯ ಗಳುದ್ದಾಗಿರುವುದರಿಂದ ಮತ್ತು ಅರ್ಥವನ್ನು ಅನುಸಂಧಾನಕ್ಕೆ ತಂದುಕೊಳ್ಳುವ ಅವಶ್ಯಕತೆಯನ್ನು ಮನಗಂಡು, ಕೀರ್ತಿಶೇಷ ಬಿ. ಬೀಮರಾವ್ (ದಾವಣಗೆರೆ) ಇವರು ಕನ್ನಡದಲ್ಲಿ ಅರ್ಥ, ತಾತ್ಪರ್ಯ, ವಿಶೇಷಾಂಶಗಳನ್ನು ತಮ್ಮ ವಿಶಿಷ್ಟಶೈಲಿಯಲ್ಲಿ ಬರೆದು ಕೊಟ್ಟಿದ್ದಾರೆ. ನಿತ್ಯದಲ್ಲಿ ಪಠಿಸಬೇಕಾಗಿರುವ ಈ ಗದ್ಯವನ್ನು ಅರ್ಥೈಸಿಕೊಳ್ಳುವ ಅವಶ್ಯಕತೆ ಇರುವುದರಿಂದ ಮೇಲೆ ತಿಳಿಸಿದಂತೆ ಅರ್ಥ, ತಾತ್ಪರ್ಯಗಳು ಆಸ್ತಿಕರಿಗೆ ಅತ್ಯಂತ ಉಪಯುಕ್ತವಾಗಿದೆ. ಇದನ್ನು ಓದಿದವರು ತಮ್ಮ ಸ್ನೇಹಿತರಿಗೆ ಉಪಯೋಗ ವಾಗುವಂತಹ ಪುಸ್ತಕವಾಗಿರುತ್ತದೆ ಎಂದು ಈ ಪುಸ್ತಕದ ಬಗೆಗೆ ತಿಳಿಸಿಕೊಟ್ಟರೆ, ತತ್ವಜ್ಞಾನದ ಪ್ರಸಾರ ಉತ್ತಮವಾಗುತ್ತದೆ.

ಚೆನ್ನೈನ ವೆಸ್ಟಮಾಂಬಲಮ್‌ನಲ್ಲಿರುವ "ಮಾಧ್ವಸಮಾಜವು" ಈ ಪುಸ್ತಕವನ್ನು ತಮಿಳು ಭಾಷೆಯಲ್ಲಿ ತರ್ಜುಮೆ ಮಾಡಿ ಪ್ರಕಟಿಸಿದ್ದಾರೆ. ಇದು ಸಂಘ ಹೆಮ್ಮೆ ಪಡುವ ವಿಷಯ.

ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದ **ಪಂ॥ ಜಯತೀರ್ಥಾಚಾರ್ಯ ಮಳಗಿ,** ಧಾರವಾಡ ಇವರು ನಮ್ಮ ಕೋರಿಕೆಯನ್ನು ಮನ್ನಿಸಿ, ಈ ಪುಸ್ತಕಕ್ಕೆ ಮುನ್ನುಡಿಯನ್ನು ನೀಡಿರುತ್ತಾರೆ. ತತ್ವಜ್ಞಾನವನ್ನು ಸಂಪಾದಿಸುವುದಕ್ಕೆ ಜಿಜ್ಞಾಸುಗಳಿಗೆ ಉಪಯೋಗವಾಗುವಂತಹ ಅಂಶಗಳು ಈ ಮುನ್ನುಡಿಯಲ್ಲಿದೆ. ಆಕಾಂಕ್ಷೆಯುಳ್ಳವರಿಗೆ ಜ್ಞಾನಗಂಗೆಯನ್ನು ಹರಿಸುವ ಕ್ರಮವನ್ನು ಈ ವಿದ್ವಾಂಸರು ಚೆನ್ನಾಗಿ ಬಲ್ಲವರು. ತತ್ವಪ್ರಚಾರದಲ್ಲಿ ಅನುಭವವುಳ್ಳವರು, ಉತ್ತಮ ಲೇಖಕರು ಮತ್ತು ಉತ್ತಮ ವಾಗ್ಮಿಗಳು, ಸಂಘದ ಮೇಲೆ ಅಭಿಮಾನವುಳ್ಳವರಾಗಿದ್ದಾರೆ. ಆಚಾರ್ಯರಿಗೆ ಈ ಮೂಲಕ ನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಸಂಸ್ಥೆಯ ಸ್ಥಾಪಕರಾದ ದಿ॥ ಭೀಮರಾವ್‌ರವರ ಕುಟುಂಬ ವರ್ಗದಲ್ಲಿರುವ ಚಿ॥ ಪವನ್‌ಕುಮಾರ್ ಮತ್ತು ಸೌ॥ ಕೀರ್ತನ ದಂಪತಿಗಳು ಈ ಪ್ರಕಟನೆಗೆ ಪೂರ್ತಾ ನೆರವು ನೀಡಿರುತ್ತಾರೆ. ಅವರಿಗೆ ಕೃತಜ್ಞತೆಗಳು. ಅಂದವಾಗಿ ಮುದ್ರಣ ಮಾಡಿ ಸಕಾಲಕ್ಕೆ ಒದಗಿಸಿರುವ **ಪರಿಮಳ ಮುದ್ರಣಾಲಯದ** ಮಾಲೀಕರು, ಸಿಬ್ಬಂದಿಗಳಿಗೆ ಕೃತಜ್ಞತೆಗಳು.

ಆರ್. ಜಗನ್ನಾಥರಾವ್

ಮೇ–2016 ಸಂಘದ ಕಾರ್ಯಕಾರಿ ಸಮಿತಿ ಪರವಾಗಿ

---

**ವ್ಯಾಖ್ಯಾನದಲ್ಲಿ ಉಪಯೋಗಿಸಿರುವ ಗ್ರಂಥಗಳು ಮತ್ತು ಅವುಗಳ ಸಂಜ್ಞೆಗಳ ವಿವರ**

| ಗ್ರಂಥ | | ಸಂಜ್ಞೆ |
|---|---|---|
| ಬ್ರಹ್ಮಸೂತ್ರ ಭಾಷ್ಯ | ...................... | (ಭಾ) |
| ಬೃಹದಾರಣ್ಯ ಭಾಷ್ಯ | ...................... | (ಬೃ.ಭಾ.) |
| ವಿಷ್ಣುರಹಸ್ಯ | ...................... | (ವಿ.ರ.) |
| ಭಾಗವತ ತಾತ್ಪರ್ಯ ನಿರ್ಣಯ | ...................... | (ಭಾಗ.ತಾ.) |
| ಮಹಾಭಾರತ ತಾತ್ಪರ್ಯ ನಿರ್ಣಯ | ...................... | (ಭಾ.ತಾ.) |
| ತಂತ್ರಸಾರ ಸಂಗ್ರಹ | ...................... | (ತ.ಸ) |
| ಅನುವ್ಯಾಖ್ಯಾನ | ...................... | (ಅನು.ವ್ಯಾ) |
| ಸತ್ತತ್ವರತ್ನಮಾಲಾ | ...................... | (ಸ.ರ.ಮಾ) |
| ಪ್ರಮೇಯ ವಿವರಣೆ | ...................... | (ಪ್ರ.ವಿ.) |
| ತಾತ್ಪರ್ಯ | ........................ | (ತಾ.) |

**ಸೂಚನೆ: ಕೆಲವು ಸ್ಥಳಗಳಲ್ಲಿ ಉದಾಹೃತ ಗ್ರಂಥಗಳ ಪೂರ್ಣವಾದ ಹೆಸರನ್ನೂ ಕಂಸದಲ್ಲಿ ಸೂಚಿಸಲಾಗಿದೆ.**

## ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ, ದಾವಣಗೆರೆ

## ದ್ವಿತೀಯ ಪ್ರಕಟನೆಯಲ್ಲಿರುವ - ಪ್ರಕಾಶಕರ ಅರಿಕೆ

**ನ ಮಾಧವಸಮೋ ದೇವೋ ನ ಚ ಮದ್ವಸಮೋ ಗುರುಃ।**

**ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್॥**

ಶ್ರೀಮದ್ರಾಘವೇಂದ್ರತೀರ್ಥರಿಂದ ರಚಿತವಾಗಿರುವ ಐವತ್ತಕ್ಕೂ ಮೀರಿದ ಪ್ರೌಢ-ಗ್ರಂಥಗಳಲ್ಲಿ 'ಪ್ರಾತಃಸಂಕಲ್ಪಗದ್ಯಮ್' ಗಾತ್ರದಲ್ಲಿ ಚಿಕ್ಕದಾದರೂ ಶಾಸ್ತ್ರದಸಾರವುಳ್ಳ-ದ್ದಾಗಿದೆ. ವ್ಯಾಖ್ಯಾನವನ್ನು ಗಮನಿಸಿದಾಗಲೇ ಆ ಕೃತಿಯಲ್ಲಿ ತತ್ವ-ಪ್ರಮೇಯಗಳು ಅಡಕವಾಗಿರುವ ವಿಷಯ ತಿಳಿಯುತ್ತದೆ. ಪೂರ್ವಪ್ರಕಟನೆಗಳಿಗೆ ನೀಡಲಾದ ಮುನ್ನುಡಿ-ಯನ್ನೂ ಈ ಪ್ರಕಟನೆಯಲ್ಲಿ ಒದಗಿಸಿದ್ದೇವೆ. ಈ ಮುನ್ನುಡಿಗಳಲ್ಲಿ ಪುಸ್ತಕದ ಬಗೆಗೆ ಹಲವಾರು ಪ್ರಶಂಸಾರ್ಹ ಮಾತುಗಳಿವೆ. ಈ ಹಿನ್ನೆಲೆಯಲ್ಲಿ ಕೃತಿಯ ಮಹತ್ವವನ್ನು ವಾಚಕರು ಸುಲಭವಾಗಿ ತಿಳಿದುಕೊಳ್ಳಬಹುದು.

ಆಸ್ತಿಕರಲ್ಲಿ 'ಭಗವಂತನಿದ್ದಾನೆ-ಅವನಲ್ಲಿ ಭಕ್ತಿ ಮಾಡಬೇಕು' ಎಂಬ ಸದ್ಭಾವನೆ ಸಾಮಾನ್ಯವಾಗಿರುತ್ತದೆ. 'ಮಾನವ ಜನ್ಮ ಬಲು ದೊಡ್ಡದು' ಎಂದು ಹರಿದಾಸರ ವಾಣಿಯನ್ನೂ ಅವರು ಕೇಳಿರುತ್ತಾರೆ. ಆದರೆ ಮಾನವ ಶರೀರಕ್ಕೆ ಏಕೆ ಈ ಪ್ರಾಶಸ್ತ್ಯ-ವಿದೆ? ಈ ಅಂಶವನ್ನು ಚಿಂತನ-ಮಂಥನ ಮಾಡುವ ಪ್ರಯತ್ನ ಸಾಮಾನ್ಯವರ್ಗ-ದಲ್ಲಿರುವವರಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ ಮತ್ತು ಬದುಕಿನ ಗುರಿ, ಸಾರ್ಥಕತೆ ಮುಂತಾದವುಗಳ ಬಗೆಗೆ ತಿಳುವಳಿಕೆಯನ್ನು ಸಂಪಾದಿಸಬೇಕೆಂಬ ಹಂಬಲವಿಲ್ಲದೆಯೇ, ಅವುಗಳ ಬಗ್ಗೆ ತಾತ್ಸಾರವಿರುತ್ತದೆ. ಶರೀರವುಳ್ಳ ಎಲ್ಲ ಜೀವರು (ಮಾನವ, ಪಶು-ಪಕ್ಷಿಗಳು) ಇಚ್ಛಾ, ಜ್ಞಾನ, ಪ್ರವೃತ್ತಿಗಳನ್ನು ಉಳ್ಳವರಾಗಿದ್ದಾರೆ ಮತ್ತು ಬದುಕು- ಭೋಗ ಗಳಲ್ಲಿ ಆಸಕ್ತಿ ಹೊಂದಿರುತ್ತಾರೆ. ಆದರೆ ಮಾನವ ಶರೀರದಲ್ಲಿ ಭಗವಂತನು ಅಳವಡಿಸಿ ರುವ ಬುದ್ಧಿ, ಚಿಂತನಾಸಾಮರ್ಥ್ಯ ವಿಶಿಷ್ಟಪೂರ್ಣವಾಗಿದೆ. ಈ ಅಂಶವನ್ನು 'ಮಾನವ ಜನ್ಮ ದೊಡ್ಡದು' ಎನ್ನಲು ಕಾರಣವೆಂದು ಸ್ಥೂಲವಾಗಿ ನಿಶ್ಚಯಿಸಬಹುದು. ಇಂತಹ ಜನ್ಮ ಹೊಂದಿರುವ ಸಾಧಕರು, ತಮ್ಮ ಕರ್ತವ್ಯವನ್ನು ಅರಿತು ಪ್ರಾತಃಕಾಲ ಸಮಯದಲ್ಲಿ ಸೂರ್ಯನ ಪ್ರಕಾಶದಿಂದ ದೈನಂದಿನ ಕಾರ್ಯಗಳಲ್ಲಿ ತೊಡಗುವಂತೆ, ತಮ್ಮೊಳಗೂ ಅಜ್ಞಾನದ ಕತ್ತಲೆಯನ್ನು ನಾಶಪಡಿಸಿಕೊಂಡು, ಜ್ಞಾನದ ಬೆಳಕನ್ನು ಹೆಚ್ಚಿಸಿಕೊಳ್ಳುವಂತೆ ಶ್ರೀರಾಯರು ರಚಿಸಿಕೊಟ್ಟಿರುವ ಅಪೂರ್ವಕೃತಿಯನ್ನು ಉಪಯೋಗಿಸಿಕೊಳ್ಳಬೇಕು. ಆ ಕೃತಿಯ ಭಾವಾರ್ಥದೊಂದಿಗೆ ಪಾರಾಯಣವು 'ಮಾನವನ ಜನ್ಮವನ್ನು ದೊಡ್ಡದನ್ನಾಗಿ' ಮಾಡುತ್ತದೆ. ಪಾರಾ ಎಂದರೆ ದಾಟುವುದು, ಅಯನ ಎಂದರೆ ಆಶ್ರಯ. ಕಷ್ಟಗಳಿಂದ (ಅಜ್ಞಾನ ಮುಂತಾದವುಗಳಿಂದ) ದಾಟಿಸು ಎಂದು ಶ್ರದ್ಧೆವುಳ್ಳವರಾಗಿ ಭಗವಂತನನ್ನು ಪ್ರಾರ್ಥನೆಯೊಂದಿಗೆ ಪಠಣ ಮಾಡುವುದೇ ಪಾರಾಯಣ ಎಂದೆನಿಸಿದೆ.

ಹೇಗೆ ಈ ಕೃತಿಯು ಅಪೂರ್ವವೆಂದೆನಿಸಿದೆಯೋ, ಹಾಗೆಯೇ 'ಅಪೂರ್ವ' ಎಂದು ಗುರುತಿಸುವುದಕ್ಕೆ ಬೇಕಾಗಿರುವ ಪ್ರಮೇಯ ವಿಶೇಷಾಂಶಗಳನ್ನೂ ಅರ್ಥ, ತಾತ್ಪರ್ಯ-ಗಳೊಂದಿಗೆ ವಿಶದಪಡಿಸಿ ಕೀರ್ತಿಶೇಷ ಧಾವಣಗೆರೆ ಭೀಮರಾಯರು ಸಾಧನವರ್ಗಕ್ಕೆ ಅನುಕೂಲಮಾಡಿಕೊಟ್ಟಿದ್ದಾರೆ. ಅವರು 'ಪ್ರಸ್ತಾವನೆ'ಯಲ್ಲಿ ಕೃತಿಯ ಅವತರಣಿಕೆಯನ್ನು ಒದಗಿಸಿದ್ದಾರೆ. (ಕೃತಿಯ ಹೊರನೋಟದಿಂದ ತಿಳಿಯಬಹುದಾದದ್ದು: (೧) ಶ್ರೀಮದಾ-ನಂದತೀರ್ಥರಿಗೆ (೨) ಶ್ರೀರಾಮಚಂದ್ರದೇವರಿಗೆ ಮತ್ತು (೩) ಶ್ರೀಮುಖ್ಯಪ್ರಾಣದೇವ-ರಿಗೆ ವಾಕ್ಯದ ವಿಶೇಷಣಗಳು ಅನ್ವಯವಾಗುತ್ತವೆ. ಪ್ರಾರಂಭದ ಪದದಿಂದ "ಶ್ರೀಮದಾನಂದತೀರ್ಥ ಶ್ರೀಮಚ್ಚರಣಾನಾಂ" ಎಂಬ ಪದದವರೆವಿಗೆ ೩೯ ವಿಶೇಷಣ-ಗಳುಳ್ಳ ಒಂದನೇ ಭಾಗ, ಅನಂತರದ ಪದ 'ಅಂತರ್ಯಾಮಿ'ಯಿಂದ 'ಸೀತಾಪತೇ ಶ್ರೀರಾಮಚಂದ್ರ' ಪದದವರೆವಿಗೂ ೭೦ ವಿಶೇಷಣಗಳುಳ್ಳ ೨ನೇ ಭಾಗವೆಂದೂ, ಶ್ರೀಮುಖ್ಯಪ್ರಾಣದೇವರಿಗೆ ಉಳಿದ ೩೯ ವಿಶೇಷಣಗಳುಳ್ಳದ್ದು ಅನ್ವಯವಾಗುವ ಶಬ್ದ-ಗಳದ್ದು ೩ ನೇ ಭಾಗವೆಂದೂ ಪರಿಗಣಿಸಬಹುದು). ಕೃತಿಯಲ್ಲಿರುವ ಸ್ವಾರಸ್ಯವನ್ನು ಎಲ್ಲ ಹಂತದಲ್ಲಿರುವ ಜಿಜ್ಞಾಸುಗಳಿಗೆ ಎತ್ತಿತೋರಿಸುವುದಕ್ಕೋಸ್ಕರ ದಿ॥ ಭೀಮರಾಯರು ೨೯ ಉಪವಾಕ್ಯಗಳನ್ನಾಗಿ ವಿಂಗಡಿಸಿ ತಾತ್ಪರ್ಯಾದಿಗಳನ್ನು ಸುಲಭಶೈಲಿಯಲ್ಲಿ ಬರೆದಿದ್ದಾರೆ.

ಓದುಗರ ಮನಮುಟ್ಟುವಂತೆ ಮತ್ತು ಅನುಷ್ಠಾನಕ್ಕೂ ಪ್ರವೃತ್ತಿ ಉಂಟಾಗುವಂತೆ ಕೃತಿಯ ಬಗ್ಗೆ ವಿಶೇಷವಾಗಿ ಬೆಳಕನ್ನು ಪ್ರಸರಿಸಿರುವ ಶ್ರೀಮದುತ್ತರಾದಿಮಠಾಧೀಶರಾದ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ತಮ್ಮ ಅನುಗ್ರಹ ಸಂದೇಶ ನೀಡಿರುವುದು ನಮ್ಮ ಭಾಗ್ಯವಾಗಿದೆ. ಕರ್ನಾಟಕ, ತಮಿಳುನಾಡು, ಇತ್ಯಾದಿ ಪ್ರದೇಶಗಳಲ್ಲಿರುವ ಧಾರ್ಮಿಕ ಕೇಂದ್ರಗಳಲ್ಲಿ ಏರ್ಪಡಿಸಲಾಗುವ ಉತ್ಸವಗಳ ಸಮಾವೇಶಗಳಲ್ಲಿ ಶ್ರೀಶ್ರೀಗಳವರ ಸನ್ನಿಧಾನಕ್ಕೋಸ್ಕರ ಅಲ್ಲಿಯ ಕಾರ್ಯಕರ್ತರು ಶ್ರೀ ಶ್ರೀಗಳವರಲ್ಲಿ ಬೇಡಿಕೆಯನ್ನು ಸಲ್ಲಿಸಿರುತ್ತಾರೆ. ಈ ರೀತಿ ಶ್ರೀಶ್ರೀಗಳವರು ಬಿಡುವಿಲ್ಲದಿರುವ ಕಾರ್ಯಕ್ರಮಗಳಲ್ಲಿದ್ದರೂ ಮತ್ತು ಸಂಚಾರದಲ್ಲಿದ್ದರೂ ಸಂಘದ ಕೋರಿಕೆಯನ್ನು ಮನ್ನಿಸಿ ಚೆನ್ನೈ ಊರಿನಿಂದ ಒಂದು ಸಂದೇಶವನ್ನು ಅನುಗ್ರಹಿಸಿ ಕಳುಹಿಸಿದ್ದಾರೆ. ಅವರಿಗೆ ಭಕ್ತಿಯುತ ಪ್ರಣಾಮಗಳನ್ನು ಅರ್ಪಿಸುತ್ತೇವೆ. ಈ ಪುಸ್ತಕ ಹೊರಬರುವುದಕ್ಕೆ ಅನೇಕರು ಸಹಕರಿಸಿದ್ದಾರೆ ಅವರೆಲ್ಲರಿಗೂ ಕೃತಜ್ಞತೆಗಳು.

ಮಧ್ವನವಮಿ (೧೯-೦೨-೨೦೧೩)

ಆರ್. ಜಗನ್ನಾಥರಾವ್
ಸಂಘದ ಕಾರ್ಯಕಾರಿ ಸಮಿತಿ ಪರವಾಗಿ

# ಪ್ರಸ್ತಾವನೆ
## (ವ್ಯಾಖ್ಯಾನಕಾರರಿಂದ)

ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರು ಸಜ್ಜನಾನುಗ್ರಹಾರ್ಥವಾಗಿ ರಚಿಸಿರುವ, ಈ ಚಿಕ್ಕ ಗ್ರಂಥವು ಸಕಲ ಶಾಸ್ತ್ರಾರ್ಥವನ್ನೊಳಗೊಂಡಿದೆ. ಶ್ರೀಕೃಷ್ಣನು ಯಶೋದಾದೇವಿಗೆ ತನ್ನ ಚಿಕ್ಕಮುಖದಲ್ಲಿ ವಿಶ್ವವನ್ನೇ ತೋರಿಸಿದಂತೆ, ಸಚ್ಛಾಸ್ತ್ರ-ನಿರ್ಣೀತ ಪ್ರಧಾನ ಪ್ರಮೇಯಗಳನ್ನೆಲ್ಲ ಸಂಗ್ರಹವಾಗಿ ನಿರೂಪಿಸುವ ಅದ್ಭುತ ಗ್ರಂಥ-ವಿದು. ಮೋಕ್ಷಸಾಧನೆಗೆ ಅತ್ಯವಶ್ಯಕವಾದ ಶ್ರೀವಿಷ್ಣುಸರ್ವೋತ್ತಮತ್ವ-ವಾಯು-ಜೀವೋತ್ತಮತ್ವಗಳ ಜ್ಞಾನದಾರ್ಢ್ಯತೆಗೆ ಮೂಲವಾದ ರಹಸ್ಯಪ್ರಮೇಯಗಳನ್ನು ನಿತ್ಯಸ್ಮರಣೆಗೆ ತಂದಿತ್ತು, ಅಧಿಕಾರಿ ಜೀವನನ್ನು ಸನ್ಮಾರ್ಗದಲ್ಲಿ ಸ್ಥಿರವಾಗಿ ನಿಲ್ಲಿಸಲು ಸಮರ್ಥವಾದ ಪವಿತ್ರ ಗ್ರಂಥವಾಗಿದೆ.

ಸಾಮಾನ್ಯವಾಗಿ ಸಂಕಲ್ಪಾತ್ಮಕ ಶಬ್ದಸಮೂಹಗಳು ಏಕವಾಕ್ಯರೂಪದಿಂದಿರುತ್ತವೆ. 'ಶುಭೇ ಶೋಭನೇ... ಸಂಧ್ಯಾಮುಪಾಸಿಷ್ಯೇ' ಎಂಬ ಮುಂತಾದ ಸಂಕಲ್ಪಗಳಂತೆ, ಈ ಗ್ರಂಥವಾದರೂ ಒಂದು ವಾಕ್ಯರೂಪದಿಂದಿದೆ.

ಪ್ರತಿದಿನದಲ್ಲಿ ಪ್ರತಿಯೊಬ್ಬ ಮನುಷ್ಯನಿಂದ ಸಂಭವಿಸುವ ನಾನಾ ಕರ್ಮಗಳು, ವಿವಿಧ ಅದೃಷ್ಟ ವಿಶೇಷಗಳನ್ನು ಉತ್ಪಾದಿಸಿ, ತನ್ನಿಮಿತ್ತಗಳಾದ ವಿವಿಧ ಸುಖದುಃಖ-ಗಳನ್ನು ಕಾಲಾಂತರದಲ್ಲಿ ಅಥವಾ ಜನ್ಮಾಂತರಗಳಲ್ಲಿ ಅನುಭವಿಸಲು ಕಾರಣವಾಗು-ತ್ತವೆ. ಹಾಗಾಗದಂತೆ ಮಾಡಿಕೊಳ್ಳಲು, ಎಂದರೆ ಕರ್ಮಬಂಧಕ್ಕೊಳಗಾಗದಂತೆ ತನ್ನನ್ನು ರಕ್ಷಿಸಿಕೊಳ್ಳಲು, ಕರ್ಮಗಳನ್ನಾಚರಿಸುವುದರಲ್ಲಿರಬೇಕಾದ ಮನೋಭಾವ-ವನ್ನು (ಅನುಸಂಧಾನವನ್ನು) ಈ ಗ್ರಂಥವು ನಿರೂಪಿಸಿ, ಪ್ರತಿದಿನವೂ ಹರಿಸ್ಮರಣ-ಪೂರ್ವಕ ಹಾಸಿಗೆಯಿಂದ ಎದ್ದು, ಆಯಾ ದಿನದ ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನು ಆರಂಭಿಸುವ ಮೊದಲಿಗೇ ಮಾಡಬೇಕಾದ ಸಂಕಲ್ಪವನ್ನು (ಪ್ರತಿಜ್ಞಾಪ್ರಕಾರವನ್ನು) ವಿಧಿಸುತ್ತದೆ.

ಸಾಮಾನ್ಯವಾಗಿ ಕರ್ಮಾಚರಣೆಯಲ್ಲಿ ಕಂಡುಬರುವ ಫಲಾಶೆ ಮತ್ತು ಕರ್ತೃತ್ವಾಭಿಮಾನಿಗಳು, ಕರ್ಮಗಳು ಜೀವರಿಗೆ ಬಂಧಕವಾಗಲು ಕಾರಣವಾಗುತ್ತವೆ. ಇದರಿಂದಲೇ ಸಂಸಾರ-ದೇಹದಿಂದ ಅನ್ಯದೇಹಗಳನ್ನು ಒಂದಾದ ಮೇಲೆ ಒಂದರಂತೆ ಹೊಂದುತ್ತ ಸುತ್ತುವುದು. ಜೀವನು, ಹೀಗೆ ಹೊಂದುವ ದೇಹಗಳಲ್ಲಿ ಬಹುವಾಗಿ ದುಃಖವನ್ನೇ ಅನುಭವಿಸುತ್ತಾನೆ—ಮಧ್ಯೆ ಮಧ್ಯೆ ಕ್ಷಣಿಕವೂ ತುಚ್ಛವೂ

ಆದ ಭ್ರಮಾತ್ಮಕ ಸುಖಬಿಂದುಗಳನ್ನೂ ಹೊಂದುತ್ತಾನೆ. ಆದರೆ ಅಪೇಕ್ಷಿತ ನಿತ್ಯನಿರ್ದುಃಖಾನಂದವೆಂಬುದು ದೂರವೇ ಉಳಿಯುತ್ತದೆ. ಈ ವಿಧ ಸಂಸಾರದಿಂದ ವಿಮುಕ್ತನಾಗಿ (ಪೂರ್ಣ ಬಿಡುಗಡೆ ಹೊಂದಿ), ನಿತ್ಯ ಸುಖದ ಮಾರ್ಗದಲ್ಲಿ ಮುಂದುವರಿಯಲು, ಕರ್ಮಗಳು ಬಂಧಕವಾಗದಂತೆ ಮಾಡಿಕೊಳ್ಳಬೇಕು. ಹಾಗಾಗಲು ಕರ್ಮಾಚರಣೆಯು ಫಲಾಶಾರಹಿತವಾಗಿರಬೇಕು ಮತ್ತು ಜ್ಞಾನಪೂರ್ವಕವಾಗಿರ- ಬೇಕು; ಎಂದರೆ, ಕರ್ಮಸಾಧನಗಳಾದ ಸಕಲೇಂದ್ರಿಯಗಳ ಪ್ರೇರಕರಾದ ತತ್ವಾಭಿಮಾನಿ ದೇವತೆಗಳಿಗೂ ಅಂತಃಪ್ರೇರಕನಾದ ಶ್ರೀಮುಖ್ಯಪ್ರಾಣನು, ಶ್ರೀಹರಿ- ಪ್ರೇರಣಾನುಸಾರ ಜೀವರನ್ನು ಸ್ವಯೋಗ್ಯ ಕರ್ಮಗಳಲ್ಲಿ ಪ್ರೇರಿಸಿ, ಸರ್ವಕರ್ತನಾದ ಶ್ರೀಹರಿಯೊಂದಿಗೆ ತಾನೂ ಮಾಡಿ, ಜೀವರಿಂದ ಮಾಡಿಸುತ್ತಾನೆಂಬ ಅನು- ಸಂಧಾನವು ಪ್ರತಿಕರ್ಮದಲ್ಲಿಯೂ ಇರಬೇಕು. ಶ್ರೀಹರಿವಾಯುಗಳಿಂದ ಹೀಗೆ ಮಾಡಿಸಲ್ಪಡುವ ಕರ್ಮಗಳನ್ನು ಪರಾಧೀನಕರ್ತನಾಗಿ ತಾನು ಮಾಡುವೆನೆಂದು ತಿಳಿದು, ಸರ್ವಕರ್ಮಗಳನ್ನು ಶ್ರೀಹರಿಸೇವೆಯೆಂದು ಶ್ರೀಹರಿಯಲ್ಲಿ ಅರ್ಪಿಸಿ, ಆತನ ಪ್ರಸನ್ನತೆಯನ್ನು ಮಾತ್ರ ಯಾಚಿಸಬೇಕು.

ದಿನಾರಂಭದಲ್ಲಿ ಮಾಡುವ ಸಂಕಲ್ಪದಂತೆ ನಡೆಯಲು ಅವಶ್ಯಕವಾದ ಜ್ಞಾನದಾರ್ಢ್ಯತೆಯನ್ನು ದೊರಕಿಸಲು, ಈ ಗ್ರಂಥದಲ್ಲಿ ಶ್ರೀಮುಖ್ಯಪ್ರಾಣನ ಮಹಿಮೆಗಳನ್ನು ಪ್ರತಿಪಾದಿಸುವ ರಹಸ್ಯ ಶಾಸ್ತ್ರಾರ್ಥಗಳು ವರ್ಣಿತವಾಗಿವೆ. ಉಪನಿಷತ್ತುಗಳು, ವೇದಾಂತಸೂತ್ರಗಳು, ತಂತ್ರಸಾರಸಂಗ್ರಹ ಮೊದಲಾದ ಉತ್ಕೃಷ್ಟ ಪ್ರಮಾಣಗ್ರಂಥ ಗಳಲ್ಲಿ ಉಕ್ತವಾದ ನಿರ್ಣಯಗಳೊಂದಿಗೆ ಶ್ರೀಹರಿವಾಯುಗಳ ಮಹಿಮೆಗಳೂ ಇಲ್ಲಿ ಸಂಗ್ರಸಲ್ಪಟ್ಟಿವೆ. ಶ್ರೀಮುಖ್ಯಪ್ರಾಣನಿಗೂ ಪ್ರಭುವಾದ ಲಕ್ಷ್ಮೀಪತಿಯು ಅಪಾರವಾದ ಅನಂತ ಮಹಿಮೆಗಳುಳ್ಳವನು. ಅವುಗಳಲ್ಲಿ ಪ್ರಧಾನಗಳಾದ ಸ್ವಾತಂತ್ರ್ಯ, ಕ್ಷಮೆ, ದಯೆ ಮೊದಲಾದ ಗುಣಗಳು ಸಕಲ ಸುಜೀವರಲ್ಲಿ ಉತ್ತಮ ಭಕ್ತಿಯನ್ನು ಉತ್ಪಾದಿಸಲು ಸಮರ್ಥವಾಗಿವೆ. ಭಕ್ತಿಪೂರ್ವಕ, ಉಕ್ತವಾದ ಸದನುಸಂಧಾನವುಳ್ಳವರಾಗಿ ವಿಹಿತ ಕರ್ಮಗಳನ್ನಾಚರಿಸಿ, ಶ್ರೀಹರಿಯಲ್ಲಿ ಅರ್ಪಿಸಿದರೆ, ಕರ್ಮಬಂಧದಿಂದ ಬಿಡುಗಡೆ ಹೊಂದುವುದು ಮಾತ್ರವಲ್ಲ, ಸಂಸಾರದ ಆತ್ಯಂತಿಕ ಬಿಡುಗಡೆಗೆ ಅವಶ್ಯಕವಾದ ಶ್ರೀಹರಿವಾಯುಗಳ ಪರಮ ಪ್ರಸಾದವೂ ಲಭಿಸುತ್ತದೆ.

ಪ್ರತಿಯೊಂದು ಕರ್ಮವನ್ನು ಮಾಡುವಾಗ ಈ ವಿಧ ಸಂಕಲ್ಪವನ್ನುಚ್ಚರಿಸಿ, ಸರಿಯಾದ ಅನುಸಂಧಾನವನ್ನು ರೂಢಿಸಿಕೊಳ್ಳುವುದು ಶಕ್ಯವಲ್ಲ. ಆದ್ದರಿಂದ ಪ್ರತಿದಿನದಲ್ಲಿ ಸತತವಾಗಿ ನಮ್ಮಿಂದ ಸಂಭವಿಸಬಹುದಾದ ಸರ್ವಕರ್ಮಗಳನ್ನು ಶ್ರೀಹರಿ-

ಪೂಜೆಯೆಂದಾಚರಿಸಿ ಅರ್ಪಿಸುವೆವೆಂಬ ಸಂಕಲ್ಪವನ್ನು ದಿನಾರಂಭದಲ್ಲಿಯೇ ಮಾಡು-ವುದು ಯುಕ್ತವೇ ಆಗುತ್ತದೆ. 'ಕರಿಷ್ಯಮಾಣಾನಿ ಚ ತಸ್ಯ ಪೂಜಾಂ ಸಂಕಲ್ಪಯಾಮಾಸ ಸ ಶುದ್ಧಬುದ್ಧಿಃ' ಎಂಬ (ಸುಮಧ್ವವಿಜಯ) ವಿಭಾಗದಲ್ಲಿ, ಶ್ರೀಭೀಮಸೇನನು, ಭವಿಷ್ಯತ್ಕಾಲದಲ್ಲಿ ತನ್ನಿಂದ ಸಂಭವಿಸುವ ಸರ್ವಕರ್ಮಗಳನ್ನೂ ಶ್ರೀಕೃಷ್ಣಪೂಜೆ-ಯೆಂದು ಸಂಕಲ್ಪಿಸಿದನೆಂದು ಹೇಳಲಾಗಿದೆ. ಶ್ರೀಭೀಮಸೇನನ ಈ ಕೃತಿಯು ಸಕಲ ಸಜ್ಜನರಿಗೆ ಮಾರ್ಗದರ್ಶಕ ಮತ್ತು ಯಥಾಯೋಗ್ಯ ಅನುಕರಣೀಯವಾದ್ದರಿಂದ, ಸರ್ವರೂ ಮುಂದೆ ಮಾಡುವ ಕರ್ಮಗಳನ್ನು ಅರ್ಪಿಸುವೆವೆಂದು ಸಂಕಲ್ಪಿಸುವುದು ಯೋಗ್ಯವೇ ಆಗಿದೆ.

ವ್ಯಾಕರಣದಂತೆ ಕೇವಲ ಒಂದು ವಾಕ್ಯರೂಪದ ಈ ಚಿಕ್ಕ ಗ್ರಂಥವನ್ನು ಶಬ್ದಾರ್ಥ ತಾತ್ಪರ್ಯ ವಿವರಣೆಗಳ ಸೌಕರ್ಯಕ್ಕಾಗಿ ೨೯ ವಾಕ್ಯಾಂಗ (ಉಪವಾಕ್ಯ)ಗಳನ್ನಾಗಿ ವಿಭಾಗಿಸಿಕೊಂಡಿದ್ದೇನೆ. ಪ್ರತಿಯೊಂದನ್ನೂ ಯೋಗ್ಯ ಕ್ರಿಯಾಪದಗಳ ಅಧ್ಯಾಹಾರ-ದಿಂದ ಪೂರ್ಣವಾಕ್ಯವೆಂದು ಭಾವಿಸಿ ತಾತ್ಪರ್ಯವನ್ನು ಬರೆದಿದ್ದೇನೆ. ಪ್ರಮೇಯಗಳ ವಿವರಣೆಯಲ್ಲಿ ಪ್ರಮಾಣ ವಾಕ್ಯಗಳನ್ನು ಉದಹರಿಸಿದ್ದೇನೆ. ವಿಸ್ತಾರ ಭಯದಿಂದ ವಿವರಣೆಯನ್ನು ಸಂಕೋಚಗೊಳಿಸಿದಾಗ, ಯಾವ ಗ್ರಂಥದಲ್ಲಿ ಆ ಪ್ರಮೇಯದ ವಿಸ್ತಾರವನ್ನು ಕಾಣಬಹುದೆಂಬುದನ್ನು ಸೂಚಿಸಿದ್ದೇನೆ. ಶಾಸ್ತ್ರಾಭ್ಯಾಸದಲ್ಲಿ ತೊಡಗ-ದಿರುವವರಿಗೆ ಅರ್ಥತಾತ್ಪರ್ಯ ಭಾಗಗಳನ್ನು ಅನುಸರಿಸುವುದು ಸ್ವಲ್ಪ ಕಷ್ಟವಾಗ-ಬಹುದು; ಏಕೆಂದರೆ, ಕೆಲವೆಡೆ ಅನಿವಾರ್ಯವಾಗಿ ಸಂಸ್ಕೃತ ಪಾರಿಭಾಷಿಕ ಶಬ್ದಗಳನ್ನೇ ಉಪಯೋಗಿಸಬೇಕಾಗುತ್ತದೆ. ಶಾಸ್ತ್ರಶ್ರವಣವಾದವರಿಗೆ ವ್ಯಾಖ್ಯಾನದ ಪೂರ್ಣ ಉಪಯೋಗವು ದೊರೆಯುವುದೆಂದು ನಂಬಿದ್ದೇನೆ. ಶ್ರದ್ಧೆಯಿಂದ ಓದಿದರೆ ವಿಷಯಗಳನ್ನು ಗ್ರಹಿಸಲು ಅನುಕೂಲವಾಗುವಂತೆ ಶಕ್ಯವಿದ್ದಷ್ಟು ಸುಲಭವಾದ ಸರಳ ಶೈಲಿಯಲ್ಲಿ ಈ ವ್ಯಾಖ್ಯಾನವನ್ನು ರಚಿಸಲೆತ್ನಿಸಿದ್ದೇನೆ. ಬರೆಯಲು ಲೇಖನಿಯನ್ನೆತ್ತಿ ಕೊಂಡಾಗಲೆಲ್ಲ, ತಪ್ಪದೇ ಶ್ರೀಗುರುಸಾರ್ವಭೌಮರ ಪಾದಸ್ಮರಣೆ ಮಾಡಿದ್ದೇನೆ. ಇದರಲ್ಲಿ ಪ್ರಾಜ್ಞರಿಗೆ ತೋರಬಹುದಾದ ದೋಷಗಳು ನನ್ನವು. ಗುಣಭಾಗವು ಪ್ರೇರಕ ದೇವತೆಗಳಿಗೆ ಸೇರಿದುದು. ಸಜ್ಜನರು ಹಂಸಕ್ಷೀರ ನ್ಯಾಯದಿಂದ ಸೇವಿಸಿ ಸಂತೋಷಿಸಬೇಕಾಗಿ ಪ್ರಾರ್ಥಿಸುತ್ತೇನೆ.

ವ್ಯಾಖ್ಯಾನ ರಚನೆಯಲ್ಲಿ ಪೂಜ್ಯ ಪಂಡಿತ ಉಮರ್ಜಿ ರಾಮಾಚಾರ್ಯರಿಂದ ತುಂಬ ಉಪಕಾರವಾಗಿದೆ. ಅವರನ್ನು ಕೃತಜ್ಞತೆಯಿಂದ ನಮಸ್ಕರಿಸುತ್ತೇನೆ. ಪ್ರಕಾಶಕ-ರಾದ ಶ್ರೀಮತಿ ತುಳಸಮ್ಮನವರ ಧರ್ಮಸಂಸ್ಥೆಯನ್ನು ಈ ಸೇವೆಯ ಅವಕಾಶವನ್ನು

ನನಗೆ ಕಲ್ಪಿಸಿ ಕೊಟ್ಟಿದ್ದಕ್ಕಾಗಿ, ಉಪಕಾರ ಸ್ಮರಣ ಪೂರ್ವಕ ವಂದಿಸುತ್ತೇನೆ. ಈ ಅರ್ಥ ವಿವರಣ ರೂಪದ ವ್ಯಾಖ್ಯಾನವನ್ನು ನನ್ನಿಂದ ಬರೆಸಲು, ಪ್ರಕಾಶಕರಿಗೆ ಸಲಹೆ-ಯನ್ನಿತ್ತು ಈ ಭಾಗ್ಯವನ್ನು ನನಗೆ ದೊರಕಿಸಿದ ಸಂಸ್ಕೃತ ಪ್ರಾಧ್ಯಾಪಕ ಶ್ರೀ ಕೆ. ಟಿ. ಪಾಂಡುರಂಗಿ, ಎಂ. ಎ., ಇವರನ್ನು ಕೃತಜ್ಞನಾಗಿ ವಂದಿಸುತ್ತೇನೆ. ಒಪ್ಪೋಲೆ ಮತ್ತು ವಿಷಯಾನುಕ್ರಮಣಿಕೆಗಳನ್ನು ಸಿದ್ಧಪಡಿಸುವುದರಲ್ಲಿ ಸಹಕರಿಸಿ ಸಹಾಯ ನೀಡಿದ ನನ್ನ ಮಾನ್ಯಮಿತ್ರರಾದ ಶ್ರೀ ಎಚ್. ವೆಂಕೋಬಾಚಾರ್ಯ, ಬಿ.ಎ., ಎಲ್.ಎಲ್.ಬಿ., ಇವರನ್ನೂ ಈ ಸಂದರ್ಭದಲ್ಲಿ ವಂದಿಸುತ್ತೇನೆ.

ಉಡುಪಿ ಶ್ರೀ ಫಲಿಮಾರು ಮಠಾಧೀಶರಾದ ಪರಮಪೂಜ್ಯ ಪರಮ ಹಂಸೇತ್ಯಾದಿ ಬಿರುದಾಂಕಿತ ಶ್ರೀ ೧೦೮ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳ-ವರು, ಈ ವ್ಯಾಖ್ಯಾನ ಗ್ರಂಥವನ್ನು ಅಭಿನಂದಿಸಿ ಆಶೀರ್ವದಿಸಿರುವರು. ಶ್ರೀ ಶ್ರೀಗಳವರ ಅನುಗ್ರಹದ ನುಡಿಗಳಿಗಾಗಿ ನಾನು ಕೃತಜ್ಞತಾಪೂರ್ವಕ, ಶ್ರೀ ಶ್ರೀ ಗಳವರ ದಿವ್ಯಚರಣಗಳಲ್ಲಿ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಶ್ರೀ ಮಂತ್ರಾಲಯ ಪ್ರಭುಗಳ ತ್ರಿಶತಮಾನೋತ್ಸವಾಚರಣೆಯ ಈ ವರ್ಷದಲ್ಲಿ, ಅಲ್ಪನಾದ ನನ್ನಿಂದ ಅರ್ಪಿಸಲ್ಪಟ್ಟ ಈ ಸೇವೆಯನ್ನು ಭಾರತೀಶಾಂತರ್ಗತ ಶ್ರೀಮದ್ರಾಘವೇಂದ್ರ ಗುರ್ವಂತರ್ಗತ ಶ್ರೀರಾಮಚಂದ್ರಸ್ವಾಮಿಯು ಸ್ವೀಕರಿಸುವ ಕೃಪೆ ಮಾಡಲೆಂದು ದೀನನಾಗಿ ಪ್ರಾರ್ಥಿಸುತ್ತೇನೆ.

ಹರಿಭಕ್ತ ಸೇವಕ
ಬಿ. ಭೀಮರಾವ್

ದಾವಣಗೆರೆ
೧೯೭೨

## ಮೊದಲ ಪ್ರಕಾಶಕರ ಮಾತು

ಕೆಲವು ವರ್ಷಗಳ ಹಿಂದೆ ನಮ್ಮ ಕೈಸೇರಿದ ಈ ಪುಟ್ಟ ಗ್ರಂಥವು ಶ್ರೀಗುರು-ಸಾರ್ವಭೌಮರಲ್ಲಿ ನಮಗಿದ್ದ ಪ್ರೇಮದ ಬಹುಭಾಗವನ್ನು ಆಕರ್ಷಿಸಿತು. ಕಾರಣ, ಅವರಿಗೆ ಶ್ರೀಹರಿವಾಯುಗಳಲ್ಲಿರುವ ನಿಶ್ಚಿತ ಜ್ಞಾನ, ನಿಶ್ಚಲವಾದ ಸ್ನೇಹ ಇತ್ಯಾದಿಗಳು ಈ ಗ್ರಂಥರೂಪದಲ್ಲಿ ಹೊರಹೊಮ್ಮಿ ಆಸ್ತಿಕರು ಉದ್ಧೃತರಾಗಲು ಬೇಕಾದ ಸಾಧನಗಳನ್ನೊಳಗೊಂಡಿದೆ, ಈ ಕೈಪಿಡಿ. ಇದರ ಅನುವಾದವನ್ನು ಪಂಡಿತರಿಂದ ತಿಳಿಗನ್ನಡದಲ್ಲಿ ಮಾಡಿಸಿ ಸಮಾಜಕ್ಕೆ ಬಹು ಬೇಗ ಒದಗಿಸಲು ಶ್ರೀರಾಯರ ಪ್ರೇರಣಾನುಸಾರ ಯತ್ನಿಸಿದರೂ ಸಾಧ್ಯವಾಗದೆ, ಅಂತ್ಯದಲ್ಲಿ ನಮ್ಮ ಗ್ರಂಥ ಪ್ರಚಾರ ಕಾರ್ಯದಲ್ಲಿ ಅತ್ಯಾದರದಿಂದ ನಮ್ಮೊಡನೆ ಸಹಕರಿಸುತ್ತಿರುವ ಪ್ರೊ. ಕೆ. ಟಿ. ಪಾಂಡುರಂಗಿ ಇವರನ್ನು ಪ್ರಾರ್ಥಿಸಿದೆವು. ಈ ಕಾರ್ಯದಲ್ಲಿ ಅತ್ಯಂತ ಆಸಕ್ತಿಯಿದ್ದರೂ ಅವರಿಗೆ ಇತರ ಲೌಕಿಕ ಕಾರ್ಯಗಳ ಒತ್ತಡದಿಂದ ಅವಕಾಶ ದೊರೆಯದಿದ್ದುದ-ರಿಂದ, ದಾವಣಗೆರೆ ಶ್ರೀ ಭೀಮರಾಯರಲ್ಲಿ ವ್ಯವಹರಿಸಲು ಸಲಹೆಕೊಟ್ಟರು. ಅದರಂತೆ ಅವರಲ್ಲಿ ವಿಜ್ಞಾಪಿಸಿಕೊಳ್ಳಲು, ಆ ಅಪರಿಚಿತರು ತಕ್ಷಣ ಒಡಂಬಟ್ಟು ತಮ್ಮ ಅನಾರೋಗ್ಯವನ್ನೂ ಲಕ್ಷಿಸದೆ, ಈ ಉತ್ತಮ ಸೇವೆಯನ್ನು ಸಲ್ಲಿಸಿರುತ್ತಾರೆ. ಈ ಸಂಸ್ಥೆಯು ಅವರಿಗೆ ತಮ್ಮ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುತ್ತದೆ.

ಶ್ರೀರಾಯರಿಗೆ ತಮ್ಮನ್ನು ಬೇರೆ ರೀತಿಯಲ್ಲಿ ಸೇವಿಸುವ ಭಕ್ತರಿಗಿಂತಲೂ ತಮ್ಮ ಅನುಭವಾಮೃತದ ಗ್ರಂಥಗಳನ್ನು ಓದಿ, ಅಲ್ಲಿನ ವಿಷಯಗಳನ್ನು ಗ್ರಹಿಸಿ, ಅನು-ಸಂಧಾನಕ್ಕೆ ತಂದುಕೊಳ್ಳುವ ಭಕ್ತರಲ್ಲಿ ಅಧಿಕ ಪ್ರೇಮ. ಆದ್ದರಿಂದ ಸಜ್ಜನರು ಸರ್ವ-ಶಾಸ್ತ್ರಾರ್ಥ ಸಾರವಾದ ಈ ಗ್ರಂಥವನ್ನು ಆದರದಿಂದ ಸ್ವೀಕರಿಸಿ, ಇದರ ಸಂಪೂರ್ಣ ಪ್ರಯೋಜನವನ್ನು ಹೊಂದಿ, ಶ್ರೀಹರಿವಾಯುಗಳ ಕೃಪೆ ಪಡೆಯಲೆಂದು ಪ್ರಾರ್ಥಿಸಿ, ಈ ಅಲ್ಪಸೇವೆಯನ್ನು ಶ್ರೀಗುರುಸಾರ್ವಭೌಮರ ಚರಣಾರವಿಂದಗಳಲ್ಲಿ ದೈನ್ಯದಿಂದ ಸಮರ್ಪಿಸುತ್ತೇವೆ.

೧೯೭೨ — ಕೆ. ತುಳಸಮ್ಮನವರ ಧರ್ಮಸಂಸ್ಥೆ

ಬೆಂಗಳೂರು-೪

# ಪ್ರಕಾಶಕರ ಮುನ್ನುಡಿ

(ಸಂಘದಿಂದ ಪ್ರಕಟಿತವಾದ ಮೊದಲನೆಯ ಮುದ್ರಣದ ಸಂದರ್ಭ)

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ಈ ಮಂತ್ರ ವಾಕ್ಯವನ್ನು ಧ್ಯೇಯವಾಗಿಟ್ಟುಕೊಂಡು ಕಾರ್ಯಪ್ರವೃತ್ತವಾದ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘವು ತನ್ನ ಉದ್ದೇಶ ಸಾಧನೆಯಲ್ಲಿ ಹಿಂದೆ ಬೀಳದೆ ೬೯ ಸಂವತ್ಸರಗಳ ಸಾರ್ಥಕ ಸೇವೆ ಸಲ್ಲಿಸಿ ಭಾರತದಾದ್ಯಂತ ತನ್ನ ಹೆಸರನ್ನು ಆಸ್ತಿಕ ಭಕ್ತಾದಿಗಳ ಮನದಲ್ಲಿ ಅಚ್ಚಳಿಯದೆ ನಿಲ್ಲಿಸಿದೆ.

ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದ ಸ್ಥಾಪನೆಯಲ್ಲಿ, ಅದನ್ನು ಹುಟ್ಟು ಹಾಕುವ ಪ್ರಮುಖ ಕಾರ್ಯವನ್ನು ಮಾಡಿದ್ದೇ ಅಲ್ಲದೆ ಅಮೂಲ್ಯ ಶಾಸ್ತ್ರ ಗ್ರಂಥಗಳಿಗೆ ಅನುವಾದ ಮಾಡಿ ಸಂಘದ ಹೆಸರನ್ನು ಓದುಗರ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುವಂತೆ ಶ್ರೀಹರಿ-ವಾಯು-ಗುರುಗಳ ಅನುಗ್ರಹದಿಂದ ಸೇವೆ ಸಲ್ಲಿಸಿದವರು, ಸಂಸ್ಥಾಪಕರಾದ ಶ್ರೀ ಬಿ. ಭೀಮರಾಯರು. ಅವರು ನಮ್ಮ ಮಧ್ಯೆ ಇಂದು ಇರುತ್ತಿದ್ದರೆ ಅವರು ನೂರು ವರ್ಷ ಪೂರ್ಣಗೊಳಿಸುತ್ತಿದ್ದರು ಎನ್ನುವುದಕ್ಕಿಂತ, ಇಂದಿಗೂ ಅವರು ನಮ್ಮೊಂದಿಗೆ ಇದ್ದಿದ್ದರೆ ಅಮೂಲ್ಯ ಅನುವಾದ ಗ್ರಂಥಗಳ ಮುತ್ತು-ರತ್ನಗಳು ಆಸ್ತಿಕ ಓದುಗರಿಗೆ ಲಭ್ಯವಾಗುತ್ತಿತ್ತೆಂಬುದನ್ನು ಗಮನಿಸಿದಲ್ಲಿ ಅವರ ಅಗಲುವಿಕೆಯ ನಷ್ಟದ ಪ್ರಮಾಣ-ವನ್ನು ಊಹಿಸಲೂ ಸಾಧ್ಯವಿಲ್ಲ. ಇಂಥಹ ಮಹಾನುಭಾವರ ಜನ್ಮಶತಾಬ್ದಿ ವರ್ಷಾ-ಚರಣೆಯು ಶ್ರೀ ಚಿತ್ರಭಾನು ಸಂವತ್ಸರದ ಜ್ಯೇಷ್ಠ ಶುದ್ಧ ಬಿದಿಗೆಯಂದು ಜರುಗಿದಾಗ ವಿಶೇಷವಾದ ಜ್ಞಾನಯಜ್ಞದ ಮೂಲಕ ಶ್ರೀಯುತರ ಜನ್ಮಶತಾಬ್ದಿ ಆಚರಣೆ ಮಾಡ-ಬೇಕೆಂದು ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘವು ಸಂಕಲ್ಪ ಮಾಡಿತಲ್ಲದೆ ಶ್ರೀಹರಿ-ವಾಯು-ಗುರುಗಳ ಅನುಗ್ರಹದಿಂದ ಅವರ ತದ್ರೂಪದ ಪುತ್ಥಳಿಯನ್ನೂ ಸಹ ಸಂಘದ ಪ್ರವಚನ ಮಂದಿರದಲ್ಲಿ ಸ್ಥಾಪಿಸಿದ ಸಾರ್ಥಕ್ಯದ ಕಾರ್ಯ ನೆರವೇರಿ-ತೆಂಬುದನ್ನು ತಿಳಿಸಲು ಹರ್ಷಿಸುತ್ತೇವೆ.

ಇದೇ ತೆರನಾಗಿ ದಿವಂಗತರ ಜನ್ಮಶತಾಬ್ದಿ ಆಚರಣೆಯಲ್ಲಿ ಹಮ್ಮಿಕೊಳ್ಳಲಾದ ಜ್ಞಾನಯಜ್ಞ ಕಾರ್ಯದ ಅಂಗವಾಗಿ ದಿವಂಗತರಿಂದ ಹಲವಾರು ಗ್ರಂಥಗಳು ಅನು-ವಾದಗೊಂಡಿದ್ದು, ಅವುಗಳು ಬೇರೆ ಸಂಘ-ಸಂಸ್ಥೆಗಳಿಂದ ಪ್ರಕಾಶನಗೊಳಿಸಲ್ಪಟ್ಟಿದ್ದು, ಅವುಗಳು ಮರು-ಮುದ್ರಣವಾಗಿಲ್ಲವೆಂಬುದನ್ನು ಗಮನಿಸಿ, ದಿವಂಗತರು ಬೇರೆ ಸಂಘ-ಸಂಸ್ಥೆಗಳಿಗೆ ಅನುವಾದ ಮಾಡಿಕೊಟ್ಟ ಗ್ರಂಥಗಳ ಪ್ರಕಾಶಕರೆಲ್ಲರನ್ನೂ ಸಂಪರ್ಕಿಸಿ ಎಲ್ಲ ಗ್ರಂಥಗಳನ್ನೂ ಏಕತ್ರಮಾಡಿ, ಸಂಘದಿಂದ ಮರು ಮುದ್ರಣ-

ಗೊಳಿಸಬೇಕೆಂಬ ಮಹತ್ಕಾರ್ಯವನ್ನು ಶ್ರೀಹರಿ-ವಾಯು-ಗುರುಗಳ ಅನುಗ್ರಹದಿಂದ ಸಂಕಲ್ಪಿಸಲಾಗಿದ್ದರ ಅಂಗವಾಗಿ ಪ್ರಥಮ ಹೆಜ್ಜೆಯಾಗಿ ಬೆಂಗಳೂರಿನ ಶ್ರೀಮತಿ ತುಳಸಮ್ಮ ಟ್ರಸ್ಟ್ ಇವರಿಂದ ಪ್ರಕಾಶಿಸಲ್ಪಟ್ಟ 'ಶ್ರೀ ಪ್ರಾತಃ ಸಂಕಲ್ಪ ಗದ್ಯಂ'ದ ಪ್ರಕಾಶನದ ಹಕ್ಕನ್ನು ಶ್ರೀಮತಿ ತುಳಸಮ್ಮ ಟ್ರಸ್ಟ್‌ನ ಮುಖ್ಯ ಟ್ರಸ್ಟಿಯವರಾದ ಶ್ರೀ ಜಿ. ಶ್ರೀನಿವಾಸಮೂರ್ತಿಯವರಿಂದ ಪಡೆಯಲು ಅವರನ್ನು ಸಂಪರ್ಕಿಸಿದಾಗ ಶ್ರೀಯುತರು ತುಂಬು ಹೃದಯದಿಂದ ಅವರ ಅನುಮತಿ ಪತ್ರ ದಿನಾಂಕ ೨೭-೦೪-೨೦೦೨ ರ ಮೂಲಕ ಸಮ್ಮತಿಸಿ ತಮ್ಮ ಸೌಜನ್ಯ ಮೆರೆದಿದ್ದಾರಲ್ಲದೆ ಶ್ರೀಹರಿ-ವಾಯು-ಗುರುಗಳಿಗೆ ಪ್ರೀತಿಕರವಾದ ನಿರ್ಧಾರ ಮಾಡಿ ಹಮ್ಮಿಕೊಂಡ ನಮ್ಮ ಕಾರ್ಯದಲ್ಲಿ ನಮ್ಮೆಲ್ಲರನ್ನು ಉತ್ತೇಜಿಸಿದ್ದಾರೆ ಎಂದರೆ ಅತಿಶಯೋಕ್ತಿಯೇನಲ್ಲ. ಶ್ರೀಜಿ. ಶ್ರೀನಿವಾಸಮೂರ್ತಿಯವರಿಗೆ ಶ್ರೀ ಹರಿ-ವಾಯು-ಗುರುಗಳು ಜ್ಞಾನ-ಭಕ್ತಿ-ವೈರಾಗ್ಯಾದಿ ಸಕಲ ಇಷ್ಟಾರ್ಥಗಳನ್ನು ಭಗವಂತನು ಅನುಗ್ರಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇವೆ. ಹೀಗೆ ಪ್ರಕಾಶನದ ಹಕ್ಕನ್ನು ಸಂಘವು ಪಡೆದುಕೊಂಡು, ಅವರಿಗೆ ಕೃತಜ್ಞತೆಯನ್ನು ಸೂಚಿಸುತ್ತಿದೆ.

ನಮ್ಮ ಈ ಗ್ರಂಥದ ಮರು ಮುದ್ರಣ ಕಾರ್ಯದಲ್ಲಿ ಈ ಗ್ರಂಥಕ್ಕೆ ಉಪಯುಕ್ತ ಮುನ್ನುಡಿಯನ್ನು ಬರೆದುಕೊಟ್ಟು ನಮ್ಮನ್ನು ಪ್ರೋತ್ಸಾಸಿರುವ ಸಂಘದ ಆತ್ಮೀಯ ಒಡನಾಡಿಗಳೂ ಆಗಿರುವ ವೇ|| ಪಂ|| ಶ್ರೀ ಮಣ್ಣೂರು ಪಾಂಡುರಂಗಾಚಾರ್ಯರಿಗೆ ಕೃತಜ್ಞರಾಗಿದ್ದೇವೆ.

ಈ ಪ್ರಕಟಣೆಗೆ ಧನಸಹಾಯ ನೀಡಿರುವ ಶ್ರೀ ಕೆ. ಎಸ್. ವಾದಿರಾಜ್ (ಭದ್ರಾವತಿ) ಅವರಿಗೆ ಶ್ರೇಯಸ್ಸನ್ನುಂಟುಮಾಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ಈ ಪುಸ್ತಕದ ಮುದ್ರಣ ಜವಾಬ್ದಾರಿಯನ್ನು ವಹಿಸಿಕೊಂಡು ಅದನ್ನು ಸಕಾಲಕ್ಕೆ ಒದಗಿಸಿದ ಶ್ರೀಯುತ ಡಿ. ಎನ್. ಕೃಷ್ಣಾಚಾರ್ಯ ಅವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ.

ಸಂಘದ ಪದಾಧಿಕಾರಿಯಾಗಿ ಸೇವೆ ಸಲ್ಲಿಸುವಲ್ಲಿ ನನಗೆ ಸಹಕರಿಸುತ್ತಿರುವ ಸಮಿತಿ ಕಾರ್ಯದರ್ಶಿ ಹಾಗೂ ಎಲ್ಲ ಸದಸ್ಯರುಗಳಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

೧೦-೦೨-೨೦೦೩ (ಮಧ್ವನವಮಿ)

ಟಿ. ಆರ್. ಹನುಂತರಾವ್ ಪದಕಿ
ಅಧ್ಯಕ್ಷರು
ಕಾರ್ಯಕಾರಿ ಸಮಿತಿ

॥ ಶ್ರೀಃ ॥

ಶ್ರೀರುಕ್ಮಿಣೀ-ಸತ್ಯಭಾಮಾ ಸಹಿತ ಶ್ರೀವಿಠ್ಠಲಾಯ ನಮಃ

# ಮೊದಲನೇ ಮುದ್ರಣದ ಮುನ್ನುಡಿ

ಸಂಸಾರದಲ್ಲಿ ಬಂದ ಪ್ರತಿಯೊಬ್ಬ ಜೀವನೂ ತಾನು ನಿತ್ಯ ಮಾಡತಕ್ಕ ಸಕಲ ಕರ್ಮಗಳನ್ನು ಭಗವತ್ಪೂಜಾ ರೂಪದಲ್ಲಿ ಅನುಸಂಧಾನ ಪೂರ್ವಕ ಮಾಡುವುದರಿಂದ ಆತನಿಗೆ ಕರ್ಮದಿಂದ ಆಗುವ ಪಾಪ ಲೇಪವಾಗುವುದಿಲ್ಲ ಮತ್ತು ಅದು ಭಗವಂತನ ಪ್ರೀತಿಗೆ ಕಾರಣವೂ ಆಗುತ್ತದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳಿದಂತೆ **'ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್। ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್'** ಎಂಬ ಮಾತಿನ ಸಾರವೂ ಇದೇ ಆಗಿದೆ. ಈ ವಿಧವಾಗಿ ಕರ್ಮಗಳನ್ನು ಮಾಡಲು ಶ್ರೀರಾಘವೇಂದ್ರ ಗುರುಸಾರ್ವಭೌಮರು 'ಪ್ರಾತಃ ಸಂಕಲ್ಪ ಗದ್ಯ'ವನ್ನು ರಚಿಸಿ ಅಜ್ಞರಿಗೆ ಮಹದುಪಕಾರ ಮಾಡಿ-ದ್ದಾರೆ. ಅದರಂತೆ ಈ ಗ್ರಂಥದ ವ್ಯಾಖ್ಯಾನವನ್ನು ಸುಂದರವಾಗಿ ಮಾಡಿ ಸಜ್ಜನರಿಗೆ ಉಪಕಾರ ಮಾಡಿದ ಶ್ರೀಯುತ ಭೀಮರಾಯರು ಅಭಿನಂದನಾರ್ಹರೆ! ಶ್ರೀಯುತರು ತಮ್ಮ ಜೀವಿತ ಕಾಲ-ದಲ್ಲಿ ಶಾಸ್ತ್ರಾಧ್ಯಯನ-ಪಾಠ-ಪ್ರವಚನ, ಗ್ರಂಥ ರಚನೆ ಮೊದಲಾದ ಭಗವಂತನ ಪ್ರೀತಿಕರ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಶ್ರೇಷ್ಠದರ್ಜೆಯಲ್ಲಿ ಆಧ್ಯಾತ್ಮ ಜೀವನವನ್ನು ನಡೆಸಿ ಆದರ್ಶಪ್ರಾಯರಾಗಿದ್ದರು. ಮಕ್ಕಳಿಗೆ ಸಿಹಿಯನ್ನು ತೋರಿಸಿ ಕೆಲಸದಲ್ಲಿ ತೊಡಗಿಸುವಂತೆ ನಮ್ಮನ್ನು ಶಾಸ್ತ್ರಾಧ್ಯಯನ, ಪಾಠ ಪ್ರವಚನಗಳಲ್ಲಿ ಪ್ರವೇಶ ಮಾಡಿಸಿ ನಮ್ಮ ಉನ್ನತಿಗೆ ಕಾರಣರಾಗಿದ್ದಾರೆ. ಅವರಿಗೆ ನಾವು ಎಷ್ಟು ಕೃತಜ್ಞತೆ ಸಲ್ಲಿಸಿದರೂ ಸಾಲದು.

ಬೆಂಗಳೂರಿನ ಶ್ರೀಮತಿ ಕೆ. ತುಳಸಮ್ಮ ಟ್ರಸ್ಟ್‌ನವರಿಂದ ಈ ಅನುವಾದಿತ ಗ್ರಂಥವು ೧೯೭೨ರಲ್ಲಿ ಪ್ರಕಟಣೆಗೊಂಡು, ಎಲ್ಲ ಪ್ರತಿಗಳು ಮಾರಾಟವಾಗಿವೆ. ಈ ಪುಸ್ತಕದ ಉಪಯುಕ್ತತೆ-ಯನ್ನು ಮನಗಂಡ ಭಕ್ತರು ಇದರ ಪ್ರತಿಗಳಿಗಾಗಿ ಅಪಾರ ಬೇಡಿಕೆಯನ್ನು ಸಲ್ಲಿಸಿದ್ದರಿಂದ ದಾವಣಗೆರೆ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದವರು ಇದರ ಪುನರ್ಮುದ್ರಣಕ್ಕಾಗಿ ಮುಂದೆ ಬಂದಿತು. ಇದಕ್ಕೆ ಪ್ರೋತ್ಸಾಹ ರೂಪದಲ್ಲಿ ಬೆಂಗಳೂರಿನ ಶ್ರೀಮತಿ ತುಳಸಮ್ಮ ಟ್ರಸ್ಟ್‌ನ ಪದಾಧಿಕಾರಿಗಳು ಇದರ ಮೇಲಿನ ತಮ್ಮ ಹಕ್ಕನ್ನು ಬಿಟ್ಟುಕೊಟ್ಟು ಸಹಕರಿಸಿದ್ದಾರೆ.

ಸಕಲ ಭಗವದ್ಭಕ್ತರು ತಾವು ಮಾಡುವ ಸಕಲ ನಿತ್ಯ ನೈಮಿತ್ತಿಕ ಕರ್ಮಗಳನ್ನು ಶ್ರೀರಾಘವೇಂದ್ರ-ತೀರ್ಥ ಗುರುಸಾರ್ವಭೌಮರ ಅಂತರ್ಯಾಮಿ ಶ್ರೀಭಾರತೀಶಾಂತರ್ಗತ ಶ್ರೀಕೃಷ್ಣನಲ್ಲಿ ಸಂಕಲ್ಪ-ಪೂರ್ವಕ ಸಮರ್ಪಣೆ ಮಾಡುವ ಕ್ರಮವನ್ನು ಅರಿತು, ಅದರಂತೆ ಮಾಡಿ ಶ್ರೇಯೋಭಾಗಿ-ಗಳಾಗಲು ಪ್ರಾರ್ಥನೆ.

ಇಂಥ ಅಮೂಲ್ಯವಾದ, ಅದರಲ್ಲೂ ನಮಗೆ ಪೂಜ್ಯರಾದ ಶ್ರೀಯುತ ಭೀಮರಾಯರಿಂದ ವ್ಯಾಖ್ಯಾನ ಮಾಡಲ್ಪಟ್ಟ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುವ ಭಾಗ್ಯವನ್ನು ಅಲ್ಪನಾದ ನನಗೆ ಕೊಟ್ಟ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದ ಅಧ್ಯಕ್ಷರು ಹಾಗೂ ಪದಾಧಿಕಾರಿಗಳಿಗೆ ನಾನು ಕೃತಜ್ಞ.

॥ ಶ್ರೀಕೃಷ್ಣಾರ್ಪಣಮಸ್ತು॥

ದಾವಣಗೆರೆ, ಕಿ.ಶ. ೨೦೦೩ | ಪಾಂಡುರಂಗಾಚಾರ್ಯ ಮಣ್ಣೂರು
ಚಿತ್ರಭಾನು-ಪುಷ್ಯ ಬ. ಚತುರ್ದಶಿ | ಉತ್ತರಾದಿಮಠಾಧಿಕಾರಿ
ಶ್ರೀ ಶ್ರೀ ವಿದ್ಯಾಧೀಶರ ಪು. ದಿನ

# ವಿಷಯಾನುಕ್ರಮಣಿಕೆ

| ಉಪವಾಕ್ಯ | ವಿಷಯ | ಪುಟಗಳು |
|---|---|---|

|| ಶ್ರೀಃ ||

ಶ್ರೀಮದ್ರಾಘವೇಂದ್ರತೀರ್ಥ ವಿರಚಿತ

# ಪ್ರಾತಃಸಂಕಲ್ಪಗದ್ಯಮ್

|| ಶ್ರೀಗುರುಭ್ಯೋ ನಮಃ ||

|| ಶ್ರೀರಾಮಚಂದ್ರಾಯ ನಮಃ ||

**ಸೂಚನೆ:** ಪ್ರಸ್ತುತ ಮರು ಆವೃತ್ತಿಯಲ್ಲಿ ನಿತ್ಯಪಠಣೆಗೆ ಸೌಕರ್ಯವನ್ನುಂಟು-ಮಾಡುವುದಕ್ಕೋಸ್ಕರ ಮೂಲ ಕೃತಿಯನ್ನು ಪ್ರಾರಂಭದ ಪುಟಗಳಲ್ಲಿ ನೀಡಲಾಗಿದೆ. ಕೃತಿಯು ಏಕವಾಕ್ಯ (ಗದ್ಯ) ರೂಪದಲ್ಲಿರುವುದರಿಂದ ನಿರ್ದಿಷ್ಟ ಕ್ರಮದಲ್ಲಿ ಪದಸಮೂಹ-ಗಳಿಂದ ಕೂಡಿದೆ. ಆದರೆ ಸಂಸ್ಕೃತ ಭಾಷೆಯ ಅಭ್ಯಾಸವನ್ನು ಸಾಕಷ್ಟು ಮಾಡದೆ ಇರುವ ಒಂದು ಹಂತದಲ್ಲಿರುವ ಸಾಧಕರಿಗೆ ಪಾರಾಯಣ ಮಾಡುವಾಗ ಆ ಪದಸಮೂಹಗಳು ಕ್ಲಿಷ್ಟವಾಗಿ ತೋರಬಹುದು. ಈ ಅಂಶವನ್ನು ಗಮನಿಸಿ, ಹಲವು ಸ್ಥಳಗಳಲ್ಲಿ ಪದಗಳ ವಿಭಾಗವನ್ನು ರಚಿಸಿ ಮೂಲಕೃತಿಯನ್ನು ಒದಗಿಸಲಾಗಿದೆ. ಶ್ರದ್ಧಾವಂತರಾಗಿ, ಅರ್ಥಾನು-ಸಂಧಾನಸಹಿತವಾಗಿ ಪಾರಾಯಣಮಾಡುವವರಿಗೆ ಅಧಿಕ ಫಲ ದೊರೆಯುತ್ತದೆ.

ಈ ಕೃತಿಯಲ್ಲಿರುವ ಅನೇಕ ಪ್ರಮೇಯಗಳನ್ನು ವಾಚಕರು ಗ್ರಹಿಸುವುದಕ್ಕೆ ಅನುಕೂಲ-ವಾಗುವಂತೆ, ವ್ಯಾಖ್ಯಾತೃಗಳು ಕ್ರಮಸಂಖ್ಯೆಗಳನ್ನು ನೀಡಿ, ಉಪಭಾಗಗಳನ್ನಾಗಿ ವಿಂಗಡಿಸಿ-ದ್ದಾರೆ. ಈ ಕ್ರಮಸಂಖ್ಯೆಗಳಿಗೆ ಅನುಗುಣವಾಗಿ ಮುಂದಿನ ಪುಟಗಳಲ್ಲಿ ವಿಷಯಗಳ ನಿರೂಪಣೆಯು ದೊರಕುತ್ತದೆ.

-: ಹರಿಃ ಓಂ :-

**೧. ಲೌಕಿಕ ವೈದಿಕ ಭೇದ ಭಿನ್ನ ವರ್ಣಾತ್ಮಕ ಧ್ವನ್ಯಾತ್ಮಕ ಅಶೇಷ ಶಬ್ದಾರ್ಥ-ಋಗಾದಿಸರ್ವವೇದಾರ್ಥ-ವಿಷ್ಣುಮಂತ್ರಾರ್ಥ ಪುರುಷ-ಸೂಕ್ತಾರ್ಥ-ಗಾಯತ್ರ್ಯರ್ಥ-ವಾಸುದೇವದ್ವಾದಶಾಕ್ಷರ ಮಂತ್ರಾಂತ-ರ್ಗತ ಆದ್ಯ ಅಷ್ಟಾಕ್ಷರಾರ್ಥ ಶ್ರೀಮನ್ ನಾರಾಯಣಾಷ್ಟಾಕ್ಷರ ಮಂತ್ರಾರ್ಥ ವಾಸುದೇವದ್ವಾದಶಾಕ್ಷರ ಮಂತ್ರಾಂತರ್ಗತ ಅಂತ್ಯ ಚತುರಕ್ಷರಾರ್ಥ-ವ್ಯಾಹೃತ್ಯರ್ಥ-ಮಾತೃಕಾಮಂತ್ರಾರ್ಥ ಪ್ರಣವೋಪಾಸಕಾನಾಂ.....**

**೨. ಪಾಪಾವಿದ್ಧ-ದೈತ್ಯಪೂಗಾವಿದ್ಧ-ಶ್ರೀವಿಷ್ಣುಭಕ್ತ್ಯಾದ್ಯನಂತ ಗುಣಪರಿಪೂರ್ಣ, ರಮಾವ್ಯತಿರಿಕ್ತ-ಪೂರ್ವಪ್ರಸಿದ್ಧ ವ್ಯತಿರಿಕ್ತ ಅನಂತ-ವೇದಪ್ರತಿಪಾದ್ಯಮುಖ್ಯತಮ, ಅನಂತಜೀವನಿಯಾಮಕ, ಅನಂತ-**

ರೂಪಭಗವತ್ಕಾರ್ಯಸಾಧಕ, ಪರಮದಯಾಲು ಕ್ಷಮಾಸಮುದ್ರ, ಭಕ್ತವತ್ಸಲ, ಭಕ್ತಾಪರಾಧಸಹಿಷ್ಣು ಶ್ರೀಮುಖ್ಯಪ್ರಾಣಾವತಾರ-ಭೂತಾನಾಂ.....

೩. ಅಜ್ಞ-ಜ್ಞಾನಾರ್ಥಿ-ಜ್ಞಾನಯೋಗ್ಯ-ಭಗವತ್ಕೃಪಾಪಾತ್ರಭೂತ-ಸಲ್ಲೋಕಕೃಪಾಲು-ಶ್ರೀಬ್ರಹ್ಮರುದ್ರಾದ್ಯರ್ಥಿತ ಭಗವದಾಜ್ಞಾಂ ಶಿರಸಿ ಪರಮಾದರೇಣ ಅನರ್ಘ್ಯಶಿರೋರತ್ನವತ್ ನಿಧಾಯ ತಥಾ ಅಶೇಷ-ದೇವತಾಪ್ರಾರ್ಥನಾಂ ಹಾರವತ್ ಹೃದಿ ನಿಧಾಯ ಸರ್ವಸ್ವಕೀಯ-ಸಜ್ಜನಾನುಗ್ರಹೇಚ್ಛಯಾ ಕರ್ಮಭುವಿ ಅವತೀರ್ಣಾನಾಮ್.....

೪. ತಥಾ ಅವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ, ಸರ್ವ-ದುರ್ಮತಭಂಜಕಾನಾಂ, ಅನಾದಿತಃ ಸತ್ಸಂಪ್ರದಾಯ ಪರಂಪರಾ-ಪ್ರಾಪ್ತ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪಕಾನಾಂ.....

೫. ಅತ ಏವ ಭಗವತ್ಪರಮಾನುಗ್ರಹಪಾತ್ರಭೂತಾನಾಂ, ಸರ್ವದಾ ಭಗವದಾಜ್ಞಯಾ ಭಗವತ್ಸನ್ನಿಧೌ ಪೂಜ್ಯಾನಾಂ, ತಥಾ ಭಗವತಾ ದತ್ತವರಾಣಾಂ.....

೬. ದ್ವಾತ್ರಿಂಶಲ್ಲಕ್ಷಣೋಪೇತಾನಾಂ, ತಥಾ ಸಮಗ್ರಗುರು-ಲಕ್ಷಣೋಪೇತಾನಾಂ, ಅಸಂಶಯಾನಾಂ, ಪ್ರಸಾದಮಾತ್ರೇಣ ಸ್ವಭಕ್ತಾಶೇಷ ಸಂಶಯಚ್ಛೇತ್ತೄಣಾಂ....

೭. ಪ್ರಣವಾದ್ಯಶೇಷ ವೈಷ್ಣವ ಮಂತ್ರೋದ್ಧಾರಕಾಣಾಂ, ಸರ್ವದಾ ಸರ್ವ ವೈಷ್ಣವ ಮಂತ್ರ ಜಾಪಕಾನಾಂ, ಸಂಸಿದ್ಧ ಸಪ್ತಕೋಟಿ ಮಹಾಮಂತ್ರಾಣಾಂ.....

೮. ಭಗವತಿ ಭಕ್ತ್ಯತಿಶಯೇನ ಭಗವದುಪಾಸನಾರ್ಥಂ ಸ್ವೇಚ್ಛಯಾ ಗೃಹೀತರೂಪಾಣಾಂ.....

೯. ತತ್ರ ತತ್ರ ಪೃಥಕ್ ಪೃಥಕ್ ಭಗವತಃ ಅನಂತರೂಪೇಷು ಪೃಥಕ್ ಪೃಥಕ್ ವೇದೋಕ್ತ ತದನುಕ್ತಭಾರತೋಕ್ತ ತದನುಕ್ತ-ಸಂಪ್ರದಾಯಾಗತ-ಸ್ವೇತರಸ್ವಾಭಿನ್ನತಯಾಪಿ ಅಶೇಷಶಕ್ತಿವಿಶೇಷಾಭ್ಯಾಂ

ಪೃಥಗ್ವ್ಯವಹಾರ ವಿಷಯ ಸರ್ವ ಸಾಮರ್ಥ್ಯೋಪೇತ-ನಿರವಧಿಕ-ಅನಂತಾನವದ್ಯಕಲ್ಯಾಣಗುಣಪರಿಪೂರ್ಣ ಅನಂತ-ಗುಣೋಪ-ಸಂಹರ್ತ್ರೂಣಾಂ.....

೧೦. ತಥಾ ವೇದೋಕ್ತ ಸರ್ವ ಕ್ರಿಯೋಪಸಂಹರ್ತ್ರೂಣಾಂ, ಏವಂ ಅನಂತರೂಪಾವಯವ ಗುಣಕ್ರಿಯಾಜಾತ್ಯವಸ್ಥಾ ವಿಶಿಷ್ಟ-ಭಗವದುಪಾಸಕಾನಾಂ.....

೧೧. ಪರಮದಯಾಲೂನಾಂ, ಕ್ಷಮಾಸಮುದ್ರಾಣಾಂ, ಭಕ್ತ-ವತ್ಸಲಾನಾಂ, ಭಕ್ತಾಪರಾಧಸಹಿಷ್ಣೂನಾಂ, ಸ್ವಭಕ್ತಾನ್ ದುರ್ಮಾ-ರ್ಗಾತ್ ಉದ್ಧೃತ್ಯ ಸನ್ಮಾರ್ಗಸ್ಥಾಪಕಾನಾಂ, ಸ್ವಭಕ್ತಂ ಮಾಂ ಉದ್ದಿಶ್ಯ ಭಗವತಃ ಪುರಃ ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ ತ್ವದಧೀನಂ ದೀನಂ ದೂನಂ ಅನಾಥಂ ಶರಣಾಗತಂ ಏನಂ ಉದ್ಧರ ಇತಿ ವಿಜ್ಞಾಪನಕರ್ತ್ರೂಣಾಂ.....

೧೨. ಸರ್ವಜ್ಞಶಿರೋಮಣೀನಾಂ, ಅಶೇಷಗುರ್ವಂತರ್ಯಾ-ಮಿಣಾಂ, ಸದಾ ಭಗವತ್ಪರಾಣಾಂ, ಭಗವತೋಽನ್ಯತ್ರ ಸರ್ವ-ವಸ್ತುಷು ಮನಃಸಂಗರಹಿತಾನಾಂ.....

೧೩. ಸರ್ವತ್ರ ಸರ್ವದಾ ಸರ್ವಾಕಾರ ಸರ್ವಾಧಾರ ಸರ್ವಾ-ಶ್ರಯ ಸರ್ವೋತ್ಪಾದಕ ಸರ್ವಪಾಲಕ ಸರ್ವಸಂಹಾರಕ ಸರ್ವ-ನಿಯಾಮಕ ಸರ್ವಪ್ರೇರಕ ಸರ್ವಪ್ರವರ್ತಕ ಸರ್ವನಿವರ್ತಕ ಯಥಾಯೋಗ್ಯಂ ಸರ್ವಜ್ಞಾನಾಜ್ಞಾನಬಂಧಮೋಕ್ಷಪ್ರದ ಸರ್ವ-ಸತ್ತಾಪ್ರದ ಸರ್ವಶಬ್ದವಾಚ್ಯ ಸರ್ವಶಬ್ದಪ್ರವೃತ್ತಿನಿಮಿತ್ತ ಸರ್ವ-ಗುಣಾತಿಪರಿಪೂರ್ಣತಮ ಸರ್ವದೋಷಾತಿದೂರ ಸರ್ವಾಚಿಂತ್ಯ ಸರ್ವೋತ್ತಮ ಸರ್ವೇಶ್ವರ ಸರ್ವಾತ್ಯಂತವಿಲಕ್ಷಣ ಸ್ವಗತಭೇದ-ವಿವರ್ಜಿತತ್ವಾದಿನಾ ಭಗವದ್ದ್ರಷ್ಟ್ರೂಣಾಂ.....

೧೪. ಅಭಿಮಾನಾದಿ ಸರ್ವದೋಷದೂರಾಣಾಂ, ಅಸೂಯೇ-ರ್ಷ್ಯಾದ್ಯಶೇಷ ಮನೋದೋಷ ನಿವರ್ತಕಾನಾಂ.....

ರೂಪಭಗವತ್ಕಾರ್ಯಸಾಧಕ, ಪರಮದಯಾಲು ಕ್ಷಮಾಸಮುದ್ರ, ಭಕ್ತವತ್ಸಲ, ಭಕ್ತಾಪರಾಧಸಹಿಷ್ಣು ಶ್ರೀಮುಖ್ಯಪ್ರಾಣಾವತಾರ-ಭೂತಾನಾಂ.....

೩. ಅಜ್ಞ-ಜ್ಞಾನಾರ್ಥಿ-ಜ್ಞಾನಯೋಗ್ಯ-ಭಗವತ್ಕೃಪಾಪಾತ್ರಭೂತ-ಸಲ್ಲೋಕಕೃಪಾಲು-ಶ್ರೀಬ್ರಹ್ಮರುದ್ರಾದ್ಯರ್ಥಿತ ಭಗವದಾಜ್ಞಾಂ ಶಿರಸಿ ಪರಮಾದರೇಣ ಅನರ್ಘ್ಯಶಿರೋರತ್ನವತ್ ನಿಧಾಯ ತಥಾ ಅಶೇಷ-ದೇವತಾಪ್ರಾರ್ಥನಾಂ ಹಾರವತ್ ಹೃದಿ ನಿಧಾಯ ಸರ್ವಸ್ವಕೀಯ-ಸಜ್ಜನಾನುಗ್ರಹೇಚ್ಛಯಾ ಕರ್ಮಭುವಿ ಅವತೀರ್ಣಾನಾಮ್.....

೪. ತಥಾ ಅವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ, ಸರ್ವ-ದುರ್ಮತಭಂಜಕಾನಾಂ, ಅನಾದಿತಃ ಸತ್ಸಂಪ್ರದಾಯ ಪರಂಪರಾ-ಪ್ರಾಪ್ತ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪಕಾನಾಂ.....

೫. ಅತ ಏವ ಭಗವತ್ಪರಮಾನುಗ್ರಹಪಾತ್ರಭೂತಾನಾಂ, ಸರ್ವದಾ ಭಗವದಾಜ್ಞಯಾ ಭಗವತ್ಸನ್ನಿಧೌ ಪೂಜ್ಯಾನಾಂ, ತಥಾ ಭಗವತಾ ದತ್ತವರಾಣಾಂ.....

೬. ದ್ವಾತ್ರಿಂಶಲ್ಲಕ್ಷಣೋಪೇತಾನಾಂ, ತಥಾ ಸಮಗ್ರಗುರು-ಲಕ್ಷಣೋಪೇತಾನಾಂ, ಅಸಂಶಯಾನಾಂ, ಪ್ರಸಾದಮಾತ್ರೇಣ ಸ್ವಭಕ್ತಾಶೇಷ ಸಂಶಯಚ್ಛೇತ್ತೄಣಾಂ....

೭. ಪ್ರಣವಾದ್ಯಶೇಷ ವೈಷ್ಣವ ಮಂತ್ರೋದ್ಧಾರಕಾಣಾಂ, ಸರ್ವದಾ ಸರ್ವ ವೈಷ್ಣವ ಮಂತ್ರ ಜಾಪಕಾನಾಂ, ಸಂಸಿದ್ಧ ಸಪ್ತಕೋಟಿ ಮಹಾಮಂತ್ರಾಣಾಂ.....

೮. ಭಗವತಿ ಭಕ್ತ್ಯತಿಶಯೇನ ಭಗವದುಪಾಸನಾರ್ಥಂ ಸ್ವೇಚ್ಛಯಾ ಗೃಹೀತರೂಪಾಣಾಂ.....

೯. ತತ್ರ ತತ್ರ ಪೃಥಕ್ ಪೃಥಕ್ ಭಗವತಃ ಅನಂತರೂಪೇಷು ಪೃಥಕ್ ಪೃಥಕ್ ವೇದೋಕ್ತ ತದನುಕ್ತಭಾರತೋಕ್ತ ತದನುಕ್ತ-ಸಂಪ್ರದಾಯಾಗತ-ಸ್ವೇತರಸ್ವಾಭಿನ್ನತಯಾಪಿ ಅಶೇಷಶಕ್ತಿವಿಶೇಷಾಭ್ಯಾಂ

ಪೃಥಗ್ವ್ಯವಹಾರ ವಿಷಯ ಸರ್ವ ಸಾಮರ್ಥ್ಯೋಪೇತ-ನಿರವಧಿಕ-ಅನಂತಾನವದ್ಯಕಲ್ಯಾಣಗುಣಪರಿಪೂರ್ಣ ಅನಂತ-ಗುಣೋಪ-ಸಂಹರ್ತೄಣಾಂ.....

೧೦. ತಥಾ ವೇದೋಕ್ತ ಸರ್ವ ಕ್ರಿಯೋಪಸಂಹರ್ತೄಣಾಂ, ಏವಂ ಅನಂತರೂಪಾವಯವ ಗುಣಕ್ರಿಯಾಜಾತ್ಯವಸ್ಥಾ ವಿಶಿಷ್ಟ-ಭಗವದುಪಾಸಕಾನಾಂ.....

೧೧. ಪರಮದಯಾಲೂನಾಂ, ಕ್ಷಮಾಸಮುದ್ರಾಣಾಂ, ಭಕ್ತ-ವತ್ಸಲಾನಾಂ, ಭಕ್ತಾಪರಾಧಸಹಿಷ್ಣೂನಾಂ, ಸ್ವಭಕ್ತಾನ್ ದುರ್ಮಾ-ರ್ಗಾತ್ ಉದ್ಧೃತ್ಯ ಸನ್ಮಾರ್ಗಸ್ಥಾಪಕಾನಾಂ, ಸ್ವಭಕ್ತಂ ಮಾಂ ಉದ್ದಿಶ್ಯ ಭಗವತಃ ಪುರಃ ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ ತ್ವದಧೀನಂ ದೀನಂ ದೂನಂ ಅನಾಥಂ ಶರಣಾಗತಂ ಏನಂ ಉದ್ಧರ ಇತಿ ವಿಜ್ಞಾಪನಕರ್ತೄಣಾಂ.....

೧೨. ಸರ್ವಜ್ಞಶಿರೋಮಣೀನಾಂ, ಅಶೇಷಗುರ್ವಂತರ್ಯಾ-ಮಿಣಾಂ, ಸದಾ ಭಗವತ್ಪರಾಣಾಂ, ಭಗವತೋಽನ್ಯತ್ರ ಸರ್ವ-ವಸ್ತುಷು ಮನಃಸಂಗರಹಿತಾನಾಂ.....

೧೩. ಸರ್ವತ್ರ ಸರ್ವದಾ ಸರ್ವಾಕಾರ ಸರ್ವಾಧಾರ ಸರ್ವಾ-ಶ್ರಯ ಸರ್ವೋತ್ಪಾದಕ ಸರ್ವಪಾಲಕ ಸರ್ವಸಂಹಾರಕ ಸರ್ವ-ನಿಯಾಮಕ ಸರ್ವಪ್ರೇರಕ ಸರ್ವಪ್ರವರ್ತಕ ಸರ್ವನಿವರ್ತಕ ಯಥಾಯೋಗ್ಯಂ ಸರ್ವಜ್ಞಾನಾಜ್ಞಾನಬಂಧಮೋಕ್ಷಪ್ರದ ಸರ್ವ-ಸತ್ತಾಪ್ರದ ಸರ್ವಶಬ್ದವಾಚ್ಯ ಸರ್ವಶಬ್ದಪ್ರವೃತ್ತಿನಿಮಿತ್ತ ಸರ್ವ-ಗುಣಾತಿಪರಿಪೂರ್ಣತಮ ಸರ್ವದೋಷಾತಿದೂರ ಸರ್ವಾಚಿಂತ್ಯ ಸರ್ವೋತ್ತಮ ಸರ್ವೇಶ್ವರ ಸರ್ವಾತ್ಯಂತವಿಲಕ್ಷಣ ಸ್ವಗತಭೇದ-ವಿವರ್ಜಿತತ್ವಾದಿನಾ ಭಗವದ್ದ್ರಷ್ಟೄಣಾಂ.....

೧೪. ಅಭಿಮಾನಾದಿ ಸರ್ವದೋಷದೂರಾಣಾಂ, ಅಸೂಯೇ-ರ್ಷ್ಯಾದ್ಯಶೇಷ ಮನೋದೋಷ ನಿವರ್ತಕಾನಾಂ.....

೧೫. ನಿತ್ಯಾಪರೋಕ್ಷೀಕೃತ ರಮಾಯುಕ್ತಾ ಅಶೇಷ ಭಗವ-ದ್ರೂಪಾಣಾಂ, ಅತ ಏವ ವಿಲೀನಾಶೇಷಪ್ರಕೃತಿಬಂಧಾನಾಂ, ಅತ ಏವ ದೂರೋತ್ಸಾರಿತ ಅಶೇಷಾನಿಷ್ಟಾನಾಂ, ಅತ ಏವ ಅಶೇಷ-ಭಕ್ತಾಶೇಷ ಅನಿಷ್ಟನಿವರ್ತಕಾನಾಂ.....

೧೬. ಪ್ರಣವೋಪಾಸಕಾನಾಂ, ಅಸ್ಮದಾದಿಗುರೂಣಾಂ, ಶ್ರೀಮ-ದಾನಂದತೀರ್ಥಶ್ರೀಮಚ್ಚರಣಾನಾಂ (ಅಂತರ್ಯಾಮಿನ್).....

೧೭. ಅಂತರ್ಯಾಮಿ-ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ-ವಾಸು-ದೇವಾತ್ಮಕ ಶ್ರೀಮದ್ಧ್ವವಲ್ಲಭ ಶ್ರೀಲಕ್ಷ್ಮೀವೇದವ್ಯಾಸಾತ್ಮಕ, ಅಂಡಸ್ಥಿತ-ಅನಂತರೂಪಾವಯವ-ಗುಣ-ಕ್ರಿಯಾ-ಜಾತ್ಯವಸ್ಥಾವಿಶಿಷ್ಟ ರಮಾ-ಯುಕ್ತ ಕ್ಷೀರಾಬ್ಧಿ ಶೇಷಶಾಯಿ ಶ್ರೀಪದ್ಮನಾಭಾತ್ಮಕ....

೧೮. ಅಂಡಾದ್ ಬಹಿರಭಿವ್ಯಕ್ತ-ಶುದ್ಧಸೃಷ್ಟಿತ್ವೇನ ಅಭಿಮತ ಶ್ರೀ-ಚತುರ್ಮುಖ ಮುಖ್ಯಪ್ರಾಣೋಪಾಸ್ಯತ್ವಾದ್ಯನೇಕ ಪ್ರಯೋಜನಕ ಅನಂತಾನಂತರೂಪಮೂಲಭೂತ, ತಥಾ ಅಶೇಷಜಗತ್ಪಾಲನ-ಪ್ರಯೋಜನಕ ಶಾಂತಿಪತಿ ಅನಿರುದ್ಧಮೂಲಭೂತ, ತಥಾ ಅಶೇಷ ಜಗತ್ಸೃಷ್ಟಿ ಪ್ರಯೋಜನಕ ಕೃತಿಪತಿ ಪ್ರದ್ಯುಮ್ನ ಮೂಲಭೂತ, ತಥಾ ಅಶೇಷ ಜಗತ್ಸಂಹಾರ ಪ್ರಯೋಜನಕ ಜಯಾಪತಿ ಸಂಕರ್ಷಣ-ಮೂಲಭೂತ.....

೧೯. ತಥಾ ಸ್ವಸ್ವಸಮಗ್ರ ಯೋಗ್ಯತಾಭಿಜ್ಞ ಪರಮಾನುಗ್ರಹ-ಶೀಲಭಗವತ್ಪ್ರೇರಿತ ಚತುರ್ಮುಖಾದಿ ಸದ್ಗುರೂಪದಿಷ್ಟ-ಸ್ವಸ್ವಯೋಗ್ಯ ಭಗವದ್ರೂಪಗುಣೋಪಾಸನಯಾ ಸಂಜಾತ ಸ್ವಸ್ವಯೋಗ್ಯ ಭಗವ-ದ್ರೂಪ ವಿಶೇಷದರ್ಶನ ಭೋಗಾಭ್ಯಾಂ ವಿನಷ್ಟಾನಿಷ್ಟ ಸಂಚಿತ ಪ್ರಾರಬ್ಧ-ಲಕ್ಷಣಾಶೇಷ ಕರ್ಮಣಾಂ.....

೨೦. ಸ್ವಸ್ವಯೋಗ್ಯತಾನುಸಾರೇಣ ಸಂಪೂರ್ಣಸಾಧನಾನಾಂ ಪೂರ್ವಕಲ್ಪೇ ಬ್ರಹ್ಮಣಾ ಸಹ ವಿರಜಾನದೀ ಸ್ನಾನೇನ ತ್ಯಕ್ತಲಿಂಗಾನಾಂ, ತಥಾ ವಿನಷ್ಟ-ಅವಶಿಷ್ಟ-ಇಷ್ಟಾಶೇಷಪ್ರಾರಬ್ಧಕರ್ಮಣಾಂ, ಪ್ರಲಯ-ಕಾಲೇ ಭಗವದುದರೇ ವಸತಾಂ.....

೨೧. ಆನಂದಮಾತ್ರವಪುಷಾಂ, ತದನುಭವರಹಿತಾನಾಂ, ಸ್ವಸ್ವಯೋಗ್ಯಭಗವದ್ರೂಪ ವಿಶೇಷ ಧ್ಯಾನರತಾನಾಂ, ಸೃಷ್ಟಿಕಾಲೇ ಭಗವದಾಜ್ಞಯಾ ಭಗವದುದರಾದ್ ಬಹಿರ್ಗತಾನಾಂ ಶ್ರೀಶ್ವೇತದ್ವೀಪದರ್ಶನಂ ನಿಮಿತ್ತೀಕೃತ್ಯ ಪ್ರಧಾನಾವರಣಭೂತ ಸ್ವೇಚ್ಛಾಪಸರಣೇನ ಸ್ವಸ್ವಯೋಗ್ಯಾನಂದಾವಿರ್ಭಾವಲಕ್ಷಣ ಮುಕ್ತಿ-ಪ್ರದಾನ ಪ್ರಯೋಜನಕ ಮಾಯಾಪತಿ ಶ್ರೀ ವಾಸುದೇವಾತ್ಮಕ.....

೨೨. ಲಕ್ಷ್ಮ್ಯಾತ್ಮಕ ಪ್ರಲಯಾಬ್ಧಿಸ್ಥ ಶ್ರೀವಟಪತ್ರಶಾಯಿ, ಅಶೇಷ-ಜಗದುದರ, ಅಶೇಷಮುಕ್ತನಾಭಿದೇಶೋರ್ಧ್ವಭಾಗಕುಕ್ಷ್ಯಾಖ್ಯದೇಶ, ತ್ರಿವಿಧಾಶೇಷ ಸಂಸಾರಿನಾಭಿದೇಶ, ಅಶೇಷತಮಃಪತಿತನಾಭ್ಯಧೋ-ಭಾಗದೇಶ, ಶ್ರೀಭೂಮ್ಯಾಲಿಂಗಿತ, ಕಾಲಾದಿಚೇಷ್ಟಕ, ಪರಮಾಣ್ವಾದ್ಯ-ಶೇಷಕಾಲಾವಯವ ಸೃಷ್ಟ್ಯಾದಿಕರ್ತೃ, ಅಶೇಷನಾಮಕ, ಪರಮ-ಪುರುಷನಾಮಕ ಶ್ರೀಚತುರ್ಮುಖಮುಖ್ಯಪ್ರಾಣೋಪಾಸಿತಚರಣ, ಅನಿರುದ್ಧಾದಿ ಚತೂರೂಪಾತ್ಮಕ, ಗಾಯತ್ರೀನಾಮಕ, ಸವಿತೃ-ನಾಮಕರೂಪವಿಶೇಷಾತ್ಮಕ, ವ್ಯಾಪ್ತರೂಪ, ಬೃಹಚ್ಛರೀರ.....

೨೩. ಶೂನ್ಯಾಭಿದ, ಕಾಲಾಭಿದ, ಕೇವಲಾಭಿದ, ಬ್ರಹ್ಮಾಭಿದ, ಅನಂತಾಭಿದರೂಪವಿಶೇಷಾತ್ಮಕ, ನಿರುಪಚರಿತಮೂಲರೂಪ, ನಿರುಪಚರಿತವ್ಯಾಪ್ತಪ್ರತಿಪಾದ್ಯ, ಅನಂತತೇಜಃಪುಂಜ, ತಾದೃಶ-ರಮಾಯುಕ್ತರೂಪವಿಶೇಷಾತ್ಮಕ, ಗಾಯತ್ರೀ-ಭೂತ-ವಾಕ್-ಪೃಥಿವೀ-ಶರೀರ-ಹೃದಯಭೇದೇನ ಷಡ್ವಿಧಗಾಯತ್ರೀನಾಮಕ, ಲೋಕ-ವೇದ-ಸಮೀರ-ರಮಾಂತರ್ಗತಪ್ರಣವಾಖ್ಯ ತುರೀಯಪಾದೋಪೇತ ಗಾಯತ್ರೀಪಾದಚತುಷ್ಟಯಪ್ರತಿಪಾದ್ಯ, ವೈಕುಂಠಸ್ಥಿತ-ಅನಂತಾಸನ-ಸ್ಥಿತ-ಶ್ವೇತದ್ವೀಪಸ್ಥಿತ ಸರ್ವಜೀವಸ್ಥಿತರೂಪಭೇದೇನ, ಚತೂರೂಪಾತ್ಮಕ, ದೇಹವ್ಯಾಪ್ತ-ದೇಹಾಂತರ್ಯಾಮಿ-ಜೀವವ್ಯಾಪ್ತ-ಜೀವಾಂತರ್ಯಾಮಿ-ರೂಪಭೇದೇನ ಚತೂರೂಪಾತ್ಮಕ.....

೨೪. ನಿರುಪಚರಿತ ಸರ್ವವಾಗರ್ಥ ಪ್ರತಿಪಾದಕ, ಶ್ರೀದೇವ್ಯಾದಿ ರಮಾರೂಪಾಷ್ಟಕಾಭಿಮನ್ಯಮಾನ, ಚಕ್ರಶಂಖವರಾಭಯಯುಕ್ತ ಹಸ್ತಚತುಷ್ಟಯೋಪೇತ, ಪ್ರದೀಪವರ್ಣ, ಸರ್ವಾಭರಣಭೂಷಿತ.....

೨೫) ವಿಶ್ವಾದಿಭಗವದ್ರೂಪಾಷ್ಟಕಪ್ರತಿಪಾದಕ-ಅಕಾರಾದ್ಯಷ್ಟಾಕ್ಷರಾತ್ಮಕ ಶ್ರೀಮತ್ಪ್ರಣವಾದ್ಯಷ್ಟ ಮಹಾಮಂತ್ರ ಪ್ರತಿಪಾದ್ಯ ಅಷ್ಟರೂಪಾತ್ಮಕ, ಮಂತ್ರಾಧ್ಯಾಯೋಕ್ತ ಭೂವರಾಹಾದ್ಯಶೇಷ, ವೈಷ್ಣವಮಂತ್ರಪ್ರತಿಪಾದ್ಯ, ಭೂವರಾಹಾದ್ಯಶೇಷ, ರೂಪ ವಿಶೇಷಾತ್ಮಕ ರಮಾದಿಮಂತ್ರ ಪ್ರತಿಪಾದ್ಯ, ರಮಾದಿನಿಷ್ಠ ರಮಾದಿನಾಮಕರೂಪವಿಶೇಷಾತ್ಮಕ ಶ್ರೀಲಕ್ಷ್ಮೀನೃಸಿಂಹಾತ್ಮಕ ಪರಮದಯಾಲೋ, ಕ್ಷಮಾಸಮುದ್ರ, ಭಕ್ತವತ್ಸಲ, ಭಕ್ತಾಪರಾಧಸಹಿಷ್ಣೋ, ದೇಶಕಾಲಾಧಿಪತೇ, ದೇಹೇಂದ್ರಿಯಾಧಿಪತೇ, ಸೂರ್ಯವಂಶಧ್ವಜ, ರಘುಕುಲತಿಲಕ, ಲಕ್ಷ್ಮಣಭರತಶತ್ರುಘ್ನಾಗ್ರಜ ಶ್ರೀಹನುಮದುಪಾಸಿತಚರಣ ಸೀತಾಪತೇ ಶ್ರೀರಾಮಚಂದ್ರ !....

೨೬. ತ್ವದಾಜ್ಞಯಾ ತ್ವತ್‌ಪ್ರಸಾದಾತ್ ತ್ವತ್‌ಪ್ರೇರಣಯಾ ತ್ವತ್-ಪ್ರೀತ್ಯರ್ಥಂ ತ್ವಾಂ ಉದ್ದಿಶ್ಯ ತ್ವಾಂ ಅನುಸ್ಮರನ್ನೇವ ತ್ವದಾಜ್ಞಯಾ ನಿಯತೇನ ಮನ್ನಿಯಾಮಕೇನ ಸತ್ತಾಪ್ರದವಾಯುನಾಮಕ, ಚೇಷ್ಟಾ-ಪ್ರದಪ್ರಾಣನಾಮಕ, ಧಾರಣಾಪ್ರದಧರ್ಮನಾಮಕ, ಮುಕ್ತಿಪ್ರದ-ಭಕ್ತಿನಾಮಕರೂಪವಿಶೇಷೈಃ ಮದ್‌ಹೃದಿಸ್ಥಿತೇನ, ಪರಮದಯಾ-ಲುನಾ, ಕ್ಷಮಾಸಮುದ್ರೇಣ, ಭಕ್ತವತ್ಸಲೇನ, ಭಕ್ತಾಪರಾಧ-ಸಹಿಷ್ಣುನಾ, ಸರ್ವಸ್ವಾಮಿನಾ, ಸರ್ವಪ್ರೇರಕೇಣ, ಸರ್ವತಾತ್ವಿಕ-ದೇವತಾ ಪ್ರೇರಕೇಣ, ಸರ್ವತಾತ್ವಿಕ ಅಸುರಭಂಜಕೇನ, ತಥಾ ತತ್ಪ್ರೇರಣಾ ಪ್ರಯುಕ್ತಾಶೇಷ ದುರ್ಮತಭಂಜಕೇನ ಅತ ಏವ ಪ್ರಭಂಜನಶಬ್ದವಾಚ್ಯೇನ....

೨೭. ಪ್ರತಿದಿನಂ ಪ್ರತಿಕ್ಷಣಂ ಬುದ್ಧಿಶೋಧಕೇನ, ಸರ್ವಕರ್ಮ-ಕರ್ತ್ರಾ, ಸರ್ವಕರ್ಮಕಾರಯಿತ್ರಾ, ಸರ್ವಕರ್ಮಸ್ವಾಮಿನಾ,

ಸರ್ವಕರ್ಮಸಮರ್ಪಕೇಣ, ಸರ್ವಕರ್ಮಫಲಭೋಕ್ತ್ರಾ, ಸರ್ವಕರ್ಮಫಲಭೋಜಯಿತ್ರಾ, ಸರ್ವಕರ್ಮಪ್ರೇರಕೇಣ, ಸರ್ವಕರ್ಮೋದ್ಬೋಧಕೇನ, ಸರ್ವಕರ್ಮಶುದ್ಧಿಪ್ರದೇನ, ಸರ್ವಕರ್ಮಸಿದ್ಧಿಪ್ರದೇನ, ಸರ್ವಕರ್ಮನಿಷ್ಠೇನ, ಸರ್ವಕರ್ಮ-ಸಾಕ್ಷಿಣಾ, ಸರ್ವಕರ್ಮನಿಷ್ಠ-ಭಗವದ್ರೂಪೋಪಾಸಕೇನ.....

೨೮. ಅಶೇಷಜೀವನಿಃಸಂಖ್ಯ-ಅನಾದಿಕಾಲೀನ ಧರ್ಮಾಧರ್ಮ-ದ್ರಷ್ಟ್ರಾ ಸ್ವೇಚ್ಛಯಾ ಉದ್ಬೋಧಕೇನ, ತದ್ವಾಚಕ (ತತ್ಪಾಚಕ) ಕಪಿಲೋಪಾಸಕೇನ ರಮಾವ್ಯತಿರಿಕ್ತ-ಪೂರ್ವಪ್ರಸಿದ್ಧವ್ಯತಿರಿಕ್ತ-ಅನಂತವೇದಪ್ರತಿಪಾದ್ಯ-ಮುಖ್ಯ-ತಮ-ಅನಂತಗುಣ ಪರಿಪೂರ್ಣೇನ, ಸರ್ವದೋಷದೂರೇಣ, ತ್ವಚ್ಚಿತ್ತಾಭಿಜ್ಞೇನ, ತ್ವಚ್ಚಿತ್ತಾನುಸಾರಿಚಿತ್ತೇನ, ತ್ವತ್ಪರಮಾನುಗ್ರಹಪಾತ್ರಭೂತೇನ, ಮದ್ಯೋಗ್ಯತಾಭಿಜ್ಞೇನ, ಶ್ರೀಭಾರತೀರಮಣೇನ, ರುದ್ರಾದ್ಯಶೇಷತಾತ್ವಿಕದೇವತೋಪಾಸಿತ-ಚರಣೇನ, ಮಮ ಸರ್ವಾಸ್ವವಸ್ಥಾಸು ಚಿತ್ರಧಾ ವಿಚಿತ್ರಧಾ ತ್ವದುಪಾಸಕೇನ ಶ್ರೀಮುಖ್ಯಪ್ರಾಣೇನ ಪ್ರೇರಿತಃ ಸನ್.....

೨೯. ತ್ವತ್‌ಸಂಸ್ಮೃತಿಪೂರ್ವಕಂ ಶಯನಾತ್ ಸಮುತ್ಥಾಯ ಅದ್ಯ-ತನಂ ಸ್ವವರ್ಣಾಶ್ರಮೋಚಿತಂ ದೇಶಕಾಲಾವಸ್ಥೋಚಿತಂ ನಿತ್ಯ-ನೈಮಿತ್ತಿಕಕಾಮ್ಯಭೇದೇನ ತ್ರಿವಿಧಂ ತ್ವತ್ಪೂಜಾತ್ಮಕಂ ಕರ್ಮ ಯಥಾಶಕ್ತಿ ಯಥಾಜ್ಞಪ್ತಿ ಯಥಾವೈಭವಂ ಕರಿಷ್ಯೇ, ಮದಾಜ್ಞಾಕಾರಿಭಿಃ ವಿದ್ಯಾ-ಸಂಬಂಧಿಭಿಃ ದೇಹಸಂಬಂಧಿಭಿಶ್ಚ ತ್ವದೀಯೈಃ ಅಶೇಷೈರ್ಜನೈಃ ತತ್-ಸರ್ವಕರ್ಮಕರ್ತೃತ್ವ ಕಾರಯಿತೃತ್ವಾದ್ಯನುಸಂಧಾನಪೂರ್ವಕಂ ಕಾರಯಿಷ್ಯೇ ಚ॥

ಇತಿ ಶ್ರೀರಾಘವೇಂದ್ರಾಖ್ಯಯತಿನಾ ಕೃತಮಂಜಸಾ।
ಪ್ರಾತಃಸಂಕಲ್ಪಗದ್ಯಂ ಸ್ಯಾತ್ ಪ್ರೀತ್ಯೈ ಮಾಧವಮಧ್ವಯೋಃ॥

ಪ್ರಾತಃಕಾಲದಲ್ಲಿ ಭಗವಂತನ ವಿರಾಡ್ರೂಪ (೧೪ ಲೋಕಗಳು ಅವನ ಬೃಹತ್ ಶರೀರದ ಭಾಗಗಳನ್ನು ಆಶ್ರಯಿಸಿರುವ ರೂಪ) ವನ್ನು ಅವಶ್ಯ ಸ್ಮರಿಸಬೇಕು. ವಿವರಗಳು ಭಾಗವತ ೨ನೇ ಸ್ಕಂದ ೧ನೇ ಅಧ್ಯಾಯದ ಶ್ಲೋಕ ೨೬, ೨೭, ೨೮ರಲ್ಲಿ ತಿಳಿಸಲ್ಪಟ್ಟಿವೆ.

**ಭಾಗವತದ ಮೂಲಶ್ಲೋಕಗಳು:**

ಪಾತಾಲಮೇತಸ್ಯ ಹಿ ಪಾದಮೂಲಂ ಪಠಂತಿ ಪಾರ್ಷ್ಣಿಪ್ರಪದೇ ರಸಾತಲಮ್।
ಮಹಾತಲಂ ವಿಶ್ವಸೃಜಃ ಸುಗಲ್ಫೌ ತಲಾತಲಂ ವೈ ಪುರುಷಸ್ಯ ಜಂಘೇ॥ಶ್ಲೋಕ ೨೬॥
ದ್ವೇ ಜಾನುನೀ ಸುತಲಂ ವಿಶ್ವಮೂರ್ತೇಃ ರೂರುದ್ವಯಂ ವಿತಲಂ ಚಾತಲಂ ಚ।
ಮಹೀತಲಂ ತಜ್ಜಘನಂ ಮಹೀಪತೇ ನಭಸ್ತಲಂ ನಾಭಿಸರೋ ಗೃಣಂತಿ॥ಶ್ಲೋಕ ೨೭॥
ಉರಃಸ್ಥಲಂ ಜ್ಯೋತಿರನೀಕಸಮಸ್ಯ ಗ್ರೀವಾ ಮಹರ್ವದನಂ ವೈ ಜನೋಽಸ್ಯ।
ತಪೋ ರರಾಟಿಂ ವಿದುರಾದಿಪುಂಸಃ ಸತ್ಯಂ ತು ಶೀರ್ಷಾಣಿ ಸಹಸ್ರಶೀರ್ಷ್ಣಃ॥ಶ್ಲೋಕ ೨೮॥

ಶ್ರೀ ವಿಜಯದಾಸರು ಈ ಶ್ಲೋಕಗಳ ಭಾವಾರ್ಥಗಳುಳ್ಳ ಒಂದು ಸುಳಾದಿ ರಚಿಸಿದ್ದಾರೆ:

ಚರಣ ತಳದಲ್ಲಿ ಪಾತಾಳಲೋಕ
ಇರುತಿಪ್ಪಾದು ಪಾದದಲ್ಲಿ ರಸಾತಳ
ಮಿರುಗುತಿದೆ ಜಂಘೆಯಲಿ ತಳಾ ತಳ
ಅರಳಿ ನೋಡಲು ಸುತಳ ಜಾನುಪ್ರದೇಶದಲ್ಲಿ
ನಿರುತಸಿದ್ಧವಾಹುದು ವಿತಳ ಲೋಕಭಾಗ
ಭರಿತವಾಗಿದೆ ದೇಹ ಅತಳ ಕೊಳೆಗಳಲ್ಲಿ ಕಟೆ
ತೇರವಿಲೀಹ ಅಂತರಿಕ್ಷ ಭುವರ್ಲೋಕ ನಾಭಿಲು
ಪರಿಭಾಗ ನಭೀಲಿ ಭೂಲೋಕ ಹೃದಯದಲಿ
ಸ್ವರ್ಗ ಕುಕ್ಷಿಲೀ ಮಹರ್ಲೋಕ
ಮರಳೆ ಜನೋ ಲೋಕ ಮುಖದಲ್ಲಿ ಪೋದು
ಮೊರೆನೊಸಳಲ್ಲಿ ಉಂಟು ತಪೋಲೋಕ ಮತ್ತೆ
ಶಿರಸಿನಲ್ಲಿ ಸತ್ಯಲೋಕದ ಅವಸ್ಥ
ಎರಡೇಳು ಭುವನ ಪರಿಪೂರ್ಣವಾಗಿ ನಿನಗೆ
ಭಾರವೆ ಶರಣಾರ ಪರಿತಾಲ ವಿಜಯ ವಿಠಲರೇಯನ
ಸ್ಮರಣೆ ಒಂದಲ್ಲದೆ ಮನುಜಗೆ ಸ್ಥಳಕಾಣೆ

ತಾತ್ಪರ್ಯ: ಶಿಲಾಪ್ರತಿಮೆಯಂತಿರುವ ಬ್ರಹ್ಮಾಂಡದಲ್ಲಿರುವ ೧೪ ಲೋಕಗಳು— ಭಗವಂತನ ವಿರಾಡ್ರೂಪದ ವಿವರ:

ಪಾದತಲ...ಪಾತಾಲ; ಕಾಲಿನ ಹಿಮ್ಮಡಿ...ರಸಾತಲ; ಕಾಲಿನ ಗಂಟು...ಮಹಾತಲ; ಮೀನಖಂಡ...ತಲಾತಲ; ಮೊಣಕಾಲು...ಸುತಲ; ತೊಡೆಗಳು...ಅತಲ-ವಿತಲಗಳು; ಸೊಂಟ...ಭೂಲೋಕ; ನಾಭಿ...ಅಂತರಿಕ್ಷ; ಎದೆಯಭಾಗ...ಸ್ವರ್ಗ; ಕಂಠ...ಮಹರ್ಲೋಕ ಮುಖ...ಜನೋಲೋಕ; ಹಣೆಯಭಾಗ...ತಪೋಲೋಕ; ಶಿರಸ್ಸು...ಸತ್ಯಲೋಕ; ಹೀಗೆ ಭಗವಂತನ ಅಂಗಗಳನ್ನು ೧೪ ಲೋಕಗಳು ಆಶ್ರಯಿಸಿವೆ.

(ಅಂತ್ಯಭಾಗದಲ್ಲಿರುವ 'ಎರಡೇಳು ಭುವನ'— ಪದಗಳಿಗೆ ೧೪ ಲೋಕಗಳು ಎಂದರ್ಥ). ಈ ರೀತಿಯ ವಿರಾಡ್ರೂಪದ ಸ್ಮರಣೆ ಆವಶ್ಯಕವಾಗಿದೆ ಎಂದು ವಿಜಯದಾಸರು ಅಪ್ಪಣೆ ಮಾಡಿದ್ದಾರೆ.

# ಪ್ರಾತಃಸಂಕಲ್ಪಗದ್ಯಮ್

## ಪ್ರತಿಪದಾರ್ಥ, ತಾತ್ಪರ್ಯ ಮತ್ತು ಪ್ರಮೇಯ ವಿವರಣೆ

**೧. ಲೌಕಿಕ ವೈದಿಕ ಭೇದ ಭಿನ್ನ ವರ್ಣಾತ್ಮಕ ಧ್ವನ್ಯಾತ್ಮಕಾ ಅಶೇಷ ಶಬ್ದಾರ್ಥ-ಋಗಾದಿಸರ್ವವೇದಾರ್ಥ-ವಿಷ್ಣುಮಂತ್ರಾರ್ಥ ಪುರುಷಸೂಕ್ತಾರ್ಥ-ಗಾಯತ್ರ್ಯರ್ಥ-ವಾಸುದೇವದ್ವಾದಶಾಕ್ಷರ ಮಂತ್ರಾಂತರ್ಗತ ಆದ್ಯ ಅಷ್ಟಾಕ್ಷರಾರ್ಥ ಶ್ರೀಮನ್ ನಾರಾ-ಯಣಾಷ್ಟಾಕ್ಷರಮಂತ್ರಾರ್ಥ ವಾಸುದೇವದ್ವಾದಶಾಕ್ಷರ ಮಂತ್ರಾಂತರ್ಗತ ಅಂತ್ಯ ಚತುರಕ್ಷರಾರ್ಥ-ವ್ಯಾಹೃತ್ಯರ್ಥ-ಮಾತೃಕಾಮಂತ್ರಾರ್ಥ-ಪ್ರಣವೋಪಾಸಕಾನಾಂ.....**

ಪ್ರತಿಪದಾರ್ಥ: ಲೌಕಿಕ ವೈದಿಕ ಭೇದ ಭಿನ್ನ— ಲೌಕಿಕ ವೈದಿಕಗಳೆಂಬ ಭೇದ ವ್ಯವಹಾರದಿಂದ ಭಿನ್ನಗಳೂ, ವರ್ಣಾತ್ಮಕ ಧ್ವನ್ಯಾತ್ಮಕ— ವರ್ಣರೂಪವೂ ಧ್ವನಿರೂಪವೂ ಆದ, ಅಶೇಷ ಶಬ್ದಾರ್ಥ— ಸಕಲ ಶಬ್ದಾರ್ಥಗಳನ್ನೂ, ಋಗಾದಿ ಸರ್ವವೇದಾರ್ಥ ವಿಷ್ಣು-ಮಂತ್ರಾರ್ಥ— ಋಗ್ವೇದ ಮೊದಲಾದ ವೇದಗಳ ಅರ್ಥಭೂತವಾದ ವಿಷ್ಣುಮಂತ್ರಾರ್ಥ-ವನ್ನೂ, ಪುರುಷಸೂಕ್ತಾರ್ಥ— ಪುರುಷಸೂಕ್ತದ ಅರ್ಥವನ್ನೂ, ಗಾಯತ್ರ್ಯರ್ಥ— ಗಾಯತ್ರೀ ಮಂತ್ರಾರ್ಥವನ್ನೂ, ವಾಸುದೇವ ದ್ವಾದಶಾಕ್ಷರ ಮಂತ್ರಾಂತರ್ಗತ— 'ಓಂ ನಮೋ ಭಗವತೇ ವಾಸುದೇವಾಯ' ಎಂಬ ೧೨ ಅಕ್ಷರಗಳುಳ್ಳ ಮಂತ್ರದಲ್ಲಿರುವ, ಆದ್ಯಷ್ಟಾಕ್ಷರಾರ್ಥ— ಮೊದಲಿನ ಎಂಟು ಅಕ್ಷರ ಪ್ರತಿಪಾದ್ಯಗಳೂ, ಶ್ರೀಮನ್ನಾರಾಯಣಾಷ್ಟಾಕ್ಷರ ಮಂತ್ರಾರ್ಥ— 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರಗಳುಳ್ಳ ಶ್ರೇಷ್ಠ ಮಂತ್ರ ಪ್ರತಿಪಾದ್ಯಗಳೂ, ವಾಸುದೇವ ದ್ವಾದಶಾಕ್ಷರ ಮಂತ್ರಾಂತರ್ಗತ (ಅದೇ) ದ್ವಾದಶಾಕ್ಷರ (ವಾಸುದೇವ) ಮಂತ್ರದ, ಅಂತ್ಯ ಚತುರಕ್ಷರಾರ್ಥ— ಕಡೆಯ ನಾಲ್ಕಕ್ಷರ ಪ್ರತಿಪಾದ್ಯಗಳೂ, ವ್ಯಾಹೃತ್ಯರ್ಥ— ಭೂರಾದಿ ವ್ಯಾಹೃತಿಗಳಿಂದ ಪ್ರತಿಪಾದ್ಯಗಳೂ, ಮಾತೃಕಾ ಮಂತ್ರಾರ್ಥ ಅಕಾರಾದಿ ೫೦ ವರ್ಣ ಪ್ರತಿಪಾದ್ಯಗಳೂ, ಆದ ಉತ್ಕೃಷ್ಟ ಭಗವದ್ರೂಪಗಳೆಲ್ಲವನ್ನೂ ಪ್ರತಿಪಾದಿಸುವ (ಅರ್ಥಗಳನ್ನೊಳಗೊಂಡ), ಪ್ರಣವೋಪಾಸಕಾನಾಂ— ಪ್ರಣವ (ಓಂ) ಮಂತ್ರೋಪಾಸನೆಯಲ್ಲಿ ಮುಖ್ಯಾಧಿಕಾರಿಗಳಾದ ಪ್ರಧಾನ ವಾಯುದೇವರ;

ತಾತ್ಪರ್ಯ: ಲೌಕಿಕ ವೈದಿಕ ಭೇದದಿಂದ ಬಹು ಪ್ರಕಾರವಾಗಿರುವ ಸಮಸ್ತ ವರ್ಣಗಳಿಂದಲೂ, ಧ್ವನಿರೂಪದ ಸರ್ವಶಬ್ದಗಳಿಂದಲೂ ಹೇಳಲ್ಪಡುವ ಎಲ್ಲ ಅರ್ಥ ಗಳನ್ನೂ; ಋಗಾದಿ ವೇದಾರ್ಥಗಳನ್ನೂ, ವಿಷ್ಣುಮಂತ್ರ, ಪುರುಷಸೂಕ್ತ ಮತ್ತು ಗಾಯತ್ರೀ ಮಂತ್ರಗಳ ಅರ್ಥಗಳನ್ನೂ; *'ಓಂ ನಮೋ ಭಗವತೇ ವಾಸು-ದೇವಾಯ'* ಎಂಬ (೧೨) ದ್ವಾದಶಾಕ್ಷರ ಮಂತ್ರದ ಮೊದಲಿನ ಅಷ್ಟಾಕ್ಷರ-ಗಳಿಂದಲೂ, *'ಓಂ ನಮೋ ನಾರಾಯಣಾಯ'* ಎಂಬ ಅಷ್ಟಾಕ್ಷರ ಮಂತ್ರದಿಂದಲೂ, ಅದೇ ದ್ವಾದಶಾಕ್ಷರ ಮಂತ್ರದ ಕಡೆಯ ನಾಲ್ಕು ಅಕ್ಷರಗಳಿಂದಲೂ, ಅಕಾರಾದಿ ೫೦

ವರ್ಣ(ಮಾತೃಕಾ)ಗಳಿಂದಲೂ ಪ್ರತಿಪಾದ್ಯವಾದ ಎಲ್ಲ ಭಗವದ್ರೂಪಗಳನ್ನು ತಿಳಿಸುವ ಅರ್ಥವಿಶೇಷಗಳನ್ನು ಒಳಗೊಂಡಿರುವ ಪ್ರಣವಮಂತ್ರದ (ಓಂಕಾರದ) ಉಪಾಸನೆಯಲ್ಲಿ ಮುಖ್ಯಾಧಿಕಾರಿಗಳಾದವರು ಪ್ರಧಾನ ವಾಯುದೇವರು;

ಪ್ರಮೇಯ ವಿವರಣೆ: (೧) ಸಂಸ್ಕೃತದ ಅಕಾರಾದಿ ೫೦ ಅಕ್ಷರಗಳು ನಿತ್ಯ ಮತ್ತು ನಿರ್ವಿಕಾರಗಳಾದ್ದರಿಂದ, ಸಂಸ್ಕೃತವು ಅಪ್ರಾಕೃತ ಭಾಷೆಯೆನಿಸುತ್ತದೆ. ಅದರ ವಿಕಾರಗಳೇ ಆದ ಕನ್ನಡ-ಹಿಂದಿ-ಮಹಾರಾಷ್ಟ್ರ-ಆಂಗ್ಲ-ಜರ್ಮನ್-ರಷ್ಯನ್ ಮೊದಲಾದ ಇತರ ಎಲ್ಲ ಭಾಷೆಗಳೂ ಪ್ರಾಕೃತಗಳೆನಿಸುತ್ತವೆ. ಅನಾದಿನಿತ್ಯವೂ, ಅಪೌರುಷೇಯವೂ ಆದ ವೇದಗಳಲ್ಲಿರುವ ವರ್ಣಗಳೆಲ್ಲ ವೈದಿಕ ವರ್ಣಗಳು; ಪ್ರಾಕೃತ ಭಾಷೆಗಳ ವರ್ಣಗಳೆಲ್ಲ ಲೌಕಿಕ ವರ್ಣಗಳು.

(೨) ವರ್ಣಗಳ ಮೇಳನದಿಂದ ಪದಗಳೂ ನಾನಾಪದಗಳಿಂದ ವಾಕ್ಯಗಳೂ ಏರ್ಪಡುತ್ತವೆ. ವಾಕ್ಯ-ಪದಗಳಿಂದ ಮಾತ್ರವಲ್ಲದೇ ಸಕಲ ವರ್ಣಗಳಿಂದ ಸಹ ಮುಖ್ಯವಾಚ್ಯನು-ಶ್ರೀಹರಿ; ಎಂದರೆ ಅವೆಲ್ಲವೂ ಶ್ರೀಹರಿ ಸ್ವರೂಪದಿಂದ ಅಭಿನ್ನಗಳಾದ ಆತನ ಮಹಿಮೆಗಳನ್ನೇ ಹೇಳುತ್ತವೆ. ಶ್ರೀಹರಿಯು ಸರ್ವಶಬ್ದವಾಚ್ಯನೆಂಬ ಪ್ರಮೇಯವು ಬ್ರಹ್ಮಸೂತ್ರಗಳ ಮೊದಲನೇ ಅಧ್ಯಾಯದಲ್ಲಿ ಯುಕ್ತಿಸಹಿತ ಪ್ರಮಾಣಗಳಿಂದ, ಸಾಧಿಸಲ್ಪಟ್ಟಿದೆ. ಶಬ್ದಗಳು ವರ್ಣಾತ್ಮಕ ಮತ್ತು ಧ್ವನ್ಯಾತ್ಮಕವೆಂದು ಎರಡು ವಿಧ. ವಿವಿಧ ಧ್ವನಿಗಳಿಂದ ಭಿನ್ನವರ್ಣಗಳು ವ್ಯಂಗ್ಯವಾಗುವುವೆಂದು ಹೇಳಲಾಗುತ್ತದೆ. ಐತರೇಯೋಪನಿಷದ್ಭಾಷ್ಯದಲ್ಲಿ ಸಮುದ್ರ, ಮೇಘಾದಿಗಳಿಂದಲೂ, ವೃಕ್ಷಪತನ ಭೇರಿ ತಾಡನಾದಿಗಳಿಂದಲೂ ಹೊರಡುವ ಸಕಲ ಧ್ವನ್ಯಾತ್ಮಕ ಶಬ್ದಗಳೂ ವಿಷ್ಣುಮಹಿಮೆಗಳನ್ನು ಹೇಳುವ ಆತನ ನಾಮಗಳೆಂದು ಹೇಳಲಾಗಿದೆ. ಎಲ್ಲ ನಾಮಗಳ ವ್ಯಾಹೃತಿಯು ಒಂದೇ ಎಂದರೆ ವಿಷ್ಣುವಿನ ನಿರ್ದೋಷತ್ವ ಗುಣಪೂರ್ಣತ್ವಗಳನ್ನು ನಿರೂಪಿಸುವ ಏಕಮಾತ್ರ ಪ್ರವೃತ್ತಿಯುಳ್ಳವುಗಳು. ಬೃಹತ್ಸಂಹಿತೆ ಎಂಬ ಗ್ರಂಥದಲ್ಲಿ ಧ್ವನ್ಯಾತ್ಮಕ ಶಬ್ದಗಳನ್ನು ಶ್ರೀವಿಷ್ಣುವಿನಲ್ಲಿ ಸಮನ್ವಯಗೊಳಿಸುವ ಪ್ರಕಾರವು ಪ್ರದರ್ಶಿಸಲ್ಪಟ್ಟಿದೆ. ಹುಂಕಾರವು, ಪರಾಭವ ಶಕ್ತಿಯನ್ನು ಹೇಳುತ್ತದೆ. ಸಮುದ್ರಘೋಷದಿಂದ ವ್ಯಂಗ್ಯವಾಗುವ ಹುಂಕಾರವು ವಿಷ್ಣುವಿನ ಸರ್ವಾತಿಕ್ರಮಣಶಕ್ತಿಯನ್ನು ಸಾರುತ್ತದೆ. ಮೇಘಗಳಲ್ಲಿರುವ ವಾಯುವು ಸದಾ 'ಓಂ' ಎಂದು ಧ್ವನಿಗೈಯುತ್ತದೆ. ಓಂಕಾರವು ಸರ್ವಾಧಿಕ ಉತ್ಕೃಷ್ಟತೆಯನ್ನು ಹೇಳುತ್ತದೆ. ಇದರಿಂದ (ಮೇಘನಾದದಿಂದ) ವಿಷ್ಣುವೇ ಸರ್ವೋತ್ತಮನೆಂದು ಮೇಘವು ಘೋಷಿಸುತ್ತದೆಂದು ತಿಳಿಯಬೇಕು.

ಮಂದ್ರ, ಅನುದಾತ್ತ, ಸ್ವರಿತ ಮತ್ತು ಉದಾತ್ತಗಳೆಂಬುವು ಸ್ವರವಿಶೇಷಗಳು. ಇವು, ಕ್ರಮದಿಂದ ನೀಚೋಚ್ಚಸ್ಥಾಯಿಗಳು ಮತ್ತು ತಾಲುವಿನ (ನಾಲಿಗೆಯ) ಅಧ-ಮೂಲ-ಮಧ್ಯ-ಮೇಲ್ಭಾಗಗಳಿಂದ ಉಚ್ಚರಿಸಲ್ಪಡುತ್ತವೆ. ಅನುದಾತ್ತ ರೂಪದ

ಭೇರಿನಾದವು ಸರ್ವಶಕ್ತನಾದ ವಿಷ್ಣುವಿನ ಔದಾರ್ಯವನ್ನು ಸಾರುತ್ತದೆ. ಸ್ವರಿತ-ರೂಪದ ಘಂಟಾನಾದ ಮೊದಲಾದ ಶಬ್ದಗಳು, ಇತರ ಸರ್ವವೂ ವಿಷ್ಣುವಿನಿಂದ ನೀಚವೆಂದು ಸಾರುತ್ತವೆ. ಸ್ವರ್ಣಸಂಚು (ವಾದ್ಯ ವಿಶೇಷ-ನಾಗಸ್ವರ) ಮೊದಲಾದ ಉದಾತ್ತಸ್ವರಗಳು ವಿಷ್ಣುವಿನ ನಿತ್ಯೋತ್ತಮತ್ವವನ್ನು ನಿರೂಪಿಸುತ್ತವೆ. ತೀವ್ರ ಸಂಯೋಗ-ವಿಲ್ಲದ (ಸಮಸ್ಥಿತಿಯುಳ್ಳ) ಶ್ವಾಸಾದಿಗಳಿಂದ ಮಂದ್ರಸ್ವರವು ಪ್ರಕಟವಾಗುತ್ತದೆ. ಮಂದ್ರ-ಸ್ವರವು ವಿಷ್ಣುವಿನ ಅಚಲವಾದ ಏಕಪ್ರಕಾರ ಸ್ಥಿತಿಯನ್ನು ವರ್ಣಿಸುತ್ತದೆ. ದಧಿಮಂಥನ (ಮೊಸರು ಕಡೆಯುವುದು), ವೃಕ್ಷಪತನಾದಿ ಧ್ವನಿಗಳು ಅಂತರ್ನಾದ ವ್ಯಂಜಕಗಳು. ಇವು ವಿಷ್ಣುವಿನ ಭೀಷಕತ್ವ ಗುಣವನ್ನು ಹೇಳುತ್ತವೆ. (ಎಂದರೆ ವಿಷ್ಣುವಿಗೆ ಭಯಪಡದ ವಸ್ತುವಿಲ್ಲ.)

ವರ್ಣಗಳೇ ಗುಣವಾಚಕವಾಗಬಲ್ಲವು—ಘೋಷಗಳಲ್ಲ—ಎಂಬ ಶಂಕೆಯು ಯುಕ್ತವಲ್ಲ. ಘೋಷಗಳಿಂದ ವ್ಯಂಗ್ಯವಾಗುವುವೆಂಬ ವರ್ಣಗಳಿಗೆ ಔಪಚಾರಿಕ ಅರ್ಥಗಳನ್ನು ಕಲ್ಪಿಸಲಾಗುತ್ತದೆಂದೂ ತಿಳಿಯಕೂಡದು. ಅಕಾರಾದಿ ವರ್ಣ ವ್ಯಂಜ-ಕತ್ವವೂ ಇಲ್ಲದ ಗರ್ಗರ—ಗೋಧಾದಿಗಳ (ಚಿಟ್ಟೆ, ಹಲ್ಲಿ ಮೊದಲಾದ ಜಂತುಗಳ) ನಾದಗಳೂ ವರ್ಣಸೂಚಕಗಳೆಂದು ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧಿ ಇದೆ. ಆದ್ದರಿಂದ ವರ್ಣಾತ್ಮಕ, ಧ್ವನ್ಯಾತ್ಮಕ ಸರ್ವಶಬ್ದಗಳೂ ವಿಷ್ಣುಗುಣಾತಿಶಯಗಳನ್ನೇ ಹೇಳುತ್ತವೆಂದು ತಿಳಿಯಬೇಕು.

(೩) ನಾನಾ ಶಾಖೋಪಶಾಖೆಗಳುಳ್ಳ ಋಕ್, ಯಜು, ಸಾಮ ಮತ್ತು ಅಥರ್ವಣ-ಗಳೆಂಬ ನಾಲ್ಕು ವೇದಗಳಲ್ಲಿಯೂ, ವಿಷ್ಣುಮಂತ್ರ, ಪುರುಷಸೂಕ್ತ ಮತ್ತು ಗಾಯತ್ರೀ ಮಂತ್ರಗಳಲ್ಲಿಯೂ ಹೇಳಲ್ಪಡುವ ವಿಷ್ಣು ಗುಣಗಳೆಲ್ಲವನ್ನೂ ಪ್ರಣವಮಂತ್ರವು (ಓಂಕಾರವು) ಪ್ರತಿಪಾದಿಸುತ್ತದೆ. ಓಂಕಾರವು ಸರ್ವವಾಗಾತ್ಮಕ—ಸರ್ವಶಬ್ದಾರ್ಥ-ವನ್ನೊಳಗೊಂಡಿದೆ. ವಿರಿಂಚನು ಸರ್ವವೇದಗಳಿಂದ ವಿಷ್ಣುವನ್ನು ಸ್ತುತಿಸಿ, ಆತನ ಪ್ರಸನ್ನತೆಯಿಂದ ದೇಹದಾರ್ಢ್ಯವನ್ನು ಹೊಂದಿ, ಆ ವಿಷ್ಣುವನ್ನು ಸ್ವದೇಹದಲ್ಲಿ ಧರಿಸಿ-ದನು. ಆದರಿಂದ ವೇದಪ್ರತಿಪಾದ್ಯನಾದ ವಿಷ್ಣುವು 'ಸಂಹಿತಾ' ಎಂಬ ನಾಮ-ವುಳ್ಳವನಾದನು. ವಿಷ್ಣುನಾಮದಲ್ಲಿರುವ 'ಣ'ಕಾರವು ಪೂರ್ಣಬಲವನ್ನೂ, 'ಷ' ಕಾರವು ದೇಶ ಕಾಲ ಗುಣಗಳಿಂದ ವ್ಯಾಪ್ತಿಯನ್ನೂ, ಎಲ್ಲ ಸಂತೆಗಳು ಣ ಕಾರ ಷ ಕಾರಾರ್ಥವುಳ್ಳವುಗಳೆಂಬುದನ್ನೂ ಯಾವುದೇ ಎರಡಕ್ಷರಗಳ ಸಂಯೋಗರೂಪದ ಸಂತೆಯಿಂದ ಈ ಅರ್ಥಗಳೇ ಮುಖ್ಯ ಪ್ರತಿಪಾದ್ಯಗಳೆಂಬುದನ್ನೂ, 'ವಿ'ಕಾರದಿಂದ ವಿಷ್ಣುವಿನ ಉತ್ಕೃಷ್ಟತೆಯನ್ನೂ, ಅಂತ್ಯದಲ್ಲಿರುವ 'ಉ'ಕಾರದಿಂದ ಸರ್ವದಾ ಈ ಸ್ವಭಾವವುಳ್ಳವನೆಂದೂ ಹೇಳುತ್ತದೆಂಬುದನ್ನೂ ತಿಳಿಯುವವನೇ ವಿಷ್ಣುಜ್ಞಾನಿಯೆಂದು

ಐತರೇಯ ಭಾಷ್ಯದಲ್ಲಿ ಉಕ್ತವಾಗಿದೆ. ವಿಷ್ಣುಮಂತ್ರವು ಅಷ್ಟಮಹಾಮಂತ್ರಗಳಲ್ಲಿ ಒಂದಾಗಿದೆ. ಮುಂದಿನ ವಿವರಣೆಗಳಲ್ಲಿ ಪುನಃ ಪ್ರಸಕ್ತವಾಗುತ್ತದೆ.

(೪) ಸಕಲ ವೇದಾರ್ಥಭೂತವಾದ ವಿಷ್ಣುಮಂತ್ರದಿಂದ ಪ್ರತಿಪಾದ್ಯವಾದ ಸರ್ವಾರ್ಥಗಳನ್ನು ಓಂಕಾರವು ಒಳಗೊಂಡಿದೆ. ಭೂಃ, ಭುವಃ, ಸ್ವಃ ಎಂಬವು ಓಂಕಾರದ ವ್ಯಾಖ್ಯಾನವಾಗಿದ್ದು, ವ್ಯಾಹೃತಿಗಳೆಂದು ಕರೆಯಲ್ಪಡುತ್ತವೆ. ಈ ವ್ಯಾಹೃತಿ-ಗಳ ವ್ಯಾಖ್ಯಾನವೇ *'ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್'* ಎಂಬ ಗಾಯತ್ರೀ ಮಂತ್ರದ ಮೂರು ಪಾದಗಳು. ಗಾಯತ್ರ್ಯರ್ಥದ ವಿವರಣೆಯೇ ಪುರುಷಸೂಕ್ತವು. ಪುರುಷಸೂಕ್ತದ ವಿಸ್ತಾರವೇ ಸಕಲ ವೇದಗಳು. ಈ ವಿಧ ಪ್ರಾಧಾನ್ಯವುಳ್ಳ ಪುರುಷಸೂಕ್ತವು ಅಷ್ಟಮಹಾಮಂತ್ರಗಳ-ಲ್ಲೊಂದಾಗಿದೆ. ಅನಂತ ಮಹಿಮನಾದ ಶ್ರೀಹರಿಯ ಹಲವಾರು ಮಹಿಮೆಗಳನ್ನು ವೇದಗಳ ಒಂದೊಂದು ಭಾಗವೂ (ಶಾಖೋಪಶಾಖೆಗಳು) ವರ್ಣಿಸಿ, ಆ ಗುಣ-ಧ್ಯಾನದ ಉಪಾಸನಾ ಕ್ರಮವನ್ನು (ವಿದ್ಯೆಯನ್ನು) ನಿರೂಪಿಸುತ್ತದೆ. ಉಪಾಸನಾಧಿ-ಕಾರಿಗಳಾದ ಜೀವರು ಭಿನ್ನ ಯೋಗ್ಯತೆಗಳುಳ್ಳವರು. ಎಲ್ಲರೂ ಶ್ರೀಹರಿಯ ಎಲ್ಲ ಗುಣಗಳನ್ನಾಗಲಿ, ನಿರ್ದಿಷ್ಟ ಹಲವು ಗುಣಗಳನ್ನಾಗಲಿ ಉಪಾಸಿಸಲಾರರು. ಮುಕ್ತಿಯೋಗ್ಯ ಜೀವರಲ್ಲಿ ಏಕಗುಣೋಪಾಸಕರೂ ಇರುವರು. ಇವರು 'ಆತ್ಮಾ' (ಸ್ವಾಮಿ) ಎಂಬ ಒಂದೇ ಗುಣವಿಶಿಷ್ಟ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ಮನುಷ್ಯೋತ್ತಮರು *'ಓಂ ಆನಂದಾದಯಃ ಪ್ರಧಾನಸ್ಯ ಓಂ'* ಎಂಬ ಸೂತ್ರದಲ್ಲಿ ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕು ಗುಣಗಳುಳ್ಳವನೆಂದು ಭಗವಂತನನ್ನು ಉಪಾಸಿಸಲು ಅರ್ಹರೆಂದು ನಿರ್ಣಯಿಸಲಾಗಿದೆ.

ಮನುಷ್ಯೋತ್ತಮರಿಗಿಂತ ಉತ್ತಮರಾದ ಋಷಿ, ಗಂಧರ್ವ, ದೇವಾದಿಗಳು ಸ್ವಯೋಗ್ಯತಾನುಸಾರವಾಗಿ ಬಹುಗುಣಗಳನ್ನು ಉಪಾಸಿಸುತ್ತಾರೆ. ಬ್ರಹ್ಮ ವಾಯು-ಗಳು ಮಾತ್ರ (ಈ ಪದವಿಗೆ ಅರ್ಹರಾದ ಋಜುಗಣದ ಜೀವರು ಮಾತ್ರ) ಸರ್ವ-ಗುಣಗಳಿಂದ ಉಪಾಸಿಸುತ್ತಾರೆ. ಯಾವ ಅಧಿಕಾರಿಯು ಎಷ್ಟು ಗುಣಗಳನ್ನು ಚಿಂತಿಸಿ ಧ್ಯಾನಿಸಿದರೂ, ಅವನ ಸ್ವರೂಪ ಯೋಗ್ಯತಾನುಗುಣವಾದ ಸಾಕ್ಷಾತ್ಕಾರಕ್ಕೆ ಆವಶ್ಯಕ-ವಾದಷ್ಟು ಭಗವದ್ಗುಣಗಳು ಮಾತ್ರ ಸ್ಪಷ್ಟವಾಗಿ ಏಕದಾ ಧ್ಯಾನದಲ್ಲಿ ಗೋಚರಿಸುತ್ತವೆ. ಗುಣಪ್ರತ್ಯಯ (ಗುಣಜ್ಞಾನ) ಸ್ತತವಾಗಿಯೇ ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಭಗವದ್ಗುಣಗಳು ಒಂದೊಂದೂ ಪರಿಪೂರ್ಣವೂ ಲೋಕ ವಿಲಕ್ಷಣವೂ ಆದುದೆಂದೇ ಚಿಂತಿಸಬೇಕು. ಭಗವಂತನ ಜ್ಞಾನಾನಂದಾದಿ ಗುಣಗಳು ನಮ್ಮ ಅನುಭವದಲ್ಲಿರುವ ಯಾವ (ಯಾರ) ಜ್ಞಾನಾನಂದಾದಿಗಳಂತೆ ಅಲ್ಲ—ವಿಜಾತೀಯ ಗುಣಗಳು.

*'ಆನಂದೋ ನೇದೃಶಾನಂದಃ'* ಇತ್ಯಾದಿ ಶ್ರುತಿಗಳು ಈ ಪ್ರಮೇಯವನ್ನು ಪ್ರಮಾಣೀ-ಕರಿಸುತ್ತವೆ.

ವೇದೋಕ್ತವಾದ ಯಾವ ವಿದ್ಯೆಯಿಂದ ಯಾವ ಶಾಖೋಕ್ತವಾದ ಎಷ್ಟು ಗುಣಗಳ ಪ್ರತ್ಯಯ ವಿಶಿಷ್ಟ ಸಾಕ್ಷಾತ್ಕಾರಕ್ಕೆ ತಾನು ಅರ್ಹನೆಂಬುದನ್ನು ನಿಶ್ಚಯಿಸಿಕೊಂಡು, ನಂತರ ಭಗವದುಪಾಸನೆಯಲ್ಲಿ ತೊಡಗುವುದು, ಸ್ವರೂಪಜ್ಞಾನವಿಲ್ಲದ ಸಾಧನಾ-ವಸ್ಥೆಯಲ್ಲಿರುವ ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ ಸ್ವಸ್ವಶಾಖೋಕ್ತ ಗುಣಜ್ಞಾನವು ಸಾಕಾಗದೆಂದು ಸಕಲರಿಗೂ ಸರ್ವವೇದಾರ್ಥ ಜ್ಞಾನವು ಆವಶ್ಯಕವೆಂದೂ *'ಓಂ ಸರ್ವವೇದಾಂತ ಪ್ರತ್ಯಯಂ ಚೋದನಾದ್ಯ ವಿಶೇಷಾತ್ ಓಂ'* ಎಂಬ ಅಧಿಕರಣ-ದಲ್ಲಿ ನಿರ್ಣಯಿಸಲಾಗಿದೆ. ಬಹುಗುಣೋಪಾಸನೆಯಲ್ಲಿ ಅಧಿಕಾರವಿಲ್ಲದವರಿಗೆ ಸರ್ವವೇದಾರ್ಥ ಜ್ಞಾನವು ವ್ಯರ್ಥವೆಂಬ ಸಂಶಯವು ಸಹಜವಾಗಿ ಉದ್ಭವಿಸುತ್ತದೆ. ಇಲ್ಲಿ ಗಮನಿಸಬೇಕಾದ ಸೂಕ್ಷ್ಮಾಂಶವಿದೆ. ಉಪಾಸನಾಧಿಕಾರಿಗಳಿಗೂ ಜ್ಞಾನಾಧಿಕಾರಿ-ಗಳಿಗೂ ಇರುವ ವ್ಯತ್ಯಾಸವನ್ನು ಲಕ್ಷ್ಯದಲ್ಲಿಡಬೇಕು. ಯಾರು, ಯಾವ ವೇದ ವಿದ್ಯೆ-ಯನ್ನು ಸೇವಿಸಿ, ಅಲ್ಲಿ ಉಕ್ತವಾದ ಗುಣಗಳಿಂದ ಉಪಾಸಿಸಿ, ಆ ಗುಣಪ್ರತ್ಯಯ (ಜ್ಞಾನ) ಸ್ತವಾದ ಭಗವತ್ಸಾಕ್ಷಾತ್ಕಾರವನ್ನು ಹೊಂದುವನೋ, ಅವನು ಆ ವಿದ್ಯೆಗೆ ಉಪಾಸನಾಧಿಕಾರಿಯೆನಿಸುತ್ತಾನೆ; ಇತರರು ಆ ವಿದ್ಯೆಯಲ್ಲಿ ಪ್ರತಿಪಾದ್ಯವಾದ ಭಗವದ್ಗುಣಗಳನ್ನು ತಿಳಿಯುವುದರಲ್ಲಿ ಮಾತ್ರ ಅಧಿಕಾರಿಗಳು. ಇವರನ್ನೇ ಜ್ಞಾನಾಧಿ-ಕಾರಿಗಳೆನ್ನುವರು.

ಸರ್ವರೂ ಸರ್ವಗುಣೋಪಸಂಹಾರದಿಂದ (ಏಕದಾ ಚಿಂತಿಸಿ) ಧ್ಯಾನಿಸಲು ಅರ್ಹರಲ್ಲ. ಸಾಕ್ಷಾತ್ಕಾರದಲ್ಲಿ ತೋರದ ಗುಣಜ್ಞಾನದಿಂದಲೂ ಪ್ರಯೋಜನವುಂಟು. ಸ್ವಯೋಗ್ಯತಾನುಗುಣವಾದ ಸಾಕ್ಷಾತ್ಕಾರಕ್ಕೆ ಅವಶ್ಯವಾದಷ್ಟು ಗುಣಗಳು ಸ್ಪಷ್ಟವಾಗಿ ಏಕದಾ ಗೋಚರಿಸಲು ಮತ್ತು ಯಥಾಯೋಗ್ಯವಾದ ಪೂರ್ಣತ್ವ ಲೋಕವಿಲಕ್ಷಣತ್ವ-ಗಳ ಭಾವನೆಗೆ, ಇತರ ಗುಣಗಳ ಜ್ಞಾನವು ಸಹಾಯಕವಾಗುತ್ತದೆ. ಈ ಕಾರಣ-ದಿಂದಲೇ ದೇವಾಧಿಕಾರಿಕವಾದ ಐತರೇಯಾದಿ ಉಪನಿಷತ್ತುಗಳಲ್ಲಿ (ಮಧು ಮೊದ-ಲಾದ ವಿದ್ಯೆಗಳ ನಿರೂಪಣೆಯಲ್ಲಿ) ಮನುಷ್ಯೋತ್ತಮರು ಜ್ಞಾನಾಧಿಕಾರಿಗಳು ಮಾತ್ರ-ವೆಂದೂ ಆ ವಿದ್ಯೆಗಳು ದೇವಾಧಿಕಾರಿಕವೆಂದೂ ಹೇಳಿರುವುದನ್ನು ಕಾಣುತ್ತೇವೆ. ಓಂಕಾರದಲ್ಲಿ, ವಿಷ್ಣುಮಂತ್ರದಲ್ಲಿ ಅಥವಾ ಆತ್ಮ ಮೊದಲಾದ ಒಂದೊಂದು ಶಬ್ದ-ಗಳಲ್ಲಿ, ಸರ್ವವೇದ ಪ್ರತಿಪಾದ್ಯ ಗುಣಗಳು ಅಡಕವಾಗಿದ್ದರೂ, ಅದನ್ನರಿತು ಉಪಾಸಿಸಿ ಸರ್ವಗುಣ ಪ್ರತ್ಯಯ ಸ್ತ ಸಾಕ್ಷಾತ್ಕಾರವನ್ನು ಹೊಂದುವ ಸಾಮರ್ಥ್ಯ-ವುಳ್ಳವರು ಬ್ರಹ್ಮವಾಯುಗಳು ಮಾತ್ರ. ಅಶಕ್ತರಿಗಾಗಿಯೇ ಶ್ರೀ ಬಾದರಾಯಣರು

ವೇದಗಳನ್ನು ಶಾಖೋಪಶಾಖೆಗಳನ್ನಾಗಿ ವಿಭಾಗಿಸಿ ಉಪದೇಶಿಸಿರುವರು. ಸ್ವಶಕ್ತಿಯ ಜ್ಞಾನವಿಲ್ಲದ ಸಾಧಕರು ತಮಗೆ ಸಾಧ್ಯವಾದಷ್ಟು ಗುಣಗಳ ಜ್ಞಾನಮಾಡಿಕೊಂಡು, ಏಕದಾ ಶಕ್ಯವಿದ್ದಷ್ಟು ಗುಣಗಳನ್ನು ಚಿಂತಿಸಿ ಧ್ಯಾನಿಸಲು ಯತ್ನಿಸಬೇಕು. ಸಂಪಾದಿತ ಜ್ಞಾನವೆಲ್ಲವೂ ಸಂಸ್ಕಾರ ರೂಪದಿಂದ ಮನಸ್ಸಿನಲ್ಲಿ ಅಡಗಿದ್ದು ತನ್ನ ಪ್ರಭಾವವನ್ನು ಬೀರುತ್ತಿರುತ್ತದೆ. ಜನ್ಮಾಂತರ ಸಂಸ್ಕಾರಗಳನ್ನು ಹೊತ್ತು ನಾನಾ ದೇಹಗಳಿಂದ ಸಾಧನೆ-ಯನ್ನು ಮುಂದುವರಿಸಿಕೊಳ್ಳುವ ಜೀವರಿಗೆ ಸರ್ವವೇದಾರ್ಥ ಜ್ಞಾನಕ್ಕಾಗಿ ಯತ್ನಿಸು-ವುದು ದುಸ್ಸಾಧ್ಯವೇನಲ್ಲ. ಆ ವಿಶಿಷ್ಟ ಜ್ಞಾನದ ಸ್ಫುರಣೆಯು ಪ್ರತಿ ಜನ್ಮದಲ್ಲಿರಬೇಕೆಂಬ ನಿಯಮವಿಲ್ಲ.

ಸರ್ವ ವೇದಗಳ ಸಂಗ್ರಹವೆಂದು ಹೇಳಲ್ಪಡುವ ಪುರುಷಸೂಕ್ತವು ಎಲ್ಲ ವಿದ್ಯೆ-ಗಳಿಗಿಂತ ಹೆಚ್ಚಾಗಿ ವಿಷ್ಣುಗುಣಗಳನ್ನು ಹೇಳುತ್ತದೆ—ಎಲ್ಲ ಗುಣಗಳನ್ನಲ್ಲ. *'ಸರ್ವತಃ ಪೌರುಷೇಸೂಕ್ತೇ ಗುಣಾ ವಿಷ್ಣೋರುದೀರಿತಾಃ। ತತ್ರಾಪಿ ನೈವ ಸರ್ವೇಽಪಿ ತಸ್ಮಾತ್ಕಾರ್ಯೋಽಪಸಂಹೃತಿಃ॥'* ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. *'ಕೃತ್ಸ್ನೋಽಧಿ-ಗಂತವ್ಯಃ ಸರಹಸ್ಯೋ ದ್ವಿಜನ್ಮನಾ?' 'ಸರ್ವಾನ್ ವೇದಾನ್ ಸೇತಿಹಾಸಾನ್ಸ-ಪುರಾಣಾನ್ ಸಯುಕ್ತಿಕಾನ್। ಸಪಂಚರಾತ್ರಾನ್ ವಿಜ್ಞಾಯ ವಿಷ್ಣುರ್ಜ್ಞೇಯೋ ನ ಚಾನ್ಯಥಾ॥' 'ತಸ್ಮಾದೇನಂ ಸರ್ವವೇದಾನಧೀತ್ಯ ವಿಚಾರ್ಯ ಚ ಜ್ಞಾತುಮಿಚ್ಛೇತ್ (ಅಥವಾ ನ್ಮುಮುಕ್ಷುಃ) ಮುಮುಕ್ಷುಃ'* ಇತ್ಯಾದಿ ಶ್ರುತಿ ಸ್ಮೃತಿಗಳು ಈ ಪ್ರಮೇಯವನ್ನು ನಿರ್ಣಯಿಸಿ ನಿರೂಪಿಸುತ್ತವೆ. ..ೕಗಿರುವುದರಿಂದ ಪುರುಷಸೂಕ್ತದಿಂದ ಸರ್ವರೂ ಸರ್ವ ವೇದಾರ್ಥಗಳನ್ನು ತಿಳಿಯಲಾರರು. ಅಲ್ಲಿ ಸರ್ವವನ್ನೂ ಹೇಳಿಲ್ಲವೆಂದು ಹೇಳುವ, ಮೇಲೆ ಉದಹರಿಸಿರುವ ಬ್ರಹ್ಮತರ್ಕದ ವಾಕ್ಯದ ಅರ್ಥವನ್ನು, ಸರ್ವಾಧಿ-ಕಾರಿಗಳು ಗ್ರಸುವ ರೀತಿಯಲ್ಲಿ ಪ್ರತಿಪಾದಿಸಿಲ್ಲವೆಂದು ತಿಳಿಯಬೇಕು. ಪುರುಷ-ಸೂಕ್ತಾರ್ಥವನ್ನು ತಿಳಿದು ಉಪಾಸಿಸುವ ಉಪಾಸಕರಲ್ಲಿ ಸರ್ವವೇದಾರ್ಥಗಳನ್ನು (ಸಮಸ್ತವೇದೋಕ್ತ ಭಗವದ್ಗುಣಗಳನ್ನು) ಚಿಂತಿಸುವ ಶ್ರೀ ವಾಯುದೇವರೇ ಮಹಾಧಿಕಾರಿಗಳೆಂದು ತಿಳಿಸಿದಂತಾಯಿತು.

(೫) 'ಓಂ' ಕಾರವು ಅಕಾರ, ಉಕಾರ, ಮಕಾರ, ನಾದ, ಬಿಂದು ಘೋಷ, ಶಾಂತ, ಅತಿಶಾಂತಗಳೆಂದು ಕರೆಯಲ್ಪಡುವ ಎಂಟು ಅಕ್ಷರಗಳುಳ್ಳದ್ದು. ಈ ಎಂಟು ಅಕ್ಷರಗಳು ಕ್ರಮವಾಗಿ, ವಿಶ್ವ-ತೈಜಸ-ಪ್ರಾಜ್ಞ-ತುರೀಯ (ಜಾಗ್ರತ್-ಸ್ವಪ್ನ-ನಿದ್ರೆ ಸಮಾಧಿ ಮತ್ತು ಮುಕ್ತಿ) ಗಳೆಂಬ ನಾಲ್ಕು ಅವಸ್ಥಾನಿಯಾಮಕ ರೂಪಗಳು—ಆತ್ಮ-ಅಂತರಾತ್ಮ-ಪರಮಾತ್ಮ-ಜ್ಞಾನಾತ್ಮಗಳೆಂಬ ಎಂಟು ರೂಪಗಳನ್ನು ಪ್ರತಿಪಾದಿಸುತ್ತವೆ. ಈ ಎಂಟು ರೂಪಗಳಿಂದ ಶ್ರೀಹರಿಯ ಐವತ್ತು ರೂಪಗಳು ಪ್ರಕಟವಾದವು; ಇವುಗಳನ್ನು

ಅಕಾರಾದಿ ೫೦ ಅಕ್ಷರಗಳು ಪ್ರತಿಪಾದಿಸುತ್ತವೆ—ಕ್ಷಕಾರವು ಶ್ರೀನೃಸಿಂಹರೂಪವನ್ನು ಪ್ರತಿಪಾದಿಸುತ್ತದೆ. ಓಂಕಾರದಲ್ಲಿರುವ ೮ ಅಕ್ಷರಗಳಿಂದ ಪ್ರಕಟವಾದ ೫೦ ಭಗವದ್ರೂಪಗಳು ಯಾವುವೆಂದರೆ—ಅಕಾರದಿಂದ ಅಜ-ಆನಂದ-ಇಂದ್ರ-ಈಶ-ಉಗ್ರ-ಊರ್ಜ-ಋತಂಭರ-ಋೂಘ-ಌಷ ಌಜಿ-ಏಕಾತ್ಮ-ಐರ-ಓಜೋಭೃತ್-ಔರಸ-ಅಂತ-ಅರ್ಧಗರ್ಭ; ಉಕಾರದಿಂದ ಕಪಿಲ-ಖಪತಿ-ಗರುಡಾಸನ-ಘರ್ಮ-ಙಸಾರ; ಮಕಾರದಿಂದ ಚಾರ್ವಂಗ-ಛಂದೋಗಮ್ಯ-ಜನಾರ್ದನ-ಝೂಟಿತರಿ-ಞಮ; ನಾದದಿಂದ ಟಂಕೀ-ಠಲಕ-ಡರಕ-ಢರೀ-ಣಾತ್ಮ ; ಬಿಂದುವಿನಿಂದ ತಾರ-ಥಬ-ದಂಡೀ-ಧನ್ವೀ-ನಮ್ಯ; ಘೋಷದಿಂದ ಪರ-ಫಲೀ-ಬಲೀ-ಭಗ-ಮನು; ಶಾಂತದಿಂದ ಯಜ್ಞ-ರಾಮ-ಲಕ್ಷ್ಮೀಪತಿ-ವರ; ಅತಿಶಾಂತದಿಂದ ಶಾಂತಸಂವಿತ್-ಷಡ್ಗುಣ-ಸಾರಾತ್ಮಾ-ಹಂಸ-ಳಾಳುಕ, ಎಂಬ ೫೦ ರೂಪಗಳು.

ಪ್ರಣವದ ಎಂಟು ಅಕ್ಷರಗಳಿಂದ *'ಓಂ ನಮೋ ನಾರಾಯಣಾಯ'* ಎಂಬ ಅಷ್ಟಾಕ್ಷರಮಂತ್ರದ ಎಂಟು ಅಕ್ಷರಗಳು ಅಭಿವ್ಯಕ್ತವಾದವು, ಎಂದರೆ, ಪ್ರಣವದ ಎಂಟು ಅಕ್ಷರಗಳ ಅರ್ಥವನ್ನು ನಾರಾಯಣ ಮಂತ್ರದ ಎಂಟು ಅಕ್ಷರಗಳು ಕ್ರಮದಿಂದ ಹೇಳುತ್ತವೆ. ಪ್ರಣವದ ಮೊದಲಿನ ನಾಲ್ಕು ಅಕ್ಷರಗಳಿಂದ, ಎಂದರೆ, ಅ-ಉ-ಮ-ನಾದಗಳೆಂಬ ನಾಲ್ಕರಿಂದ, ಭೂಃ-ಭುವಃ-ಸ್ವಃ-ಭೂರ್ಭುವಸ್ವಃ ಎಂಬ ನಾಲ್ಕು ವ್ಯಾಹೃತಿಗಳು ಅಭಿವ್ಯಕ್ತವಾದವು ಎಂದರೆ, ಅವುಗಳ ಅರ್ಥವನ್ನು ಈ ವ್ಯಾಹೃತಿಗಳು ಹೇಳುತ್ತವೆ. ಈ ನಾಲ್ಕು ವ್ಯಾಹೃತಿಗಳಿಂದ, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳು (ಅಥವಾ ವ್ಯುತ್ಕ್ರಮದಿಂದ ಈ ರೂಪಗಳೇ) ಪ್ರತಿಪಾದಿಸಲ್ಪಡುತ್ತವೆ. ಈ ನಾಲ್ಕು ರೂಪಗಳೇ *'ಓಂ ನಮೋ ಭಗವತೇ ವಾಸುದೇವಾಯ'* ಎಂಬ ವಾಸುದೇವ ದ್ವಾದಶಾಕ್ಷರ ಮಂತ್ರದ ನಾಲ್ಕು ಪದಗಳಿಂದ (ಓಂ—ವಾಸುದೇವ; ನಮಃ—ಸಂಕರ್ಷಣ; ಭಗವತೇ—ಪ್ರದ್ಯುಮ್ನ; ವಾಸುದೇವಾಯ—ಅನಿರುದ್ಧ) ಪ್ರತಿಪಾದಿಸಲ್ಪಡುತ್ತವೆ. ನಾರಾಯಣಾಷ್ಟಾಕ್ಷರ ಮಂತ್ರದ ಎಂಟು ಅಕ್ಷರಗಳಿಂದ ಮತ್ತು ಭೂರಾದಿ ನಾಲ್ಕು ವ್ಯಾಹೃತಿಗಳಿಂದ, ವಾಸುದೇವ ದ್ವಾದಶಾಕ್ಷರ ಮಂತ್ರದ ೧೨ ಅಕ್ಷರಗಳು ಪ್ರಕಟವಾದವು. ಈ ೧೨ ಅಕ್ಷರಗಳು, ಕ್ರಮದಿಂದ ಕೇಶವಾದಿ ೧೨ ಭಗವದ್ರೂಪಗಳನ್ನು (ಕೇಶವ-ನಾರಾಯಣ-ಮಾಧವ-ಗೋವಿಂದ-ವಿಷ್ಣು-ಮಧುಸೂಧನ-ತ್ರಿವಿಕ್ರಮ-ವಾಮನ-ಶ್ರೀಧರ-ಹೃಷಿಕೇಶ-ಪದ್ಮನಾಭ-ದಾಮೋದರಗಳೆಂಬುವನ್ನು) ಪ್ರತಿಪಾದಿಸುತ್ತವೆ. ನಾರಾಯಣಮಂತ್ರದ ಎಂಟು ಅಕ್ಷರಗಳಿಂದಲೂ, ನಾಲ್ಕಾವರ್ತಿ ಉಚ್ಚರಿಸಿದ ನಾಲ್ಕು ವ್ಯಾಹೃತಿಗಳಿಂದಲೂ (ಎಂದರೆ ೧೬ ವ್ಯಾಹೃತಿಗಳಿಂದಲೂ), ..ೀಗೆ ಒಟ್ಟು ೨೪ ಅಕ್ಷರಗಳಿಂದ ವೇದ

ಮಾತೃವೆನಿಸಿದ ೨೪ ಅಕ್ಷರಗಳುಳ್ಳ ಗಾಯತ್ರೀ ಮಂತ್ರವು ಅಭಿವ್ಯಕ್ತವಾಯಿತು. ಕೇಶವಾದಿ ೧೨ ಮತ್ತು ಸಂಕರ್ಷಣಾದಿ ೧೨ (ಸಂಕರ್ಷಣ-ವಾಸುದೇವ-ಪ್ರದ್ಯುಮ್ನ-ಅನಿರುದ್ಧ-ಪುರುಷೋತ್ತಮ-ಅಧೋಕ್ಷಜ-ನಾರಸಿಂಹ-ಅಚ್ಯುತ-ಜನಾರ್ದನ-ಉಪೇಂದ್ರ-ಹರಿ-ಕೃಷ್ಣಗಳೆಂಬ ೧೨), ಒಟ್ಟು ಕೇಶವಾದಿ ೨೪ ಭಗವನ್ಮೂರ್ತಿಗಳು ಗಾಯತ್ರಿಯ ೨೪ ಅಕ್ಷರಗಳಿಂದ ಪ್ರತಿಪಾದ್ಯಗಳಾಗಿವೆ.

ಪುರುಷಸೂಕ್ತದ ಮೂರು ವರ್ಗಗಳು ಗಾಯತ್ರಿಯ ಮೂರು ಪಾದಗಳ ಅರ್ಥ-ಗಳನ್ನು ಪ್ರತಿಪಾದಿಸುತ್ತವೆ. ಪುರುಷಸೂಕ್ತದ ವ್ಯಾಖ್ಯಾನಗಳೇ ಸಮಸ್ತ ವೇದಗಳು. ..ೀಗಿರುವುದರಿಂದ, ವಾಸುದೇವ ದ್ವಾದಶಾಕ್ಷರದ ಮೊದಲಿನ ೮ ಅಕ್ಷರ ಪ್ರತಿಪಾದ್ಯ ಭಗವನ್ಮೂರ್ತಿಗಳು—ಕೇಶವ-ನಾರಾಯಣ-ಮಾಧವ-ಗೋವಿಂದ-ವಿಷ್ಣು-ಮಧುಸೂದನ ತ್ರಿವಿಕ್ರಮ-ವಾಮನಗಳೆಂದು ತಿಳಿಯಬೇಕು. ಅದೇ ದ್ವಾದಶಾಕ್ಷರ ಮಂತ್ರದ ಅಂತ್ಯ ನಾಲ್ಕಕ್ಷರ ಪ್ರತಿಪಾದ್ಯರೂಪಗಳು-ಶ್ರೀಧರ-ಹೃಷಿಕೇಶ-ಪದ್ಮನಾಭ-ದಾಮೋದರ-ಗಳೆಂದು ತಿಳಿಯಬೇಕು. ನಾರಾಯಣ ಮಂತ್ರದ ಎಂಟು ಅಕ್ಷರಗಳು ಪ್ರಣವದ ಎಂಟು ಅಕ್ಷರ ಪ್ರತಿಪಾದ್ಯ ರೂಪಗಳನ್ನೇ ಹೇಳುತ್ತವೆ (ಈ ಮೊದಲು ಹೇಳಿರುವ ವಿಶ್ವ-ತೈಜಸಾದಿಗಳು); ಮಾತೃಕಾಮಂತ್ರಾರ್ಥಭೂತ ಭಗವದ್ರೂಪಗಳು ಅಕಾರಾದಿ ಅಕ್ಷರ ಪ್ರತಿಪಾದ್ಯ ಅಜ-ಆನಂದಾದಿರೂಪಗಳು; ನಾಲ್ಕು ವ್ಯಾಹೃತಿಗಳಿಂದ ಪ್ರತಿ-ಪಾದ್ಯವಾದುವು ಅನಿರುದ್ಧಾದಿ ರೂಪಗಳು; ಈ ಎಲ್ಲ ಭಗವನ್ಮೂರ್ತಿಗಳ ಪ್ರತಿ-ಪಾದಕವಾದುವು ಪ್ರಣವ. ಈ ವಿವರಗಳನ್ನು ತಂತ್ರಸಾರದಿಂದ ತಿಳಿಯಬಹುದು. ..ೀಗೆ ತಿಳಿದು ಆ ಎಲ್ಲ ರೂಪಗಳನ್ನು ಸಾಕ್ಷಾತ್ಕರಿಸಿಕೊಂಡು ಉಪಾಸಿಸುವ ಮಹಾಧಿಕಾರಿಗಳು, ಶ್ರೀವಾಯುದೇವರೇ ಸರಿ.

೨. ಪಾಪಾವಿದ್ಧ-ದೈತ್ಯಪೂಗಾವಿದ್ಧ-ಶ್ರೀವಿಷ್ಣುಭಕ್ತ್ಯಾದ್ಯನಂತ ಗುಣಪರಿಪೂರ್ಣ, ರಮಾವ್ಯತಿರಿಕ್ತ-ಪೂರ್ವಪ್ರಸಿದ್ಧ ವ್ಯತಿರಿಕ್ತ ಅನಂತವೇದಪ್ರತಿಪಾದ್ಯಮುಖ್ಯತಮ ಅನಂತಜೀವನಿಯಾಮಕ, ಅನಂತರೂಪಭಗವತ್ಕಾರ್ಯಸಾಧಕ ಪರಮದಯಾಲು ಕ್ಷಮಾಸಮುದ್ರ, ಭಕ್ತವತ್ಸಲ, ಭಕ್ತಾಪರಾಧಸಹಿಷ್ಣು ಶ್ರೀಮುಖ್ಯಪ್ರಾಣಾವತಾರ-ಭೂತಾನಾಂ.....

ಪ್ರತಿಪದಾರ್ಥ: ಪಾಪಾವಿದ್ಧ—ಪಾಪಸಂಬಂಧ (ಲೇಪ) ವಿಲ್ಲದವರೂ, ದೈತ್ಯಪೂಗಾ-ವಿದ್ಧ—ಅಸುರ ಸಮೂಹದಿಂದ ಸ್ಪರ್ಶಿಸಲ್ಪಡದವರೂ, ಶ್ರೀವಿಷ್ಣುಭಕ್ತ್ಯಾದ್ಯನಂತ ಗುಣಪರಿ-ಪೂರ್ಣ—ವಿಷ್ಣುಭಕ್ತಿಯೇ ಮೊದಲಾದ ಅಸಂಖ್ಯ ಸದ್ಗುಣ ಪೂರ್ಣರೂ, ರಮಾ ವ್ಯತಿರಿಕ್ತ ಪೂರ್ವಪ್ರಸಿದ್ಧ ವ್ಯತಿರಿಕ್ತ ಶ್ರೀಮಹಾಲಕ್ಷ್ಮಿಯನ್ನುಳಿದು, ಹಾಗೂ ಅನಾದಿ ಪ್ರಸಿದ್ಧನನ್ನು (ನಾರಾಯಣನನ್ನು) ಬಿಟ್ಟು, ಅನಂತವೇದ ಪ್ರತಿಪಾದ್ಯ ಮುಖ್ಯತಮ—ಅನಂತ ವೇದಗಳಲ್ಲಿ

ಪ್ರತಿಪಾದ್ಯರಾದ ದೇವತೆಗಳ ಮಧ್ಯದಲ್ಲಿ ಮುಖ್ಯತಮರೂ (ಸರ್ವ ಶ್ರೇಷ್ಠರೂ), ಅನಂತ ಜೀವನಿಯಾಮಕ-ನಿತ್ಯರಾದ ಅಸಂಖ್ಯಜೀವರನ್ನು ಸರ್ವ ವಿಧದಿಂದ ನಿಯಮಿಸುವವರೂ, ಅನಂತರೂಪ—ಅನಂತರೂಪಗಳುಳ್ಳವರೂ, ಭಗವತ್ಕಾರ್ಯಸಾಧಕ—ಶ್ರೀಹರಿಯ ಜಗ-ತ್ಸಂಬಂಧವಾದ ವಿಶಿಷ್ಟ ಕಾರ್ಯಸಾಧಕರೂ, ಪರಮದಯಾಳು—ಕೃಪಾಪೂರ್ಣರೂ, ಕ್ಷಮಾಸಮುದ್ರ—ಅಪಾರ ಕ್ಷಮಾಗುಣವಂತರೂ, ಭಕ್ತವತ್ಸಲ—ವಿಷ್ಣುಭಕ್ತರಲ್ಲಿ ನಿರ್ವ್ಯಾಜ ಪ್ರೇಮವುಳ್ಳವರೂ, ಭಕ್ತಾಪರಾಧಸಹಿಷ್ಣು—ಭಕ್ತರ ಅಪರಾಧಗಳನ್ನು ಸಹಿಸುವವರೂ, ಶ್ರೀಮುಖ್ಯಪ್ರಾಣಾವತಾರ ಭೂತಾನಾಂ—ಶ್ರೀಮುಖ್ಯಪ್ರಾಣದೇವನ ಅವತಾರರೂ, (ಆದ ಶ್ರೀಮದಾನಂದತೀರ್ಥ ಭಗವತ್ಪಾದರ, ಅಂತರ್ಯಾಮಿನ್, ಎಂಬ ೧೬ನೆಯ ಉಪ-ವಾಕ್ಯದಿಂದ ಅನ್ವಯವಾಗುತ್ತದೆ);

ತಾತ್ಪರ್ಯ: ಶ್ರೀಮುಖ್ಯಪ್ರಾಣನು ಪಾಪಲೇಪರಹಿತನು; ಆತನನ್ನು ದೈತ್ಯರು ಮುಟ್ಟಲೂ ಸಹ ಅಸಮರ್ಥರು. ವಿಷ್ಣುಭಕ್ತ್ಯಾದಿ ಸಕಲ ಸದ್ಗುಣ ಪರಿಪೂರ್ಣನು; ದುಃಖ, ಅಜ್ಞಾನಾದಿ ದೋಷಗಳ ಸ್ಪರ್ಶ ಯಾವ ಕಾಲಕ್ಕೂ ಇಲ್ಲದವನು. ಸರ್ವ ವೇದಗಳು ಪರಮ ಮುಖ್ಯ ವೃತ್ತಿಯಿಂದ ಶ್ರೀಹರಿಯನ್ನೇ ಪ್ರತಿಪಾದಿಸುತ್ತವೆ. ಆತನ ಮಹಿಮೆಗಳನ್ನೇ (ಸದ್ಗುಣಗಳನ್ನೇ) ವರ್ಣಿಸುತ್ತವೆ. ಆ ವೇದಗಳೇ ನಾರಾಯಣನ ನಂತರ ಮುಖ್ಯವೃತ್ತಿಯಿಂದ ರಮಾದೇವಿಯನ್ನೂ ಪ್ರತಿಪಾದಿಸುತ್ತವೆ. ಈ ಉಭಯ-ರನ್ನುಳಿದು, ನಾರಾಯಣನಲ್ಲಿಯೇ ಪ್ರಸಿದ್ಧಗಳಾದ ಕೆಲವು ವಿಶಿಷ್ಟ ಶಬ್ದಗಳ ವಿನಹ, ಸಕಲ ವೇದಗಳಿಂದ ಪ್ರತಿಪಾದ್ಯನು—ಶ್ರೀಮುಖ್ಯಪ್ರಾಣನು. ಕೆಲವು ವೇದಭಾಗ-ಗಳಿಂದ ಮಾತ್ರ (ಸೂಕ್ತಾದಿಗಳಲ್ಲಿ) ಪ್ರತಿಪಾದ್ಯರಾದ ಅಗ್ನ್ಯಾದಿ ನಾನಾ ದೇವತೆ-ಗಳಲ್ಲಿ ಈತನು ಮುಖ್ಯತಮನು. ವೇದ ಪ್ರತಿಪಾದ್ಯ ದೇವತೆಗಳಿಂದ ಸಹಿತರಾದ ಅನಂತ ಜೀವರಿಗೂ ನಿಯಾಮಕನು—ಆತನು ಮಾಡಿ ಮಾಡಿಸದ ಯಾವ ಕ್ರಿಯೆ-ಗಳನ್ನೂ ಯಾವ ಜೀವನೂ ಎಂದೂ ಮಾಡಲಾರನು; ಅನಂತಜೀವರನ್ನು ನಿಯ-ಮಿಸುವ ಅನಂತ ರೂಪಗಳುಳ್ಳವನು. ಚೇತನಾಚೇತನಾತ್ಮಕ ಜಗತ್ಸಂಬಂಧವಾದ ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳೆಂಬ ಶ್ರೀಹರಿಯ ಸರ್ವ ಕಾರ್ಯಗಳಲ್ಲಿ ಭಾಗವಹಿಸಿ ಶ್ರೀಹರಿಯನ್ನು ಸೇವಿಸುವ ಪ್ರಧಾನಮಂತ್ರಿಯು; ಈ ಪರಿಯ ಅಪಾರ ಮಹಿಮೋಪೇತನೂ ಸರ್ವಜೀವರನ್ನು ಸರ್ವ ಪ್ರಕಾರದಿಂದ ನಿಯಮಿಸುವ, ಎದುರಿಲ್ಲದ ಅಧಿಕಾರಿಯೂ ಆದ ಈತನು ಪರಮ ದಯಾಳು—ಕ್ಷಮಾಸಮುದ್ರ—ನಿರ್ವ್ಯಾಜ ಭಕ್ತಪ್ರೇಮಿ—ಭಕ್ತಾಪರಾಧಗಳನ್ನು ಸಹಿಸಿ, ಕ್ಷಮಿಸಿ, ಸನ್ಮಾರ್ಗದಲ್ಲಿಟ್ಟು ಉದ್ಧಾರ ಮಾಡುವ ಮಹಾನುಭಾವನು. ಈತನ ತೃತೀಯಾವತಾರ ರೂಪವೇ ಶ್ರೀಮದಾನಂದತೀರ್ಥ ಶ್ರೀಮಚ್ಚರಣರು.

ಪ್ರಮೇಯ ವಿವರಣೆ: (೧) ಶ್ರೀಹರಿಯ ಆಜ್ಞಾರೂಪಗಳಾದ ಶ್ರುತಿ ಸ್ಮೃತಿಗಳಿಗೆ ವಿರುದ್ಧವಾಗಿ ವರ್ತಿಸುವುದು, ಎಂದರೆ ಅಲ್ಲಿ ಉಕ್ತವಾದ ವಿಧಿಗಳನ್ನು ಮೀರುವುದು ಮತ್ತು ನಿಷೇಧಗಳನ್ನು ಆಚರಿಸುವುದು, ಪಾಪಕರ್ಮವೆನಿಸುತ್ತದೆ. ಕಾಲಾಂತರದಲ್ಲಿ (ಜನ್ಮಾಂತರದಲ್ಲಿ ಸಹ) ದುಃಖಕ್ಕೆ ಕಾರಣವಾಗುವ, ಕರ್ಮಾಚರಣೆಯಿಂದ ಹುಟ್ಟುವ ಅದೃಷ್ಟವೇ ಪಾಪವು. ಭಗವದಪರೋಕ್ಷದಿಂದ (ಸಾಕ್ಷಾದ್ದರ್ಶನದಿಂದ) ಪ್ರಾರಬ್ಧ-ಕರ್ಮದ ವಿನಹ, ಸಕಲ ಕರ್ಮಗಳು ಧ್ವಸಿಹೋಗುತ್ತವೆ. ಕರ್ಮಗಳು ತ್ರಿವಿಧ—ಸಂಚಿತ, ಪ್ರಾರಬ್ಧ, ಆಗಾಮಿಗಳೆಂದು. ಈವರೆಗೆ ಆಚರಿಸಲಾದ (ಜನ್ಮಾಂತರಗಳಲ್ಲಿ ಸಹ) ಕರ್ಮಗಳು 'ಸಂಚಿತ'ವೆನಿಸುವುದು. ಇವು ರಾಶಿರಾಶಿಯಾಗಿ ಪ್ರತಿ ಜೀವನ ಬೆನ್ನಂದಿವೆ. ಶ್ರೀಹರಿ ಸಂಕಲ್ಪಾನುಸಾರವಾಗಿ ಅವುಗಳ ಫಲಗಳನ್ನು ಕಾಲ ಕಾಲಕ್ಕೆ ಅನುಭವಿಸಬೇಕು. ಇವುಗಳಲ್ಲಿ ಯಾವ ಕರ್ಮದ ಫಲವನ್ನು (ಕರ್ಮಜನಿತ ಅದೃಷ್ಟದ ಫಲವನ್ನು) ಅನುಭವಿಸಲು ಆರಂಭಿಸಿರುವೆವೋ ಅದು 'ಪ್ರಾರಬ್ಧ'ವು. ಮುಂದೆ ಸಂಭವಿಸಬಹುದಾದ ಕರ್ಮಗಳು 'ಆಗಾಮಿ'ಯು. ಅಪರೋಕ್ಷಜ್ಞಾನವೆಂಬ ಅಗ್ನಿಯು ಪ್ರಾರಬ್ಧಕರ್ಮದ ವಿನಹ ಸರ್ವ ಪಾಪಗಳನ್ನು ಧ್ವಸಿಬಿಡುತ್ತದೆ. ಅಪರೋಕ್ಷ ಜ್ಞಾನ ಕಾಲದಲ್ಲಿ ಫಲ ಭೋಗಕ್ಕೆ ಆರಂಭಿಸಿರುವ ಕರ್ಮವನ್ನು ಪೂರ್ಣವಾಗುವವರೆಗೆ ಅನುಭವಿಸಲೇಬೇಕು. ಆ ಮುಂದೆ ಮಾಡುವ ಕರ್ಮಗಳು (ಆಗಾಮಿ ಕರ್ಮಗಳು) ಲೇಪಿಸುವುದಿಲ್ಲ—ಎಂದರೆ, ಸುಖ-ದುಃಖಪ್ರಾಪಕ ಅದೃಷ್ಟವನ್ನು ಉತ್ಪಾದಿಸುವುದಿಲ್ಲ. ಸಂಚಿತ ಪಾಪವೆಲ್ಲ ಜ್ಞಾನಾಗ್ನಿಯಿಂದ ನಷ್ಟವಾದರೆ, ಸಂಚಿತ ಪುಣ್ಯವೇನಾಗುವು-ದೆಂಬುದನ್ನು ತಿಳಿಯಬೇಕಲ್ಲವೇ? ಈ ಮೊದಲು ಹೇಳಿದ ತ್ರಿವಿಧ ಕರ್ಮಗಳೂ ಪುಣ್ಯ-ಪಾಪಗಳೆಂಬ ಭೇದದಿಂದ ದ್ವಿವಿಧವಾಗಿರುತ್ತೆ. ಕಾಲಾಂತರದಲ್ಲಿ ಸುಖಕ್ಕೆ ಕಾರಣವಾಗುವ ಅದೃಷ್ಟವು (ತಜ್ಜನಕ ಕರ್ಮವು) ಪುಣ್ಯವೆಂದೂ ಧರ್ಮವೆಂದೂ ಕರೆಯಲ್ಪಡುತ್ತದೆ. ಸಂಚಿತ ಪುಣ್ಯವು ಪುನಃ ಎರಡು ವಿಧ. *'ಅನಭೀಷ್ಟಮನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ'* ಎಂದು ಹೇಳಿದಂತೆ ಫಲ ಕೊಡಲು ಆರಂಭವಾಗದಿರುವ ಸಂಚಿತ ಪುಣ್ಯವು ಇಷ್ಟ, ಅನಿಷ್ಟ ಭೇದದಿಂದ ಎರಡು ಪ್ರಕಾರವಾಗಿರುತ್ತದೆ. ಅನಿಷ್ಟ ಪುಣ್ಯವೂ ಸಹ ಜ್ಞಾನದಿಂದ ನಾಶ ಹೊಂದುತ್ತದೆ. ಇಷ್ಟ ಪುಣ್ಯಭಾಗವನ್ನು ಸ್ವೇಚ್ಛಾನುಸಾರವಾಗಿ ಸ್ವಭಕ್ತರಿಗೆ ದಾನಮಾಡಬಹುದೆಂದು ಹೇಳಲಾಗುತ್ತದೆ.

ತತ್ವಾಭಿಮಾನಿ ದೇವತೆಗಳೆಲ್ಲರೂ ಅನಾದಿಕಾಲದಿಂದ ಅಪರೋಕ್ಷ ಜ್ಞಾನಿಗಳು. *'ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನ ವರ್ಜಿತಾಃ'*—ಅಧಿಕಾರ ಸ್ಥಾನಗಳಲ್ಲಿರುವ ಯಾವ ದೇವತೆಗಳೂ ಅಪರೋಕ್ಷ ರಹಿತರಲ್ಲ. ಇವರಿಗೆ ಸಾಧನೆಯೆಂಬುದು, ದರ್ಶನವಾಗುವ ಭಗವದ್ರೂಪಗಳಲ್ಲಿ ಹೆಚ್ಚು ಸ್ಫುಟತ್ವವನ್ನೂ, ಅಧಿಕ ಸಂಖ್ಯೆಯ

ಭಗವದ್ರೂಪಗಳ ದರ್ಶನವನ್ನೂ, ದೊರಕಿಸುವ ಪ್ರಯೋಜನ ಮಾತ್ರವುಳ್ಳದ್ದು. ಈ ತಾತ್ವಿಕ ದೇವತೆಗಳಿಗೂ ನಿಯಾಮಕರಾದ ಶ್ರೀವಾಯುದೇವರು ನಿತ್ಯಾಪರೋಕ್ಷಿಗಳೆಂದು ಹೇಳಲೇನಿದೆ? ತಾತ್ವಿಕ ದೇವತೆಗಳ (ಋಜುಗಣದ ಬ್ರಹ್ಮ-ವಾಯುಗಳ ಸಮೇತರಾದ ತಾತ್ವಿಕ ದೇವತೆಗಳ) ಮ಼ಮೆಯನ್ನು ಹರಿಕಥಾಮೃತಸಾರದಲ್ಲಿ ಶ್ರೀ ಜಗನ್ನಾಥದಾಸರು ..ೀಗೆ ನಿರೂಪಿಸಿದ್ದಾರೆ:

*ಸಾಧನಾತ್ಪೂರ್ವದಲಿ ಈ ಋ*
*ಜ್ವಾದಿ ತಾತ್ವಿಕರೆನಿಪ ಸುರಗಣ*
*ನಾದಿ ಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು ।*
*ಸಾಧನೋತ್ತರ ಸ್ವ ಬಿಂಬ ಉ*
*ಪಾಧಿ ರಹಿತಾದಿತ್ಯ ನಂದದಿ*
*ಸಾದರದಿ ನೋಡುವರು ಅಧಿಕಾರಾನುಸಾರದಲಿ ॥*

'ಋಜುಗಣ' ವೆಂದು ಕರೆಯಲ್ಪಡುವ ಒಂದು ಜೀವಸಮೂಹವಿದೆ. ಅದರಲ್ಲಿ ಅನಂತ ಜೀವರಿದ್ದಾರೆ. ಇವರೆಲ್ಲರೂ ಅನಾದಿಕಾಲದಿಂದ ಅಪರೋಕ್ಷಿಗಳೇ. ಆದ್ದರಿಂದ ಇವರಿಗೆ ಇರುವುದು ಪ್ರಾರಬ್ಧಕರ್ಮ ಮಾತ್ರ. ಇವರೆಲ್ಲರ ಪ್ರಾರಬ್ಧವೂ ಕೇವಲ ಸುಖ ಪ್ರಾರಬ್ಧವೇ. ದುಃಖಾಜ್ಞಾನಾದಿಗಳ ಸ್ಪರ್ಶವೇ ಇಲ್ಲದ ಇವರಿಗೆ ಪಾಪಕರ್ಮಗಳೆಲ್ಲಿ ಬರಬೇಕು! ಇವರ ಪ್ರಾರಬ್ಧ ಭೋಗವು ೧೦೦ ಬ್ರಹ್ಮಕಲ್ಪಗಳ..ಂದಿನ ಕಾಲದಿಂದ ಆರಂಭವಾಗುತ್ತದೆ. (೪೩,೨೦,೦೦೦ ಮಾನವ ವರ್ಷಗಳ ಕಾಲವು ಬ್ರಹ್ಮನ ೧ ಹಗಲು; ಅಷ್ಟೇ ಅವಧಿಯ ರಾತ್ರಿ. ಇಂತಹ ೩೬೦ ದಿನಗಳಿಗೆ ಒಂದು ವರ್ಷ; ೧೦೦ ವರ್ಷಗಳು ಬ್ರಹ್ಮನ ಆಯುರ್ಮಾನ; ಒಬ್ಬ ಬ್ರಹ್ಮನ ಕಾಲವು ಒಂದು ಬ್ರಹ್ಮಕಲ್ಪವೆನಿಸುವುದು). ಬ್ರಹ್ಮ-ವಾಯುಗಳ ಸುಖಪ್ರಾರಬ್ಧ ಭೋಗವು ಸತ್ಯಲೋಕಾಧಿಪತ್ಯ ಭೋಗದಿಂದ ಕೊನೆಗಾಣುತ್ತದೆ. ನಂತರ ಲಿಂಗದೇಹ ಭಂಗದಿಂದ ಮುಕ್ತರಾಗುತ್ತಾರೆ. ಪ್ರಾರಬ್ಧ ಪುಣ್ಯಭೋಗದ ಈ ದೀರ್ಘ ಅವಧಿಯಲ್ಲಿ ಪುಣ್ಯನಿಮಿತ್ತವಾದ ಅವರ ಪ್ರವೃತ್ತಿಗಳೆಲ್ಲವೂ ಶ್ರೀಹರಿ ಪ್ರೀತ್ಯರ್ಥವಾಗಿಯೇ ಇರುತ್ತವೆ ಮತ್ತು ಅದರಿಂದ ಸ್ವಭಕ್ತರ ಅನುಗ್ರಹವೂ ಸಾಧಿಸುತ್ತದೆ. ಇತರ ತಾತ್ವಿಕ ದೇವತೆಗಳ ಪ್ರಾರಬ್ಧವು, ತಾರತಮ್ಯವನ್ನನುಸರಿಸಿ ಕೆಳ ಕೆಳಗಿನವರಿಗೆ, ಹೆಚ್ಚು ಹೆಚ್ಚಾಗಿ ದುಃಖಮಿಶ್ರವಾಗಿರುತ್ತದೆ ಮತ್ತು ಅಲ್ಪತರ ಕಾಲದಲ್ಲಿ ಅವರ ಭೋಗವೂ ಮುಗಿಯುತ್ತದೆ. ಈ ಮುಂತಾದ ವಿಶೇಷಗಳ ವಿವರವನ್ನು, ಮುಂದಿನ ಪ್ರಮೇಯ ವಿವರಣೆಗಳಲ್ಲಿ ಪ್ರಸಂಗಾನುಸಾರ ವಿಸ್ತರಿಸಲಾಗುತ್ತದೆ.

(೨) ಪಾಪಾಚರಣದಲ್ಲಿ ಮುಕ್ತಿಯೋಗ್ಯ ಜೀವರಿಗೆ ದೈತ್ಯರೇ ಕಾರಣರು. ಸ್ವರೂಪದಿಂದ ನಿಷ್ಪಾಪರಾದ (ಶುದ್ಧರಾದ) ಈ ಜೀವರು, ಪ್ರಾಕೃತೇಂದ್ರಿಯಗಳಿಂದ ಪಾಪ-

ಕರ್ಮಗಳನ್ನೇಕೆ ಆಚರಿಸುವರೆಂದು, '*ಅಥ ಕೇನ ಪ್ರಯುಕ್ತೇನ ಪಾಪಂ ಚರತಿ ಪೂರುಷಃ। ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ॥*' (ಗೀತೆ): ಅರ್ಜುನನು ಪ್ರಶ್ನಿಸಲು, '*ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ*' ಇತ್ಯಾದಿ ವಾಕ್ಯ-ಗಳಿಂದ, ರಜೋಗುಣ ನಿಮಿತ್ತಗಳಾದ ಕಾಮ ಕ್ರೋಧಾದಿಗಳ ಪ್ರಚೋದಕರಾದ ಕಾಲನೇಮಿ ಮೊದಲಾದ ದೈತ್ಯರು ಕಾರಣರೆಂದು ಶ್ರೀಕೃಷ್ಣನು ಉತ್ತರಿಸಿದ್ದಾನೆ. ಋಜುಗಣದವರನ್ನುಳಿದು, ಇತರ ಎಲ್ಲ ದೇವತೆಗಳಲ್ಲಿ ಸಹ, ಅವರ ಯೋಗ್ಯತಾ ತಾರತಮ್ಯವನ್ನನುಸರಿಸಿ, ಅಸುರ ಪ್ರವೇಶವುಂಟೆಂದು ಉಪನಿಷತ್ತುಗಳು ಸದೃಷ್ಟಾಂತ-ವಾಗಿ ನಿರೂಪಿಸುತ್ತವೆ. ಛಾಂದೋಗ್ಯ, ಬೃಹದಾರಣ್ಯ ಮತ್ತು ಐತರೇಯ ಉಪನಿ-ಷತ್ತುಗಳಲ್ಲಿ, ನಿತ್ಯಮುಕ್ತರೂ ನಿರ್ದುಷ್ಟ ಗುಣಪೂರ್ಣರೂ ಆದ ರಮಾನಾರಾಯಣ-ರನ್ನುಳಿದು, ಇತರ ಸಕಲ ತತ್ತ್ವಾಭಿಮಾನಿ ದೇವತೆಗಳಲ್ಲಿ ಯಾರು ಶ್ರೇಷ್ಠರೆಂಬುದನ್ನು ನಿರ್ಣಯಿಸಲು ನಡೆದ ಪರೀಕ್ಷೆಗಳ ವಿವರಣೆಗಳಿವೆ. ಸೂರ್ಯ ಚಂದ್ರ ಮೊದಲಾದ ದೇವತೆಗಳು ಒಬ್ಬೊಬ್ಬರಾಗಿ ವಿರಾಟ್ ಪುರುಷದೇಹದಿಂದ (ದೇಹದಲ್ಲಿದ್ದ ಪರಬ್ರಹ್ಮ ಚತುರ್ಮುಖರಿಬ್ಬರೂ ಉದಾಸೀನರಾಗಿರುವಾಗ) ಹೊರಗೆ ಬರಲು, ಕಣ್ಣು-ಕಿವಿ ಮೊದಲಾದ ಇಂದ್ರಿಯ ವ್ಯಾಪಾರಗಳು ನಿಂತವಲ್ಲದೇ, ಆ ದೇಹವು ಮೃತ ಶರೀರ-ವಾಗಿ ಬೀಳಲಿಲ್ಲ; ವಾಯುದೇವರು ಹೊರಗೆ ಬಂದ ತಕ್ಷಣವೇ ದೇಹವು ನಿಶ್ಚೇಷ್ಟಿತ-ವಾಗಿ ಬಿದ್ದುಹೋಯಿತು. ಪುನಃ ಪರೀಕ್ಷೆ ನಡೆಯಿತು. ವಾಯುದೇವರೇ ಮೊದಲಿಗೆ ಹೊರಬಿದ್ದರು. ಆಗ ಇತರ ದೇವತೆಗಳೆಲ್ಲರೂ ಆ ದೇಹದಲ್ಲಿ ನಿಲ್ಲಲೂ ಸಹ ಅಸಮರ್ಥರಾದರು. ಒಬ್ಬೊಬ್ಬರೇ ಪ್ರವೇಶಿಸಲು, ವಾಯುದೇವರ ಪ್ರವೇಶ-ವಿಲ್ಲದೇ, ಯಾವ ಇಂದ್ರಿಯ ವ್ಯಾಪಾರಗಳನ್ನೂ ನಡೆಸಲು ಶಕ್ತರಾಗಲಿಲ್ಲ ಮತ್ತು ವಾಯುದೇವರೊಬ್ಬರೇ ಅನ್ಯರ ಪ್ರವೇಶವಿಲ್ಲದೇ, ಸರ್ವೇಂದ್ರಿಯ ವ್ಯಾಪಾರಗಳನ್ನು ನಿರ್ವಹಿಸಲು ಸಮರ್ಥರೆಂದೂ ಕಂಡುಬಂದಿತು. ಇದರಿಂದ ಶ್ರೀಮುಖ್ಯಪ್ರಾಣನೇ ಸಕಲ ತತ್ತ್ವಾಭಿಮಾನಿಗಳಲ್ಲಿ ಶ್ರೇಷ್ಠನೆಂದು ನಿರ್ಣಯಿಸಿ, ಎಲ್ಲರೂ ಆತನನ್ನು, ಮಂತ್ರಿ-ಗಳು ರಾಜನನ್ನೆಂಬಂತೆ, ಆಶ್ರಯಿಸಿದರು.

ಶ್ರೀವಾಯುದೇವರಿಗೆ 'ಆಖಣಾಶ್ಮ'ರೆಂಬ ಪ್ರಸಿದ್ಧಿಯುಂಟಾದ ಬಗ್ಗೆ ಛಾಂದೋಗ್ಯ -ದಲ್ಲಿ ಈ ಮುಂದಿನ ಚರಿತ್ರೆಯಿದೆ. ಅದೇನೆಂದರೆ: ದೇವಾಸುರ ಯುದ್ಧದಲ್ಲಿ ದೇವತೆಗಳು ಪರಾಜಿತರಾದರು; 'ಉಕ್ಥನಾಮಕ' ಶ್ರೀಹರಿಯನ್ನು ಉಪಾಸಿಸಿ, ಆತನ ವಿಶೇಷಾನುಗ್ರಹ ಬಲದಿಂದ ಅಸುರರನ್ನು ಜಯಿಸಲಿಚ್ಛಿಸಿದರು. ನಾಸಿಕ್ಯವಾಯು, ಅಗ್ನಿ, ಸೂರ್ಯ, ಚಂದ್ರ, ರುದ್ರ, ಶೇಷ, ಗರುಡ ಮೊದಲಾದ ದೇವತೆಗಳನ್ನು, ಕ್ರಮವಾಗಿ, ಉಕ್ಥನ ಉಪಾಸನೆಗೆ ಪ್ರತಿಮೆಗಳನ್ನಾಗಿ ಕಲ್ಪಿಸಿಕೊಂಡರು. ಇದನ್ನು

ತಿಳಿದು ದೈತ್ಯರು ಅವರ ಉಪಾಸನೆಯನ್ನು ಭಂಗಗೊಳಿಸಲು, ಆ ಪ್ರತಿಮೆಗಳನ್ನು ಪ್ರವೇಶಿಸಿ ಅಪವಿತ್ರಗೊಳಿಸುತ್ತಾ ಬಂದರು. ಹೀಗೆ ಪ್ರತಿಮೆಯ ಅಪವಿತ್ರತೆಯಿಂದ ಉಪಾಸನೆಯು ಫಲಪ್ರದವಾಗಲಿಲ್ಲ. ಕಡೆಗೆ ಶ್ರೀವಾಯುದೇವರನ್ನು ಪ್ರತಿಮೆಯನ್ನಾಗಿಟ್ಟುಕೊಂಡು ಉಕ್ಥೋಪಾಸನೆಯನ್ನು ನಡೆಸಿದರು. ಅಸುರರು ಆ ಪ್ರತಿಮೆಯನ್ನು ಪ್ರವೇಶಿಸಲು ಯತ್ನಿಸಿ, ವಜ್ರದಂತೆ ದೃಢವಾದ ಕಲ್ಲುಬಂಡೆಗೆ ಎರಗಿ ಮಣ್ಣುಂಡೆಗಳು ಪುಡಿಯಾಗಿ ಧ್ವಂಸವಾಗುವಂತೆ, ತಾವೇ ನಷ್ಟರಾದರು. ಆ ಪ್ರತಿಮೆಯಲ್ಲಿ ಪ್ರವೇಶಿಸಿ ಅದನ್ನು ಕೆಡಿಸಲು ಅಸಮರ್ಥರಾದರು. ಆಗ ಪ್ರಾಣದೇವನಿಗೆ 'ಆಖಣಾಶ್ಮ' (ವಜ್ರಶಿಲೆ) ಎಂಬ ನಾಮ ಪ್ರಸಿದ್ಧವಾಯಿತು. ಈ ವೇದಪ್ರಸಿದ್ಧ ನಾಮದ ಮಹಿಮೆಯು, ಈ ವಾಕ್ಯದಲ್ಲಿರುವ 'ದೈತ್ಯಪೂಗಾವಿದ್ಧ' ಎಂಬ ಶಬ್ದದಿಂದ ಹೇಳಲ್ಪಟ್ಟಿದೆ.

ಈ ಮಹಿಮೆಯು ಮತ್ತೊಂದು ರಹಸ್ಯ ಪ್ರಮೇಯವನ್ನೂ ಸೂಚಿಸುತ್ತದೆ. ಅದೇನೆಂದರೆ: ದೇವತೆಗಳು ವಾಯುಸ್ಥ ವಿಷ್ಣುವಿನ ಉಪಾಸನೆಯಿಂದಲೇ ಸಿದ್ಧಿಯನ್ನು ಪಡೆಯುವರು; ಋಷ್ಯಾದಿಗಳು ಸೂರ್ಯಾಂತರ್ಗತ ವಿಷ್ಣುವನ್ನು ಉಪಾಸಿಸುತ್ತಾರೆ; ಮನುಷ್ಯರು ಅಗ್ನ್ಯಂತರ್ಗತ ವಿಷ್ಣೂಪಾಸನೆಯಿಂದಲೇ ಸ್ವಗತಿಗಳನ್ನು ಪಡೆಯುವರು. ಹೀಗೆ ಹೇಳುವ ಮಾತ್ರದಿಂದ, ಈ ತ್ರಿವಿಧ ಅಧಿಕಾರಿಗಳೂ ವಾಯು, ಸೂರ್ಯ, ಅಗ್ನಿಗಳಲ್ಲಿ ಭಗವಂತನನ್ನು ಉಪಾಸಿಸುವುದಿಲ್ಲವೆಂದಾಗಲೀ ಉಪಾಸಿಸಕೂಡದೆಂದಾಗಲೀ ತಿಳಿಯಕೂಡದು. ದೇವತೆಗಳೂ ಮನುಷ್ಯರೂ ಸೂರ್ಯಾಂತರ್ಗತ ಶ್ರೀಹರಿಯನ್ನು ಉಪಾಸಿಸುವುದಿಲ್ಲವೆಂದೂ-ಉಪಾಸಿಸಕೂಡದೆಂದೂ, ತಿಳಿಯಬಾರದು. ಯಾರು ಯಾವ ಅಧಿಷ್ಠಾನದಲ್ಲಿ ಹೆಚ್ಚಾಗಿ (ಅಧಿಕವಾಗಿ—ಪ್ರಾಚುರ್ಯೇಣ) ಉಪಾಸಿಸಿ ಸ್ವಗತಿಯನ್ನು ಪಡೆಯುವರೋ ಅವರು ಆ ಉಪಾಸಕರೆಂದು ಕರೆಯಲ್ಪಡುತ್ತಾರೆ. ಈ ಅಂಶಗಳು ಐತರೇಯ ಭಾಷ್ಯದಲ್ಲಿ ಹೇಳಲಾಗಿವೆ.

(೩) ಬ್ರಹ್ಮ-ವಾಯುಗಳು ಸ್ವರೂಪದಿಂದ ಸಮರು. ಆದರೆ ಬ್ರಹ್ಮನಿಗೆ ಪದನಿಮಿತ್ತಕವಾದ (ಸತ್ಯಲೋಕಾಧಿಪತ್ಯರೂಪ ನಿಮಿತ್ತದಿಂದ) ಕಿಂಚಿದಾಧಿಕ್ಯವಿದೆ. ಉಭಯರೂ ಆಗಮಗಳಲ್ಲಿ ಉಭಯ ನಾಮಗಳಿಂದ ಅಲ್ಲಲ್ಲಿ ವ್ಯವಹರಿಸಲ್ಪಡುತ್ತಾರೆ. ಇವರ ಜ್ಞಾನವು ವೇದಾದಿ ಆಗಮಜನ್ಯವಾದುದಲ್ಲ. ವೇದಗಳಲ್ಲಿ ಇವರ ಜ್ಞಾನಾನುಸಾರಿತ್ವವಿದೆ—ಎಂದರೆ, ಜ್ಞಾನಕ್ಕೆ ವೇದ ಸಂವಾದಿತ್ವವಿದೆ. ಆಲೋಚನ ಮಾತ್ರದಿಂದ ಇವರು, ವಿಶ್ವದಲ್ಲಿರುವ ಸಮಸ್ತ ವಸ್ತುಗಳ ತ್ರಿಕಾಲ ವಿಷಯಕ ಸರ್ವ ವಿಶೇಷಗಳನ್ನೂ ತಿಳಿಯಬಲ್ಲರು. ಮಹಾಪ್ರತಿಭೆಯಿಂದ ಕೂಡಿದ ಇವರ ಜ್ಞಾನವು ಸರ್ವವೇದಾಧಿಕವಾದುದು. ರಮಾನಾರಾಯಣರ ವಿಷಯದಲ್ಲಿ ಇವರ ಜ್ಞಾನವು ಅನ್ಯ ಸರ್ವಜೀವರಕ್ಕಿಂತ ಅನಂತಮಡಿ ಅಧಿಕವೂ ಪೂರ್ಣವೂ ಆದುದು. ಇವರು

ಅನಾದಿ ಕಾಲದಿಂದ ಭಗವದಪರೋಕ್ಷವುಳ್ಳವರು. ಸ್ವಯಂ ಭಕ್ತಿ ಜ್ಞಾನಗಳಿಂದ ಪೂರ್ಣರಾಗಿದ್ದು, ಇತರ ಜೀವರ ಭಕ್ತಿಜ್ಞಾನಾದಿ ಗುಣಗಳ ನಿಯಾಮಕರಾಗಿರುವರು.

ಶ್ರೀವಾಯುದೇವರೇ ಅಧ್ಯಾತ್ಮ , ಅಧಿಭೂತ, ಅಧಿದೈವಗಳಲ್ಲಿ ಮುಖ್ಯಪ್ರಾಣ ರೂಪದಿಂದ ಇರುವವರು. *'ಸರ್ವ ತತ್ವಾಭಿಮಾನೀ ಚ ಸರ್ವ ಪ್ರಾಣ ಗಣಾಧಿಪಃ'* ಎಂದು ಶ್ರೀಮುಖ್ಯಪ್ರಾಣನ ಮಹಿಮೆಯ ಸಂಗ್ರಹ ನಿರೂಪಣೆಯಿದೆ. *'ಸರ್ವೇಂದ್ರಿಯಾಭಿಮಾನಿಸ್ಥ ಮುಖ್ಯಪ್ರಾಣಸ್ಥ ವಿಷ್ಣುನಾ। ಪ್ರೇರಿತಃ ಶ್ರೀಶತುಷ್ಟ್ಯರ್ಥಂ ಕರಿಷ್ಯೇ ಕರ್ಮ ಚಾಖಿಲಂ॥'* ಎಂಬಲ್ಲಿ, ಸರ್ವೇಂದ್ರಿಯಾಭಿಮಾನಿ ದೇವತೆಗಳ ಅಂತರ್ಯಾಮಿಯಾದ ಮುಖ್ಯಪ್ರಾಣನಲ್ಲಿರುವ ಶ್ರೀವಿಷ್ಣುವಿನಿಂದ ಪ್ರೇರಿತನಾಗಿ ಶ್ರೀವಿಷ್ಣು ಪ್ರೀತ್ಯರ್ಥವಾಗಿ ಎಲ್ಲ ಕರ್ಮಗಳನ್ನೂ ಆಚರಿಸುತ್ತೇನೆಂಬ ಅನುಸಂಧಾನವಿರಬೇಕೆಂದು ಹೇಳಲಾಗಿದೆ. ಬ್ರಹ್ಮ-ವಾಯುಗಳಿಬ್ಬರೂ ಸರ್ವಶಬ್ದವಾಚ್ಯರು— ಆದರೆ ರಮಾನಾರಾಯಣರಂತಲ್ಲ. ಉದಾ: ಶ್ರೀವಾಯುಬ್ರಹ್ಮರೂ ಪ್ರಣವವಾಚ್ಯರು (ಅಕಾರ, ಉಕಾರ, ಮಕಾರಗಳಿಂದ ಮಾತ್ರ ವಾಚ್ಯರು). *'ಓಂಕಾರವಾಚ್ಯಃ ಪ್ರಾಣೋಸೌ ವೇದಾನುಕ್ತ ಗುಣಸ್ತಥಾ।'* (ವಿವರಣೆ)— ಮುಖ್ಯಪ್ರಾಣನೂ ಓಂಕಾರ ವಾಚ್ಯನೂ ಆಗಿದ್ದು ವೇದಗಳಲ್ಲಿ ಹೇಳದಿರುವ ಗುಣಗಳನ್ನೂ ಸಹ ಉಳ್ಳವನು ಎಂಬುದರ ಅರ್ಥವನ್ನೂ ರಮಾನಾರಾಯಣರಂತೆ ಅಲ್ಲವೆಂಬ ಅರ್ಥದಲ್ಲಿಯೇ ಗ್ರಸಬೇಕು. ನಾರಾಯಣನ ಜ್ಞಾನಾದಿ ಪ್ರತಿಗುಣವೂ ವಾಯುಬ್ರಹ್ಮರ ಗುಣಗಳಿಂದ ವಿಲಕ್ಷಣವೂ, ಅನಂತ ವಿಶೇಷಯುಕ್ತವೂ ಆದುದು. *'ಶಬ್ದ ಬ್ರಹ್ಮಾತ್ಮಕೋ ಬ್ರಹ್ಮಾ ಸರ್ವ ಶಬ್ದಾಭಿಧೇಯತಃ। ಋತೇ ನಾರಾಯಣಾದೀನಾಂ ನಾಮ್ನಾಂ ಸ ವಿಷಯೋಯತಃ।'* (ಭಾಗವತ ತಾತ್ಪರ್ಯ) ಎಂದರೆ, ನಾರಾಯಣ ಮೊದಲಾದ ಶ್ರೀಹರಿಯ ವಿಷಯವೇ ಆದ ನಾಮಗಳ ವಿನಾ, ಬ್ರಹ್ಮದೇವನು ಸರ್ವಶಬ್ದ ವಾಚ್ಯನೆಂದು ಹೇಳಲಾಗಿದೆ. *'ಅನಂತಾಮ್ನಾಯ ವೇದ್ಯೋಸೌ ವಿನಾ ವಿಷ್ಣೌಪ್ರಸಿದ್ಧತಃ', 'ತಥೈವ ಸರ್ವ ನಾಮಾನಿ ಪ್ರವರ್ತಂತೇ ಚ ಮಾರುತೇ'* ಇತ್ಯಾದಿ ಪ್ರಮಾಣವಾಕ್ಯಗಳು ಬ್ರಹ್ಮವಾಯುಗಳನ್ನು ಸರ್ವಶಬ್ದವಾಚ್ಯರೆಂದು ಹೇಳುತ್ತವೆ. ಸರ್ವವೇದ ಪ್ರತಿಪಾದ್ಯರನ್ನು ಐತರೇಯ ಭಾಷ್ಯದಲ್ಲಿ ..ೀಗೆ ನಿರೂಪಿಸಲಾಗಿದೆ: *'ದ್ವಾವಾತ್ಮಾನೌ ಹಿ ದೇವೇಷು ದ್ವೌ ಪ್ರಾಣೌ ಚ ಚೇತನೌ। ಅಜ್ಞಾನಾಭಿಭವಾಸ್ಪೃಷ್ಟೌ ವಾಯುರ್ನಾರಾಯಣಶ್ಚತೌ ಸರ್ವ ವೇದೋದಿತೌ ತಸ್ಮಾ - ದೇತೌ ದ್ವಾವೇವ ನಾಪರಃ। ಅನ್ಯೇ ಚೈವ ಮಿತ್ಯೈಃ ಶಬ್ದೈರುಚ್ಯಂತೇ ನಾಮಿತ್ಯೈಃ ಕ್ವಚಿತ್॥'* ಎಂದರೆ, ಆತ್ಮಶಬ್ದ ವಾಚ್ಯರು ಇಬ್ಬರೇ; ಪ್ರಾಣಶಬ್ದ ವಾಚ್ಯರಾದ ಚೇತನರೂ ಇಬ್ಬರು; ಅಜ್ಞಾನ ಮತ್ತು ಅಭಿಭವ (ಅನ್ಯರಿಂದ ಅತಿಕ್ರಮಣ)ಗಳಿಂದ ರ಼ಹಿತರಾದವರೂ ಇಬ್ಬರೇ— ಅವರೇ ವಾಯು ಮತ್ತು ನಾರಾಯಣರು; (ನಾರಾಯಣನೆಂದರೆ

ರಮಾಸ್ವತನೇ. ವಾಯುವೆಂದರೆ ಬ್ರಹ್ಮಸ್ವತನೇ) ಸರ್ವವೇದ ಪ್ರತಿಪಾದ್ಯರು ಇಬ್ಬರೇ; ಅನ್ಯದೇವತೆಗಳು ಮಿತವಾದ ಕೆಲವು ವೇದಶಬ್ದಗಳಿಂದ ಮಾತ್ರ ವಾಚ್ಯರು— ಸರ್ವಶಬ್ದಗಳಿಂದಲ್ಲ. ಈ ನಿರ್ಣಯಗಳನ್ನು ಪ್ರಸಕ್ತ ವಾಕ್ಯದಲ್ಲಿ ಸಂಗ್ರಸಲಾಗಿದೆ.

(೪) 'ಅನಂತ ಜೀವ ನಿಯಾಮಕ ಅನಂತ ರೂಪ'ರು ಶ್ರೀವಾಯುದೇವರು, ಎಂಬ ಶಬ್ದಗಳಲ್ಲಿ ಅಡಗಿರುವ ಪ್ರಮೇಯಗಳು ೀಗಿವೆ: ಜೀವ-ಶರೀರವು ಅಧ್ಯಾತ್ಮ-ಅಧಿಭೂತ-ಅಧಿದೈವಗಳಿಂದ ಯುಕ್ತವಾದುದು. ದೇಹದಲ್ಲಿರುವ ಮನ ಮೊದಲಾದ ಇಂದ್ರಿಯಗಳು 'ಅಧ್ಯಾತ್ಮ'ವು; ಪೃಥಿವ್ಯಾದಿ ಪಂಚಭೂತಗಳಿಂದ ನಿರ್ಮಿತವಾದ ವಿನಾಶವುಳ್ಳ ದೇಹವು 'ಅಧಿಭೂತ'ವು; ಇಂದ್ರಿಯಾಭಿಮಾನಿ ದೇವತೆಗಳು, ಅವರ ಅಂತರ್ಯಾಮಿ ಶ್ರೀ ಮುಖ್ಯಪ್ರಾಣ ಮತ್ತು ಆತನಿಗೂ ನಿಯಾಮಕನಾದ ಪುರುಷಶಬ್ದ ವಾಚ್ಯ ಸ್ವತಂತ್ರ ಶ್ರೀಹರಿಯೂ ಸಹ 'ಅಧಿದೈವ'ವು. *'ಸಾಧ್ಯಾತ್ಮಂ ಸಾಧಿದೈವಂ ಚ ಸಾಧಿಭೂತಮಿತಿ ತ್ರಿಧಾ। ವಿರಾಟ್ ಪ್ರಾಣೋ ದಶವಿಧ ಏಕಧಾ ಹೃದಯೇನ ಚ ॥'* (ಭಾಗ)— ಎಂದರೆ, ಅಧ್ಯಾತ್ಮ , ಅಧಿದೈವ, ಅಧಿಭೂತಗಳಲ್ಲಿ ಪ್ರತಿಯೊಂದರಲ್ಲಿ ಹತ್ತು ಹತ್ತು ರೂಪಗಳಿಂದ, ಒಂದು ರೂಪದಿಂದ ಹೃದಯದಲ್ಲಿಯೂ ಮುಖ್ಯಪ್ರಾಣನು ವಿರಾಜಮಾನನಾಗಿರುವನೆಂದೂ, *'ಪ್ರಾಣಾದಿ ಪಂಚಕಂ ಚೈವ ತಥಾ ನಾಗಾದಿ ಪಂಚಕಂ। ಏವಂತು ದಶಧಾ ಪ್ರಾಣಃ ಅಧ್ಯಾತ್ಮಾದಿ ತ್ರಿಧಾಽಖಿಲಾಃ॥'* (ಭಾಗ-ತಾ.) ಎಂದರೆ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನಗಳೆಂಬ ಪ್ರಾಣಾದಿ ಪಂಚಕ ಮತ್ತು ನಾಗ-ಕೂರ್ಮ, ಕೃಕಲ-ದೇವದತ್ತ-ಧನಂಜಯಗಳೆಂಬ ನಾಗಾದಿ ಪಂಚಕ, ೀಗೆ ಅಧ್ಯಾತ್ಮಾದಿಗಳಲ್ಲಿ ಒಂದೊಂದರಲ್ಲಿಯೂ ಹತ್ತು ರೂಪಗಳಿಂದ, ತನ್ನಾಮಕ ದಶ ಪ್ರಾಣಗಳಲ್ಲಿದ್ದು, ದೇಹದಿಂದಾಗುವ ಸರ್ವಕ್ರಿಯೆಗಳನ್ನು ನಿಯಮಿಸುವನೆಂದೂ, ಹೇಳಲಾಗುತ್ತದೆ. ಹೃದಯದಲ್ಲಿರುವ ಒಂದು ರೂಪವು. ಅಲ್ಲಿರುವ ಮೂಲೇಶ (ಶ್ರೀಹರಿಯ ರೂಪ)ನ ಅಡಿದಾವರೆಗಳಲ್ಲಿದ್ದು, ಅಪರೋಕ್ಷ ದರ್ಶನ ಕಾಲದಲ್ಲಿ, ಜ್ಞಾನಿಗೆ ಮುಖ್ಯಪ್ರಾಣನ ಈ ರೂಪದ ದರ್ಶನವಾಗುತ್ತದೆ.

ಪ್ರತಿಯೊಬ್ಬ ಸಂಸಾರಿ ಜೀವನಿಗೂ ಇರುವ, ಸ್ವರೂಪ-ಲಿಂಗ-ಅನಿರುದ್ಧ-ಸ್ಥೂಲ-ಗಳೆಂಬ ನಾಲ್ಕು ದೇಹಗಳಲ್ಲಿ ಶ್ರೀಮುಖ್ಯಪ್ರಾಣನು ಒಂದೊಂದು ರೂಪದಿಂದಿದ್ದು, ಆ ದೇಹದ ಸರ್ವ ಕ್ರಿಯೆಗಳ ನಿಯಾಮಕನಾಗಿರುವನು. ಸರ್ವ ಜೀವರ ಸರ್ವ-ದೇಹಗಳಲ್ಲಿದ್ದು, ಅವರ ಶ್ವಾಸೋಚ್ಛ್ವಾಸ ರೂಪದಿಂದ ದಿನ ಒಂದಕ್ಕೆ ೨೧,೬೦೦ ಹಂಸ ಮಂತ್ರಗಳನ್ನು ಜಪಿಸಿ ಶ್ರೀಹರಿಯಲ್ಲಿ ಅರ್ಪಿಸುತ್ತಾನೆ. *'ಹಂಸಃ ಸೋಽಹಂ ಸ್ವಾಹಾ'* ಎಂಬುದೇ ಆ ಮಂತ್ರ. ಪ್ರತಿ ನಿಮಿಷಕ್ಕೆ ೧೫ ಉಚ್ಛ್ವಾಸ ನಿಃಶ್ವಾಸ-ಗಳಾಗುತ್ತವೆ. ಹಂಸಃವಿರಾಮ ಕಾಲ; ಸೋಽಹಂ-ಉಚ್ಛ್ವಾಸ ಕಾಲ; ಸ್ವಾಹಾ-ನಿಃಶ್ವಾಸ ಕಾಲ. ದೋಷದೂರನೂ ಭಕ್ತರ ದೋಷಪರಿಹಾರಕನೂ ಆದ್ದರಿಂದ ಶ್ರೀಹರಿಯೇ

'ಹಂಸ'ನು; 'ಸೋऽಹಂ' ಎಂದರೆ, ಆ ಹಂಸನೇ ನನ್ನ ಅಂತರ್ಯಾಮಿ ಎಂದರ್ಥ; (ಅಹಂ, ತ್ವಂ ಮೊದಲಾದ ಶಬ್ದಗಳು ಭಿನ್ನ ವಸ್ತುವಾಚಕಗಳಾದರೂ ಅಂತರ್ಯಾಮಿಯನ್ನು ನಿರ್ದೇಶಿಸಲು ಪ್ರಯೋಗಿಸಲ್ಪಡುತ್ತವೆ). *'ಅಂತರ್ಯಾಮಿಣಮೀಶೇಶಂ ಅಪೇಕ್ಷ್ಯಾಹಂ ತ್ವಮಿತ್ಯಪಿ। ಇಮೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇऽಪಿ ವಸ್ತುಷು॥'* (ಭಾಷ್ಯ); ಸ್ವಾಹಾ ಎಂದರೆ ಅರ್ಪಣಪೂರ್ವಕ ನಮಸ್ಕರಿಸುವುದು. ಬೃಹತೀಸಹಸ್ರ ಮಂತ್ರದಿಂದ, ರಮಾನಾರಾಯಣರ ನಂತರ, ಮುಖ್ಯ ಪ್ರತಿಪಾದ್ಯನಾದ ಶ್ರೀಮುಖ್ಯ-ಪ್ರಾಣನು, ದೇಹದ ಎಡ ಬಲ ಪಾರ್ಶ್ವಗಳಲ್ಲಿರುವ ಒಟ್ಟು ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ, ಅಷ್ಟು ರೂಪಗಳಿಂದಿರುವನು. ಹೆಚ್ಚೇನು! ದೇಹಗತ ಪ್ರತಿ ಪರಮಾಣು-ವಿನಲ್ಲಿ ಆತನ ರೂಪವಿದೆ. ಶ್ರೀಮುಖ್ಯಪ್ರಾಣನು, ಅನಂತ ಜೀವರಲ್ಲಿ ಅನಂತ ರೂಪಗಳಿಂದಿರುವನಲ್ಲದೇ, ಪ್ರತಿ ಸಂಸಾರಿ ಜೀವನಲ್ಲಿ ಅಸಂಖ್ಯಾತ ರೂಪದಿಂದಿರು-ವನು. ಈತನ ಮಹಿಮೆಯನ್ನು ಭಾಗವತ ತಾತ್ಪರ್ಯದಲ್ಲಿ, *'ಮುಖ್ಯಪ್ರಾಣೋ ಮಹಾನೇಷ ಯೇನ ವ್ಯಾಪ್ತಂ ಚರಾಚರಂ। ತಸ್ಮಿನ್ ಓತಮಿದಂ ಸರ್ವಂ ಚೇತನಾಚೇತನಾತ್ಮಕಂ॥'* ಎಂದರೆ, ಮುಖ್ಯಪ್ರಾಣನು ಚರಾಚರ ಜಗತ್ತಿನಲ್ಲಿ ವ್ಯಾಪ್ತ-ನಾಗಿದ್ದಾನೆ; ಚೇತನಾಚೇತನಾತ್ಮಕ ಜಗತ್ತು ಆತನ ಆಶ್ರಯದಲ್ಲಿ ಸ್ಥಿತವಾಗಿದೆ, ಎಂದು ಹೇಳಲಾಗಿದೆ. ಸತ್ತತ್ತ್ವರತ್ನಮಾಲಾ ಗ್ರಂಥದಲ್ಲಿ ಶ್ರೀಮುಖ್ಯಪ್ರಾಣನ ಅಪಾರ ಮಹಿಮೆಯು ಈಗೆ ಸಂಗ್ರಹದಿಂದ ನಿರೂಪಿಸಲಾಗಿದೆ: *'ಏಕೋ ಹಿ ಕರ್ತಾ ಸರ್ವಸ್ಯ ರಮಾನಾಥ ಪ್ರಸಾದತಃ। ಪದಪ್ರದಶ್ಚ ದೇವಾನಾಂ ತತ್ತಚ್ಛಕ್ತಿಪ್ರದಸ್ತಥಾ॥ ತಥಾ ಮೃತ್ಯುಪ್ರದಶ್ಚಾಯಂ ಮುಕ್ತಾನಾಮಪಿ ಜೀವನಂ। ಅನಂತಾನಂತ ರೂಪೇಣ ಜಗದ್ರಮಯತೀಶ್ವರಃ॥ ಜಾಗ್ರತ್ಸ್ವಪ್ನಸುಷುಪ್ತ್ಯಾದಿ ಸರ್ವಾವಸ್ಥಾನಿಯಾಮಕಃ॥'* ಎಂದರೆ, ಶ್ರೀಮುಖ್ಯಪ್ರಾಣನು ಲಕ್ಷ್ಮೀಪತಿಯ ಅನುಗ್ರಹದಿಂದ ಅನಂತಾನಂತ ರೂಪಗಳನ್ನು ಸ್ವೀಕರಿಸಿ, ಅನಂತ ಜೀವರಲ್ಲಿದ್ದು ಸರ್ವವನ್ನೂ ಮಾಡಿ ಮಾಡಿಸು-ತ್ತಾನೆ; ದೇವತೆಗಳಿಗೆ ಅವರವರ ಪದವಿಗಳನ್ನು ಕೊಡುವವನೂ ಆತನೇ; ಆಯಾ ಪದವಿಗಳಲ್ಲಿದ್ದು ಸ್ವಕಾರ್ಯಗಳನ್ನು ನಿರ್ವಹಿಸುವ ಶಕ್ತಿಯನ್ನೂ ಕೊಡುತ್ತಾನೆ; ಆತನೇ ಸರ್ವರಿಗೆ ಜೀವನಪ್ರದನು; ಮೃತ್ಯುಪ್ರದನು; ಮುಕ್ತರಿಗೂ ನಿಯಾಮಕನು; (ಅಪರೋಕ್ಷಜ್ಞಾನವಾದ ನಂತರ ಸ್ವಯೋಗ್ಯ ಮುಕ್ತಿಯನ್ನು ಹೊಂದುವ ಪರ್ಯಂತದ ಸ್ಥಿತಿಯು ಜೀವನ್ಮುಕ್ತಾವಸ್ಥೆಯೆಂದು ಕರೆಯಲ್ಪಡುತ್ತದೆ); ಸರ್ವರ ಜಾಗ್ರದಾದಿ ಸರ್ವಾವಸ್ಥಾ ಪ್ರೇರಕನು.

(ಶ) ರಾಮಕೃಷ್ಣಾದಿ ರೂಪಗಳಿಂದ ಶ್ರೀಹರಿಯು ಅವತರಿಸಿದಾಗ, ಶ್ರೀವಾಯು-ದೇವರೂ ಹನುಮದಾದಿ ಪ್ರಸಿದ್ಧತಮ ರೂಪಗಳಿಂದ ಅವತರಿಸಿ, ಶ್ರೀಹರಿಯ

ಅವತಾರಗಳ ಉದ್ದೇಶ ಸಾಧನೆಯಲ್ಲಿ ಪ್ರಧಾನ ಪಾತ್ರವನ್ನೇ ವ್ಹಸಿ, ಸೇವಿಸುತ್ತಾರೆಂಬರ್ಥವನ್ನು ಮಾತ್ರ, 'ಭಗವತ್ಕಾರ್ಯಸಾಧಕ'ರೆಂಬುದಕ್ಕೆ ತಿಳಿಯಕೂಡದು. ಶ್ರೀಹರಿಯು ಜಗತ್ಸಂಬಂಧವಾದ ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳೆಂಬ ಅಷ್ಟಕರ್ತೃತ್ವಗಳನ್ನು ಲೀಲೆಯಿಂದ ನಿರ್ವ್ಹಸುವ ಸ್ವತಂತ್ರ ಪ್ರಭುವಷ್ಟೆ. ಈ ತನ್ನ ಅಷ್ಟಕರ್ತೃತ್ವಗಳನ್ನೂ ಶ್ರೀಹರಿಯು ಮುಖ್ಯಪ್ರಾಣನ ದ್ವಾರವೇ ನಿರ್ವ್ಹಸುತ್ತಾನೆ. ಅನಂತ ಜೀವರಿಂದ ಪ್ರತಿಕ್ಷಣದಲ್ಲಿ ನಡೆಯುವ ವಿವಿಧ ಕ್ರಿಯೆಗಳಿಗೂ, *'ತೇನ ವಿನಾ ತೃಣಮಪಿ ನ ಚಲತಿ'* ಶ್ರೀಹರಿಯನ್ನುಳಿದು ಒಂದು ಹುಲ್ಲು-ಕಡ್ಡಿಯೂ ಚಲಿಸುವುದಿಲ್ಲವೆಂದು ಶ್ರುತಿಯಲ್ಲಿ ಹೇಳುವ ಸರ್ವ ಅಚೇತನ ಜಗತ್ತಿನ ಕ್ರಿಯೆಗಳಿಗೂ, ಪರಮಾತ್ಮಾಧೀನ ಮಾತ್ರನಾದ ಮುಖ್ಯಪ್ರಾಣನೂ ಪ್ರೇರಕನಾಗಿರುವನು. ಈ ಪರಮಾದ್ಭುತ ಭಗವತ್ಕಾರ್ಯಸಾಧಕತ್ವ ಬೇರಾರಿಗುಂಟು? ಇತರ ತತ್ವಾಭಿಮಾನಿಗಳು ತಂತಮ್ಮ ಅಧಿಕಾರಕ್ಕೊಳಪಟ್ಟ ಅಲ್ಪ ಕಾರ್ಯಗಳಲ್ಲಿ (ಏಕಾಂಶದ ಕ್ರಿಯೆಗಳಲ್ಲಿ) ಸ್ವೋತ್ತಮಸರ್ವರ ಅಧೀನರಾಗಿ ಮಾತ್ರ ಕಾರಣರಾಗಿರುತ್ತಾರೆ. *'ಯಾನಿ ಯಾನೀಹ ಕರ್ಮಾಣಿ ಜಗತಿ ಸ್ಯೂ ರಮಾಪತೇಃ। ಪ್ರಾಯಃ ಪ್ರಾಣಾಧಿಪೇತಾನಿ ಸಮಸ್ತಾನಿ ನ ಸಂಶಯಃ॥'* (ಸ.ರ.ಮಾ). ರಮಾ ರಮೇಶರಿಂದ ವ್ಯತಿರಿಕ್ತವಾದ (ಭಿನ್ನವಾದ) ಜಗತ್ತಿನಲ್ಲಿ ಮುಖ್ಯಪ್ರಾಣ ನಿಯತವಲ್ಲದ ಯಾವ ವಸ್ತುವೂ ಇಲ್ಲ. ಶ್ರೀಮುಖ್ಯಪ್ರಾಣನು, ಈಶಾಧೀನನಾಗಿ ಈಶನಂತೆ ಜಗನ್ನಿಯಾಮಕನಾಗಿದ್ದಾನೆ. ಸರ್ವ ಭೋಕ್ತೃತ್ವ ಸರ್ವಕ್ರಿಯಾಕಾರಿತ್ವಗಳು, ಮುಖ್ಯಪ್ರಾಣನಿಗೆ ಹೇಗೆ ಕೂಡುತ್ತವೆಂದು ಶಂಕಿಸಲಾಗದು. ಶ್ರೀಹರಿಯಿಂದ ಮಾತ್ರ ಭೋಗ್ಯವಾದ ಭೋಗಗಳನ್ನೂ ರಾವಣ-ಸಂಹಾರಾದಿ ಹರ್ಯೇಕನಿಷ್ಠ ಕ್ರಿಯೆಗಳನ್ನು ಬಿಟ್ಟು ಅನ್ಯಭೋಗ ಮತ್ತು ಕ್ರಿಯೆಗಳನ್ನೇ ಇಲ್ಲಿ ಹೇಳಲಾಗಿದೆ. ಆದ್ದರಿಂದಲೇ 'ಪ್ರಾಯಃ ಪ್ರಾಣಾಧಿಪೇ' ಎಂದು 'ಪ್ರಾಯಃ' ಶಬ್ದವಿರುತ್ತದೆ.

(೬) ಮುಖ್ಯಪ್ರಾಣನು 'ಅಧ್ಯರ್ಧ'ನೆಂದು ವೇದಾದಿಗಳಲ್ಲಿ ಕರೆಯಲ್ಪಟ್ಟಿರುವನು. ನಿತ್ಯಪೂರ್ಣಗುಣವುಳ್ಳವನಾದ್ದರಿಂದಲೂ, ಶ್ರೀಹರಿಗೆ ಪ್ರಿಯತಮನಾದ್ದರಿಂದಲೂ, ಮುಖ್ಯಪ್ರಾಣನಿಗೆ ಅಪ್ರಾಪ್ಯವೂ ಅಶಕ್ಯವೂ ಆದುದು ಯಾವುದೊಂದೂ ಇಲ್ಲ. ಆದ್ದರಿಂದಲೇ ಅಧ್ಯರ್ಧನು ಪೂರ್ಣಕಾಮನು. ಪ್ರತ್ಯುಪಕಾರ ಅಥವಾ ಪ್ರತಿಫಲದ ಅಪೇಕ್ಷೆಯಿಲ್ಲದೇ, ಪೂರ್ಣಕಾಮರು ಮಾತ್ರ ಅನ್ಯರಿಗೆ ಉಪಕಾರ ಮಾಡಬಲ್ಲರು. ಆದ್ದರಿಂದ ಪೂರ್ಣಕಾಮನಾದ ಶ್ರೀಮುಖ್ಯಪ್ರಾಣನೇ ಅನಿಮಿತ್ತ ಬಂಧುವು. ತಂದೆ-ತಾಯಿ-ಪುತ್ರಾದಿ ಸಕಲ ಬಂಧುಗಳಿಂದ ಆಗುವ ಎಲ್ಲ ಪ್ರಕಾರದ ಉಪಕಾರ-ಗಳನ್ನೂ (ರಕ್ಷಣೆ, ಭಯ ಪರಿಹಾರಾದಿ ಉಪಕಾರಗಳನ್ನು) ಮುಖ್ಯಪ್ರಾಣನು ಮಾತ್ರ

ಮಾಡಬಲ್ಲನು ಮತ್ತು ಮಾತಾಪಿತೃಗಳಂತೆ ಸರ್ವಾಪರಾಧಗಳನ್ನು ಕ್ಷಮಿಸಿ ಅನು-ಗ್ರಸಲು ಸಮರ್ಥನು. ಈತನಂತೆ ಕೃಪಾಪೂರ್ಣರೂ, ಕ್ಷಮಾವಂತರೂ, ರಮಾ-ನಾರಾಯಣರನ್ನುಳಿದು, ಅನ್ಯರಿಲ್ಲ. ಕ್ಷಮಾಸಮುದ್ರನಾದ ಶ್ರೀಹರಿಯು ಸರ್ವಾಪ-ರಾಧಗಳನ್ನು ಮನ್ನಿಸಿ, ಭಕ್ತರನ್ನುದ್ಧರಿಸುವ, ಉದಾರ ಸ್ವಭಾವದವನಾದರೂ, ಈ ಗುಣಪ್ರಕಾಶಕ ಭಕ್ತೋದ್ಧಾರಾದಿ ಕಾರ್ಯಗಳನ್ನೂ ಸಹ ಶ್ರೀಮುಖ್ಯಪ್ರಾಣನ ದ್ವಾರವೇ ಮಾಡುತ್ತಾನೆ. ಶ್ರೀಹರಿಯಲ್ಲಿರುವ ವಾತ್ಸಲ್ಯ ಕ್ಷಮಾದಿ ಗುಣಗಳು, ಮುಖ್ಯ ಪ್ರತಿ-ಬಿಂಬನಾದ ಮುಖ್ಯ ಪ್ರಾಣದೇವನಲ್ಲಿದ್ದೇ ಇವೆ. ಶ್ರೀವಾಯುದೇವರು ಸುಗ್ರೀವ, ಅರ್ಜುನಾದಿಗಳನ್ನು ಕೈಹಿಡಿದು ರಕ್ಷಿಸಿದುದೇ ಮುಂತಾದ ಪುರಾಣೋಕ್ತ ಚರಿತ್ರೆಗಳಿಂದ ಅವರ ದಯಾಳುತ್ವ, ಕ್ಷಮಾಗುಣ, ಭಕ್ತವಾತ್ಸಲ್ಯ ಮೊದಲಾದ ಮಹಾಗುಣಗಳು ಸಿದ್ಧವಾಗುತ್ತವೆ.

೩. ಅಜ್ಞ-ಜ್ಞಾನಾರ್ಥಿ-ಜ್ಞಾನಯೋಗ್ಯ-ಭಗವತ್ಕೃಪಾಪಾತ್ರಭೂತ-ಸಲ್ಲೋಕ-ಕೃಪಾಲು-ಶ್ರೀಬ್ರಹ್ಮರುದ್ರಾದ್ಯರ್ಥಿತ ಭಗವದಾಜ್ಞಾಂ ಶಿರಸಿ ಪರಮಾದರೇಣ ಅನರ್ಘ್ಯಶಿರೋರತ್ನವತ್ ನಿಧಾಯ ತಥಾ ಅಶೇಷದೇವತಾಪ್ರಾರ್ಥನಾಂ ಹಾರವತ್ ಹೃದಿ ನಿಧಾಯ ಸರ್ವಸ್ವಕೀಯಸಜ್ಜನಾನುಗ್ರಹೇಚ್ಛಯಾ ಕರ್ಮಭುವಿ ಅವತೀರ್ಣಾನಾಮ್.....

ಪ್ರತಿಪದಾರ್ಥ: ಅಜ್ಞ— ಜ್ಞಾನರಹಿತರೂ, ಜ್ಞಾನಾರ್ಥಿ— ಜ್ಞಾನಕ್ಕಾಗಿ ಉತ್ಸಾಹವುಳ್ಳ-ವರೂ, ಜ್ಞಾನಯೋಗ್ಯ— ಜ್ಞಾನಕ್ಕೆ ಅರ್ಹರೂ, ಭಗವತ್ಕೃಪಾಪಾತ್ರಭೂತ— ಭಗವಂತನ ಕೃಪೆಗೆ ಪಾತ್ರರೂ ಆದ, ಸಲ್ಲೋಕ ಕೃಪಾಳು ಬ್ರಹ್ಮರುದ್ರಾದ್ಯರ್ಥಿತ— ಸಜ್ಜನರ ಮೇಲೆ (ಮುಕ್ತಿಯೋಗ್ಯ ಜೀವರ ಮೇಲೆ) ಕೃಪೆ ಮಾಡುವ ಸ್ವಭಾವದವರಾದ ಬ್ರಹ್ಮ ರುದ್ರಾದಿ ದೇವತೆಗಳಿಂದ ಪ್ರಾರ್ಥಿತನಾಗಿ ಮಾಡಿದ, ಭಗವದಾಜ್ಞಾಂ— ಶ್ರೀಹರಿಯ ಆಜ್ಞೆಯನ್ನು, ಶಿರಸಿ— ತನ್ನ ತಲೆಯಲ್ಲಿ, ಪರಮಾದರೇಣ— ಅತ್ಯಂತ ಭಕ್ತಿಪೂರ್ವಕ, ಅನರ್ಘ್ಯ ಶಿರೋ-ರತ್ನವತ್— ಅಮೌಲ್ಯವಾದ (ಶಿರಸ್ಸಿನಲ್ಲಿ ಧರಿಸುವ ರತ್ನದಂತೆ) ಶಿರೋರತ್ನದಂತೆ, ನಿಧಾಯ — ಧರಿಸಿ, ತಥಾ— ಹಾಗೂ (ಮತ್ತು), ಅಶೇಷದೇವತಾಪ್ರಾರ್ಥನಾಂ— ಸಮಸ್ತ ದೇವತೆಗಳ (ಭೂಮಿಯಲ್ಲಿ ಅವತರಿಸಿ ಅನುಗ್ರಸಬೇಕೆಂಬ) ಪ್ರಾರ್ಥನೆಯನ್ನು, ಹಾರವತ್— ಹಾರ-ದಂತೆ, ಹೃದಿ— ವಕ್ಷಸ್ಥಳದಲ್ಲಿ, ನಿಧಾಯ— ಧರಿಸಿ, ಸರ್ವಸ್ವಕೀಯ ಸಜ್ಜನಾನುಗ್ರಹೇ-ಚ್ಛಯಾ— ತಮ್ಮವರೇ ಆದ ಸಕಲ ಸಜ್ಜನರನ್ನು ಅನುಗ್ರಸುವ ಇಚ್ಛೆಯಿಂದ, ಕರ್ಮಭುವಿ — ಕರ್ಮಭೂಮಿಯಲ್ಲಿ (ಭರತಖಂಡದಲ್ಲಿ), ಅವತೀರ್ಣಾನಾಂ— ಅವತಾರ ಮಾಡಿದ ಶ್ರೀಮುಖ್ಯಪ್ರಾಣನ (ಶ್ರೀಮನ್ಮಧ್ವಾಚಾರ್ಯರ);

ತಾತ್ಪರ್ಯ: ಜ್ಞಾನವಿಲ್ಲದವರಾಗಿದ್ದು, ಜ್ಞಾನಕ್ಕಾಗಿ ಯತ್ನಿಸುತ್ತಿರುವ ಜ್ಞಾನಯೋಗ್ಯ ಸ್ವಭಾವವುಳ್ಳ ಜೀವರು, ಭಗವಂತನ ಕೃಪೆಗೆ ಪಾತ್ರರು. ಇವರೇ ಮುಕ್ತಿಯೋಗ್ಯರಾದ

ಸುಜೀವರು (ಸಾತ್ವಿಕರೆಂಬುವರು); ಇವರ ಮೇಲೆ ಬ್ರಹ್ಮಾದಿ ದೇವತೆಗಳೂ ಕೃಪೆ-ಯುಳ್ಳವರೇ ಆಗಿರುತ್ತಾರೆ. ಜಗತ್ತಿನಲ್ಲಿ ಜ್ಞಾನಸೂರ್ಯನು ಅಸ್ತಮಿಸಿ ಅಜ್ಞಾನಾಂಧ-ಕಾರವು ವ್ಯಾಪಿಸಿದಾಗ ಸಜ್ಜನರು ವ್ಯಾಕುಲಚಿತ್ತರಾದರು. ಆಗ ಬ್ರಹ್ಮಾದಿ ದೇವತೆಗಳು ಸಜ್ಜನರ ಪರವಾಗಿ, ಅವರಿಗೆ ಜ್ಞಾನೋದಯವಾಗುವ ಮಾರ್ಗವನ್ನು ಕರುಣಿಸೆಂದು ಶ್ರೀಹರಿಯಲ್ಲಿ ಪ್ರಾರ್ಥಿಸಿದರು. ಶ್ರೀಹರಿಯು, ಭೂಮಿಯಲ್ಲಿ ಅವತರಿಸಿ ಆ ಕಾರ್ಯವನ್ನು ಸಾಧಿಸಲು ವಾಯುದೇವರಿಗೆ ಆಜ್ಞಾಪಿಸಿದನು. ರುದ್ರಾದಿ ದೇವತೆಗಳೂ ಶೀಘ್ರವಾಗಿ ಸಜ್ಜನರನ್ನು ಜ್ಞಾನದಾನದಿಂದ ಉದ್ಧರಿಸಲು ವಾಯುದೇವರನ್ನು ಕೇಳಿ-ಕೊಂಡರು. ಭಗವಂತನ ಆಜ್ಞೆಯನ್ನು ಶಿರೋರತ್ನದಂತೆ ಶಿರಸಾವಹಿಸಿ, ದೇವತೆಗಳ ಪ್ರಾರ್ಥನೆಯನ್ನು ಮುತ್ತಿನಹಾರದಂತೆ ಕೊರಳಲ್ಲಿ ಧರಿಸಿ, ಸ್ವಭಕ್ತರಾದ ಸಜ್ಜನ-ರನ್ನುದ್ಧರಿಸಲು, ಕರ್ಮಭೂಮಿಯೆನಿಸಿದ ಭರತಖಂಡದಲ್ಲಿ ಶ್ರೀವಾಯುದೇವರು ಅವತರಿಸಿ ಶ್ರೀಮದಾನಂದತೀರ್ಥರೆಂಬ ಶುಭನಾಮವುಳ್ಳವರಾದರು.

ಪ್ರಮೇಯ ವಿವರಣೆ: (೧) ಜ್ಞಾನಶಬ್ದಕ್ಕೆ ಸಾಮಾನ್ಯವಾಗಿ ವಿಷಯಗ್ರಹಣ ಶಕ್ತಿಯೆಂಬರ್ಥವಿದೆ. ಇದು ಚೇತನ ಸಾಮಾನ್ಯ ಧರ್ಮ. ಆದರೆ ಜ್ಞಾನ ಶಬ್ದವು 'ತತ್ವಜ್ಞಾನವೆಂಬರ್ಥ'ದಲ್ಲಿ ಶಾಸ್ತ್ರಗಳಲ್ಲಿ ಉಪಯೋಗಿಸಲ್ಪಡುತ್ತದೆ. ಜ್ಞಾನವೆಂದರೆ, ಮುಖ್ಯಾರ್ಥದಲ್ಲಿ ಭಗವದಪರೋಕ್ಷ ಜ್ಞಾನವೇ. ಆದರೂ ತತ್ಸಾಧಕ ಪರೋಕ್ಷ ಜ್ಞಾನವೂ ಜ್ಞಾನವೆಂದೇ ವ್ಯವಹರಿಸಲ್ಪಡುತ್ತದೆ. ಮನ ಮೊದಲಾದ ಪ್ರಾಕೃತೇಂದ್ರಿ-ಯಗಳ (ದ್ವಾರಾ) ಸಹಾಯದಿಂದ ದೊರೆಯುವ ಜ್ಞಾನವು ಪರೋಕ್ಷಜ್ಞಾನವು: ಸಾಕ್ಷಾತ್ತಾಗಿ (ಸ್ವಯಂ ಸಾಕ್ಷೀ ಸ್ವರೂಪನಾದ ಜೀವನು ತನ್ನ ಸ್ವರೂಪೇಂದ್ರಿಯ-ಗಳಿಂದಲೇ) ತಿಳಿಯುವುದು ಅಪರೋಕ್ಷ ಅಥವಾ ಪ್ರತ್ಯಕ್ಷವೆಂದೂ, ಕೇವಲಜ್ಞಾನ-ವೆಂದೂ ಕರೆಯಲ್ಪಡುತ್ತದೆ. ಜೀವನು ಭಗವಂತನನ್ನು ಪ್ರತ್ಯಕ್ಷವಾಗಿ ನೋಡುವುದನ್ನು ಅಪರೋಕ್ಷಜ್ಞಾನವೆಂದು ಕರೆಯುವ ರೂಢಿಯಿದೆ. ಮುಖ್ಯಾರ್ಥದಲ್ಲಿ ಜ್ಞಾನವೆಂದರೆ ತತ್ವಜ್ಞಾನವೇ—ಅಪರೋಕ್ಷಜ್ಞಾನವೆಂದೇ ಅರ್ಥ. ಪ್ರಾಕೃತ ಮನ ಆದಿ ಇಂದ್ರಿಯ-ಗಳಿಲ್ಲದ ಮುಕ್ತಜೀವರು ನಿತ್ಯಾಪರೋಕ್ಷಿಗಳೇ. ಸರ್ವವನ್ನೂ ಸ್ವಸ್ವರೂಪೇಂದ್ರಿಯ-ಗಳಿಂದಲೇ ಗ್ರಸುವುದರಿಂದ. ಅನ್ಯೋಪಕರಣಗಳ ಸಹಾಯವಿಲ್ಲದೇ ಸ್ವಯಂ ತಿಳಿಯುವುದನ್ನು ಅಪರೋಕ್ಷಜ್ಞಾನವೆಂದು ಹೇಳಿದರೂ, ಅತ್ಯಂತ ಶುದ್ಧವಾದ ಮನಸ್ಸಿನ ಸಹಾಯದಿಂದ, ಜೀವನು ಸಮಾಧಿಯಲ್ಲಿ ಹೊಂದುವ ಭಗವದ್ದರ್ಶನ-ವನ್ನೂ ಅಪರೋಕ್ಷಜ್ಞಾನವೆಂದೇ ಕರೆಯಲಾಗುತ್ತದೆ. ಈ ವಿಮರ್ಶೆಯಿಂದ ಜೀವ-ಜಡ-ಈಶ್ವರರ ಯಥಾರ್ಥ ಸ್ವರೂಪ ಮತ್ತು ಪರಸ್ಪರ ಸಂಬಂಧಗಳನ್ನೂ, ಧರ್ಮ-ಅಧರ್ಮ-ಮೋಕ್ಷ-ಮುಕ್ತಿ ಸಾಧನಗಳನ್ನೂ ಬಿಟ್ಟು, ಇತರ ಪ್ರಾಕೃತ (ಲೌಕಿಕ)

ವಿಷಯಗಳ ಸಂಬಂಧವಾದ ವಿದ್ಯೆಗಳನ್ನು (ಜ್ಞಾನ ವಿಶೇಷಗಳನ್ನು), ಜ್ಞಾನವೆಂದೂ, ಈ ಜ್ಞಾನವುಳ್ಳವರನ್ನು ಜ್ಞಾನಿಗಳೆಂದೂ ವ್ಯವಹರಿಸುವುದು ಕೇವಲ ಔಪಚಾರಿಕ-ವೆಂದು ಏರ್ಪಡುತ್ತದೆ.

ಜ್ಞಾನ ಶಬ್ದದ ಮುಖ್ಯಾರ್ಥವಾದ ಭಗವದ್ದರ್ಶನವು (ಅಪರೋಕ್ಷವು), ಅದಕ್ಕಾಗಿ ಯತ್ನಿಸಿದವರಿಗೆಲ್ಲ ದೊರೆಯುವುದಿಲ್ಲ. ಜ್ಞಾನಯೋಗ್ಯರಾದ ಜೀವರ ಗುಂಪಿಗೆ ಸೇರಿ-ದವರಿಗೆ ಮಾತ್ರ ಲಭಿಸುತ್ತದೆ. ಜ್ಞಾನಾರ್ಹರಾಗಿದ್ದರೂ ಜ್ಞಾನವಿಲ್ಲದೇ ಅದರ ಪ್ರಾಪ್ತಿ-ಗಾಗಿ ಉತ್ಸಾಸುತ್ತಿರುವ (ಜ್ಞಾನಾರ್ಥಿಗಳಾದ) ಜೀವರು ಮಾತ್ರ ಭಗವಂತನ ಕೃಪೆಗೆ ಪಾತ್ರರು. ಈ ಸುಜೀವರ ಸಮೂಹವನ್ನೇ ಸಲ್ಲೋಕವೆಂದು ಕರೆಯುವರು. ಈ ಜೀವರ ಮೇಲೆ ಬ್ರಹ್ಮರುದ್ರಾದಿ ದೇವತೆಗಳ ಕೃಪೆಯು ಸ್ವಾಭಾವಿಕವು. ಇವರ ವಿಪತ್ಪರಂಪರೆಗಳನ್ನು ಪರಿಹರಿಸಲು ತಾವೂ ಶ್ರೀಹರಿಯನ್ನು ಪ್ರಾರ್ಥಿಸುತ್ತಾರೆ.

ಜೀವರ ಸ್ವಭಾವಗಳು ತ್ರಿವಿಧ; ಎಂದರೆ, ಜೀವರು ಸ್ವರೂಪದಿಂದಲೇ ತ್ರಿವಿಧ-ರಾಗಿದ್ದಾರೆ. ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಮತ್ತು ತಮೋಯೋಗ್ಯರೆಂದು ಅವರ ಅಂತ್ಯಗತಿಸೂಚಕ ಶಬ್ದಗಳಿಂದ ಕರೆಯಲ್ಪಡುತ್ತಾರೆ. ಇವರನ್ನು ಸಾತ್ವಿಕ-ರಾಜಸ-ತಾಮಸರೆಂದೂ ಕರೆಯುವುದುಂಟು. ಸಂಸಾರದಲ್ಲಿರುವವರೆಗೆ ಸತ್ವ-ರಜ-ತಮಗಳೆಂಬ ಪ್ರಾಕೃತ ಗುಣಗಳು ಇವರನ್ನು ಬಂಧಿಸಿರುತ್ತವೆ. ಈ ತ್ರಿಗುಣಗಳು ಮಿಳಿತವಾಗಿಯೇ ಎಲ್ಲ ಜೀವರನ್ನು ಬಂಧಿಸಿರುತ್ತವೆ. ಆದರೂ ಬಂಧಕ ಗುಣಗಳಲ್ಲಿ ಯಾವುದು ಯಾರನ್ನು ಅಧಿಕ ಪ್ರಮಾಣದಿಂದ ಬಂಧಿಸಿರುತ್ತದೆಯೋ, ಅವರು ಆ ಗುಣನಾಮದಿಂದ ವ್ಯವಹರಿಸಲ್ಪಡುತ್ತಾರೆ. ಜೀವ ಸ್ವರೂಪವು ನಿತ್ಯ ಮತ್ತು ಅನಾದಿ. ಇದರ ಮೇಲೆ ಲಿಂಗ ದೇಹ, ಅನಿರುದ್ಧ ದೇಹ ಮತ್ತು ಸ್ಥೂಲಭೌತಿಕ ದೇಹಗಳೂ ಆವರಕವಾಗಿರುತ್ತವೆ. ಈ ಆವರಣಗಳು ಮೂರೂ ಆತ್ಯಂತಿಕವಾಗಿ (ಮತ್ತೆ ಬರ-ದಂತೆ) ತೊಲಗಿ ಜೀವಸ್ವರೂಪದ ನಿತ್ಯಾವಿರ್ಭಾವವಾಗುವುದೇ ಮೋಕ್ಷವು. ಮುಕ್ತಿ-ಯೋಗ್ಯ ಜೀವರು ಸ್ವಸ್ವರೂಪವೇ ಆದ ಆನಂದಾದಿಗಳನ್ನು ಅನುಭವಿಸುತ್ತ ನಿತ್ಯ ಸುಖಿಗಳಾಗುವರು. ಯಥಾರ್ಥ ಜ್ಞಾನವೂ, ಭಗವದ್ಭಕ್ತಿಯೂ ಈ ಜೀವರ ಸ್ವರೂಪ ಗುಣಗಳು. ತಮೋಯೋಗ್ಯರ ಸ್ವರೂಪವು ದುಃಖ ದ್ವೇಷಾದಿ ದುರ್ಗುಣ ರೂಪ-ವಾದುದು. ಅವರಿಗೆ ಮೋಕ್ಷದಲ್ಲಿ ದೊರೆಯುವುದು ನಿತ್ಯದುಃಖವೇ. ಜೀವ ತ್ರೈವಿಧ್ಯವು, ಲೋಕಾನುಭವ ವಿಮರ್ಶೆಯಿಂದ ಸಾಮಾನ್ಯಾಕಾರವಾಗಿ ತಿಳಿದುಬರು-ತ್ತದೆ. ಜೀವಸ್ವರೂಪಗಳು ಅಪ್ರಾಕೃತವು-ಅತೀಂದ್ರಿಯವು-ಚಕ್ಷುರಾದಿ ಜ್ಞಾನೇಂದ್ರಿಯ-ಗಳಿಗೂ ಮನಸ್ಸಿಗೂ ಗೋಚರವಲ್ಲ. ಅತೀಂದ್ರಿಯಗಳಾದ ಧರ್ಮ-ಅಧರ್ಮ-ಈಶ್ವರ-ಸ್ವರ್ಗ-ನರಕ ಮೊದಲಾದ ವಸ್ತುವಿಷಯ ಜ್ಞಾನಕ್ಕೆ, ಪರಮ ಪ್ರಮಾಣಗಳಾದ

ಶ್ರುತಿ ಸ್ಮೃತಿಗಳೇ ಮುಖ್ಯ ಸಾಧನಗಳು. ಇವು ನಿರವಕಾಶ (ಅನ್ಯಾರ್ಥಕ್ಕೆ ಅವಕಾಶವಿಲ್ಲದ) ಸ್ಪಷ್ಟ ಶಬ್ದಗಳಿಂದ ಜೀವತ್ರೈವಿಧ್ಯವನ್ನು ಸಾರುತ್ತವೆ. ಅವುಗಳಲ್ಲಿ ಕೆಲವನ್ನು ಈ ಮುಂದೆ ಉದಹರಿಸಲಾಗುತ್ತದೆ. ಶ್ರುತಿಗಳು: *(೧) ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ ಅನ್ಯಮನ್ಯಂ ಅತಿನೇನೀಯಮಾನಃ (ಋಗ್ವೇದ); (೨) ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ ನಚೋಭಯಂ ಮನುಷ್ಯಾಣಾಂ। ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋಽಹ್ಯೇಷ ಭವತಿ —(ಶ್ರುತಿ) (೩) ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತಿ ಆಸುರೀಮೇವಚಾಸುರಾಃ ನೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ (ಶ್ರುತಿ).*

ಸ್ಮೃತಿ— *ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ।*
*ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್॥*
*ದೇವಾ ದೇವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್।*
*ಸಮ್ಯಕ್ ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್॥*
*ನಾನಯೋರನ್ಯಥಾ ಭಾವಃ ಕದಾಚಿತ್ ಕ್ವಾಪಿ ವಿದ್ಯತೇ।*
*ಮಾನುಷಾ ಮಿಶ್ರಮತಯಃ ವಿಮಿಶ್ರಗತಯೋಽಪಿ ಚ॥* (ಸ್ಕಾಂದ)

ಇವುಗಳ ಭಾವಾರ್ಥ ಹೀಗಿದೆ:

**ಶ್ರುತಿಗಳು:** (೧) ಸರ್ವಶಕ್ತನೂ ಮಹೈಶ್ವರ್ಯವಂತನೂ ಆದ ಪರಮಾತ್ಮನು ಅಸುರ (ಉಗ್ರ) ಸ್ವಭಾವದ ಪ್ರತಿಯೊಬ್ಬನನ್ನು ಶಿಕ್ಷಿಸಿ, ಅನ್ಯ (ಅಸುರಭಿನ್ನ—ದೇವಸ್ವಭಾವದ) ಪ್ರತಿಯೊಬ್ಬನನ್ನೂ ಸಂಸಾರದಿಂದ ದಾಟಿಸುವನು; (೨) ಅಸುರರಿಗೆ ದೇವಸ್ವರೂಪವೂ, ದೇವತೆಗಳಿಗೆ ಅಸುರ ಸ್ವರೂಪವೂ, ಮನುಷ್ಯರಿಗೆ ಈ ಎರಡರಲ್ಲಿ ಯಾವುದೊಂದೂ ಪ್ರಾಪ್ತವಾಗುವುದಿಲ್ಲ. ಪ್ರತಿಯೊಬ್ಬನೂ ತನ್ನ ಸ್ವಭಾವವನ್ನೇ ಹೊಂದುತ್ತಾನೆ; (೩) ದೇವತೆಗಳು ದೇವ ಸ್ವಭಾವವನ್ನೂ, ಅಸುರರು ಅಸುರ ಸ್ವಭಾವವನ್ನೂ ಹೊಂದುತ್ತಾರೆ; ಈ ನಿಯಮಕ್ಕೆ ಎಂದೂ ಅಪೋಹವಿಲ್ಲ (ವ್ಯತ್ಯಾಸವಾಗುವುದಿಲ್ಲ); ಅವರವರ ಸ್ವಭಾವಗಳೇ ಶಾಶ್ವತವಾಗಿ ನಿಲ್ಲುತ್ತವೆ. ಸ್ಮೃತಿ: ಅಸುರರು ತಾಮಸ ಕರ್ಮಗಳಿಂದಲೂ ಮಿಥ್ಯಾಜ್ಞಾನದಿಂದಲೂ ನಿಶ್ಚಯವಾಗಿ ತಮಸ್ಸನ್ನು ಹೊಂದುತ್ತಾರೆ. ದೇವತೆಗಳು ಸತ್ಕರ್ಮಗಳಿಂದಲೂ, ಸಮೀಚೀನ ಜ್ಞಾನದಿಂದಲೂ ಉತ್ತಮವಾದ ವಿಷ್ಣುಲೋಕವನ್ನು ಹೊಂದುತ್ತಾರೆ. ಈ ನಿಯಮಕ್ಕೆ ಎಂದೂ ಎಲ್ಲಿಯೂ ವ್ಯತಿರೇಕವಿಲ್ಲ (ಮನುಷ್ಯೋತ್ತಮ ಜೀವರು ದೇವ ಸ್ವಭಾವದ ಗುಂಪಿಗೆ ಸೇರಿದವರು); ಮಿಶ್ರಜ್ಞಾನವುಳ್ಳ ಮನುಷ್ಯರು (ಮನುಷ್ಯ ಮಧ್ಯಮರು) ಸುಖದುಃಖಮಿಶ್ರವಾದ ಗತಿಯನ್ನೇ ಹೊಂದುತ್ತಾರೆ. ಜೀವ ಸ್ವಭಾವಗಳು ಹೀಗಿರುವುದರಿಂದ ದೇವಸ್ವಭಾವದ ಮುಕ್ತಿಯೋಗ್ಯ ಜೀವರೇ ಜ್ಞಾನಯೋಗ್ಯರೆಂದು ಸಿದ್ಧ-

ವಿಷಯಗಳ ಸಂಬಂಧವಾದ ವಿದ್ಯೆಗಳನ್ನು (ಜ್ಞಾನ ವಿಶೇಷಗಳನ್ನು), ಜ್ಞಾನವೆಂದೂ, ಈ ಜ್ಞಾನವುಳ್ಳವರನ್ನು ಜ್ಞಾನಿಗಳೆಂದೂ ವ್ಯವಹರಿಸುವುದು ಕೇವಲ ಔಪಚಾರಿಕ-ವೆಂದು ಏರ್ಪಡುತ್ತದೆ.

ಜ್ಞಾನ ಶಬ್ದದ ಮುಖ್ಯಾರ್ಥವಾದ ಭಗವದ್ದರ್ಶನವು (ಅಪರೋಕ್ಷವು), ಅದಕ್ಕಾಗಿ ಯತ್ನಿಸಿದವರಿಗೆಲ್ಲ ದೊರೆಯುವುದಿಲ್ಲ. ಜ್ಞಾನಯೋಗ್ಯರಾದ ಜೀವರ ಗುಂಪಿಗೆ ಸೇರಿ-ದವರಿಗೆ ಮಾತ್ರ ಲಭಿಸುತ್ತದೆ. ಜ್ಞಾನಾರ್ಹರಾಗಿದ್ದರೂ ಜ್ಞಾನವಿಲ್ಲದೇ ಅದರ ಪ್ರಾಪ್ತಿ-ಗಾಗಿ ಉತ್ಸಾಸುತ್ತಿರುವ (ಜ್ಞಾನಾರ್ಥಿಗಳಾದ) ಜೀವರು ಮಾತ್ರ ಭಗವಂತನ ಕೃಪೆಗೆ ಪಾತ್ರರು. ಈ ಸುಜೀವರ ಸಮೂಹವನ್ನೇ ಸಲ್ಲೋಕವೆಂದು ಕರೆಯುವರು. ಈ ಜೀವರ ಮೇಲೆ ಬ್ರಹ್ಮರುದ್ರಾದಿ ದೇವತೆಗಳ ಕೃಪೆಯು ಸ್ವಾಭಾವಿಕವು. ಇವರ ವಿಪತ್ಪರಂಪರೆಗಳನ್ನು ಪರಿಹರಿಸಲು ತಾವೂ ಶ್ರೀಹರಿಯನ್ನು ಪ್ರಾರ್ಥಿಸುತ್ತಾರೆ.

ಜೀವರ ಸ್ವಭಾವಗಳು ತ್ರಿವಿಧ; ಎಂದರೆ, ಜೀವರು ಸ್ವರೂಪದಿಂದಲೇ ತ್ರಿವಿಧ-ರಾಗಿದ್ದಾರೆ. ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಮತ್ತು ತಮೋಯೋಗ್ಯರೆಂದು ಅವರ ಅಂತ್ಯಗತಿಸೂಚಕ ಶಬ್ದಗಳಿಂದ ಕರೆಯಲ್ಪಡುತ್ತಾರೆ. ಇವರನ್ನು ಸಾತ್ವಿಕ-ರಾಜಸ-ತಾಮಸರೆಂದೂ ಕರೆಯುವುದುಂಟು. ಸಂಸಾರದಲ್ಲಿರುವವರೆಗೆ ಸತ್ವ-ರಜ-ತಮಗಳೆಂಬ ಪ್ರಾಕೃತ ಗುಣಗಳು ಇವರನ್ನು ಬಂಧಿಸಿರುತ್ತವೆ. ಈ ತ್ರಿಗುಣಗಳು ಮಿಳಿತವಾಗಿಯೇ ಎಲ್ಲ ಜೀವರನ್ನು ಬಂಧಿಸಿರುತ್ತವೆ. ಆದರೂ ಬಂಧಕ ಗುಣಗಳಲ್ಲಿ ಯಾವುದು ಯಾರನ್ನು ಅಧಿಕ ಪ್ರಮಾಣದಿಂದ ಬಂಧಿಸಿರುತ್ತದೆಯೋ, ಅವರು ಆ ಗುಣನಾಮದಿಂದ ವ್ಯವಹರಿಸಲ್ಪಡುತ್ತಾರೆ. ಜೀವ ಸ್ವರೂಪವು ನಿತ್ಯ ಮತ್ತು ಅನಾದಿ. ಇದರ ಮೇಲೆ ಲಿಂಗ ದೇಹ, ಅನಿರುದ್ಧ ದೇಹ ಮತ್ತು ಸ್ಥೂಲಭೌತಿಕ ದೇಹಗಳೂ ಆವರಕವಾಗಿರುತ್ತವೆ. ಈ ಆವರಣಗಳು ಮೂರೂ ಆತ್ಯಂತಿಕವಾಗಿ (ಮತ್ತೆ ಬರ-ದಂತೆ) ತೊಲಗಿ ಜೀವಸ್ವರೂಪದ ನಿತ್ಯಾವಿರ್ಭಾವವಾಗುವುದೇ ಮೋಕ್ಷವು. ಮುಕ್ತಿ-ಯೋಗ್ಯ ಜೀವರು ಸ್ವಸ್ವರೂಪವೇ ಆದ ಆನಂದಾದಿಗಳನ್ನು ಅನುಭವಿಸುತ್ತ ನಿತ್ಯ ಸುಖಿಗಳಾಗುವರು. ಯಥಾರ್ಥ ಜ್ಞಾನವೂ, ಭಗವದ್ಭಕ್ತಿಯೂ ಈ ಜೀವರ ಸ್ವರೂಪ ಗುಣಗಳು. ತಮೋಯೋಗ್ಯರ ಸ್ವರೂಪವು ದುಃಖ ದ್ವೇಷಾದಿ ದುರ್ಗುಣ ರೂಪ-ವಾದುದು. ಅವರಿಗೆ ಮೋಕ್ಷದಲ್ಲಿ ದೊರೆಯುವುದು ನಿತ್ಯದುಃಖವೇ. ಜೀವ ತ್ರೈವಿಧ್ಯವು, ಲೋಕಾನುಭವ ವಿಮರ್ಶೆಯಿಂದ ಸಾಮಾನ್ಯಾಕಾರವಾಗಿ ತಿಳಿದುಬರು-ತ್ತದೆ. ಜೀವಸ್ವರೂಪಗಳು ಅಪ್ರಾಕೃತವು-ಅತೀಂದ್ರಿಯವು-ಚಕ್ಷುರಾದಿ ಜ್ಞಾನೇಂದ್ರಿಯ-ಗಳಿಗೂ ಮನಸ್ಸಿಗೂ ಗೋಚರವಲ್ಲ. ಅತೀಂದ್ರಿಯಗಳಾದ ಧರ್ಮ-ಅಧರ್ಮ-ಈಶ್ವರ-ಸ್ವರ್ಗ-ನರಕ ಮೊದಲಾದ ವಸ್ತುವಿಷಯ ಜ್ಞಾನಕ್ಕೆ, ಪರಮ ಪ್ರಮಾಣಗಳಾದ

ಶ್ರುತಿ ಸ್ಮೃತಿಗಳೇ ಮುಖ್ಯ ಸಾಧನಗಳು. ಇವು ನಿರವಕಾಶ (ಅನ್ಯಾರ್ಥಕ್ಕೆ ಅವಕಾಶ-ವಿಲ್ಲದ) ಸ್ಪಷ್ಟ ಶಬ್ದಗಳಿಂದ ಜೀವತ್ರೈವಿಧ್ಯವನ್ನು ಸಾರುತ್ತವೆ. ಅವುಗಳಲ್ಲಿ ಕೆಲವನ್ನು ಈ ಮುಂದೆ ಉದಹರಿಸಲಾಗುತ್ತದೆ. ಶ್ರುತಿಗಳು: *(೧) ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ ಅನ್ಯಮನ್ಯಂ ಅತಿನೇನೀಯಮಾನಃ (ಋಗ್ವೇದ); (೨) ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ ನಚೋಭಯಂ ಮನುಷ್ಯಾಣಾಂ। ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋಽಹ್ಯೇಷ ಭವತಿ —(ಶ್ರುತಿ) (೩) ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತಿ ಆಸುರೀಮೇವಚಾಸುರಾಃ ನೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ (ಶ್ರುತಿ).*

ಸ್ಮೃತಿ— *ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ।*
*ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್॥*
*ದೇವಾ ದೇವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್।*
*ಸಮ್ಯಕ್ ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್॥*
*ನಾನಯೋರನ್ಯಥಾ ಭಾವಃ ಕದಾಚಿತ್ ಕ್ವಾಪಿ ವಿದ್ಯತೇ।*
*ಮಾನುಷಾ ಮಿಶ್ರಮತಯಃ ವಿಮಿಶ್ರಗತಯೋಽಪಿ ಚ॥* (ಸ್ಕಾಂದ)

ಇವುಗಳ ಭಾವಾರ್ಥ ಹೀಗಿದೆ:

**ಶ್ರುತಿಗಳು:** (೧) ಸರ್ವಶಕ್ತನೂ ಮಹೈಶ್ವರ್ಯವಂತನೂ ಆದ ಪರಮಾತ್ಮನು ಅಸುರ (ಉಗ್ರ) ಸ್ವಭಾವದ ಪ್ರತಿಯೊಬ್ಬನನ್ನು ಶಿಕ್ಷಿಸಿ, ಅನ್ಯ (ಅಸುರಭಿನ್ನ—ದೇವ-ಸ್ವಭಾವದ) ಪ್ರತಿಯೊಬ್ಬನನ್ನೂ ಸಂಸಾರದಿಂದ ದಾಟಿಸುವನು; (೨) ಅಸುರರಿಗೆ ದೇವಸ್ವರೂಪವೂ, ದೇವತೆಗಳಿಗೆ ಅಸುರ ಸ್ವರೂಪವೂ, ಮನುಷ್ಯರಿಗೆ ಈ ಎರಡರಲ್ಲಿ ಯಾವುದೊಂದೂ ಪ್ರಾಪ್ತವಾಗುವುದಿಲ್ಲ. ಪ್ರತಿಯೊಬ್ಬನೂ ತನ್ನ ಸ್ವಭಾವವನ್ನೇ ಹೊಂದುತ್ತಾನೆ; (೩) ದೇವತೆಗಳು ದೇವ ಸ್ವಭಾವವನ್ನೂ, ಅಸುರರು ಅಸುರ ಸ್ವಭಾವವನ್ನೂ ಹೊಂದುತ್ತಾರೆ; ಈ ನಿಯಮಕ್ಕೆ ಎಂದೂ ಅಪೋಹವಿಲ್ಲ (ವ್ಯತ್ಯಾಸ-ವಾಗುವುದಿಲ್ಲ); ಅವರವರ ಸ್ವಭಾವಗಳೇ ಶಾಶ್ವತವಾಗಿ ನಿಲ್ಲುತ್ತವೆ. ಸ್ಮೃತಿ: ಅಸುರರು ತಾಮಸ ಕರ್ಮಗಳಿಂದಲೂ ಮಿಥ್ಯಾಜ್ಞಾನದಿಂದಲೂ ನಿಶ್ಚಯವಾಗಿ ತಮಸ್ಸನ್ನು ಹೊಂದುತ್ತಾರೆ. ದೇವತೆಗಳು ಸತ್ಕರ್ಮಗಳಿಂದಲೂ, ಸಮೀಚೀನ ಜ್ಞಾನ-ದಿಂದಲೂ ಉತ್ತಮವಾದ ವಿಷ್ಣುಲೋಕವನ್ನು ಹೊಂದುತ್ತಾರೆ. ಈ ನಿಯಮಕ್ಕೆ ಎಂದೂ ಎಲ್ಲಿಯೂ ವ್ಯತಿರೇಕವಿಲ್ಲ (ಮನುಷ್ಯೋತ್ತಮ ಜೀವರು ದೇವ ಸ್ವಭಾವದ ಗುಂಪಿಗೆ ಸೇರಿದವರು); ಮಿಶ್ರಜ್ಞಾನವುಳ್ಳ ಮನುಷ್ಯರು (ಮನುಷ್ಯ ಮಧ್ಯಮರು) ಸುಖದುಃಖಮಿಶ್ರವಾದ ಗತಿಯನ್ನೇ ಹೊಂದುತ್ತಾರೆ. ಜೀವ ಸ್ವಭಾವಗಳು ಹೀಗಿರು-ವುದರಿಂದ ದೇವಸ್ವಭಾವದ ಮುಕ್ತಿಯೋಗ್ಯ ಜೀವರೇ ಜ್ಞಾನಯೋಗ್ಯರೆಂದು ಸಿದ್ಧ-

ವಾಗುತ್ತದೆ. *'ಓಂ ಸರ್ವಥಾಪಿ ತು ತ ಏವೋಭಯಲಿಂಗಾತ್ ಓಂ'* ಎಂಬ ಸೂತ್ರದಿಂದ ಆರಂಭವಾಗುವ ಉಭಯ ಲಿಂಗಾಧಿಕರಣದಲ್ಲಿ ಜ್ಞಾನಯೋಗ್ಯರಿಗೇ ಭಗವದಪರೋಕ್ಷವೆಂದು ಯುಕ್ತಿಯುಕ್ತವಾಗಿ ನಿರ್ಣಯಿಸಿ ನಿರೂಪಿಸಲಾಗಿದೆ.

(೨) ದುರ್ಮತಗಳ ಪ್ರಸಾರದಿಂದ ಅಜ್ಞಾನರೂಪದ ಅಂಧಕಾರವು ಸರ್ವತ್ರ ವ್ಯಾಪಿಸಿತು. ತತ್ವಜ್ಞಾನಾರ್ಥಿಗಳಾದ ಸಜ್ಜನರು ವ್ಯಾಕುಲಚಿತ್ತರಾದರು. ಕೃಪಾಳು-ಗಳಾದ ಚತುರ್ಮುಖಾದಿ ದೇವತೆಗಳು ಸಜ್ಜನರ ವ್ಯಥೆಯನ್ನು ಪರಿಹರಿಸಲು ಶ್ರೀಹರಿ-ಯನ್ನು ಪ್ರಾರ್ಥಿಸಿದರು. *'ವೇದಾಂತ ಮಾರ್ಗ ಪರಿಮಾರ್ಗಣ ದೀನದೂನಾ ದೈವೀಃ ಪ್ರಜಾಃ ವಿಶರಣಾಃ ಕರುಣಾಪದಂ ನಃ। ಆನಂದಯೇಃ ಸುಮುಖಭೂಷಿತ ಭೂಮಿಭಾಗೋ ರೂಪಾಂತರೇಣ ಮಮ ಸದ್ಗುಣ ನಿರ್ಣಯೇನ॥"* (ಸುಮಧ್ವ-ವಿಜಯ) 'ಹೇ ಸುಮುಖ! ಪ್ರಿಯದರ್ಶನ! ವಾಯುದೇವ!' ತತ್ವಜ್ಞಾನದ ಮಾರ್ಗ ವನ್ನು ಕಾಣದೇ ದುಃಖಿತರಾಗಿರುವ ದೇವಸ್ವಭಾವದ ಜನರು, ಆಶ್ರಯರ್ರಹಿತರಾಗಿ ನಮ್ಮ ಕೃಪೆಗೆ ಪಾತ್ರರಾಗಿರುವರು; ನೀನು ಅವತರಿಸಿ, ಭೂಮಿಯನ್ನು ಅಲಂಕರಿಸಿ, ನನ್ನನ್ನು ನಿರಾಕಾರ ನಿರ್ಗುಣನೆಂದು ಮೊದಲಾಗಿ ವಾದಿಸುವ ದುರ್ಮತಗಳನ್ನು ಖಂಡಿಸಿ, ನನ್ನ ಸ್ವಾತಂತ್ರ್ಯಾದಿ ಸಕಲ ಸದ್ಗುಣಗಳನ್ನು ನಿರ್ಣಯಿಸಿ, ನಿರೂಪಿಸಿ ಅವರನ್ನು ಅನುಗ್ರಸು, ಎಂದು ಶ್ರೀಹರಿಯು ಆಜ್ಞಾಪಿಸಿದನು. ಸ್ವಯಂ ಕಲಿಯಿಂದ ಅಭಿಮನ್ಯವಾದ ಅಜ್ಞಾನಾಂಧಕಾರವನ್ನು, ಶ್ರೀವಾಯುದೇವರಲ್ಲದೇ ಬೇರಾರು ಪರಿಹರಿಸಲು ಸಮರ್ಥರಾಗುವರು! *'ಆದೇಶ ಮೌಳಿಮಣಿಮುಜ್ಜ್ವಲ ವರ್ಣ-ಮೇನಂ ಬದ್ಧಾಂಜಲಿರ್ಮರುದನರ್ಘ್ಯಮಧತ್ತ ಮೂರ್ಧ್ನಾ। ಹಾರಾವಲೀಮಿವ ಹೃದಾ ವಿಬುಧೇಂದ್ರಯಾ(ಜ್ಞಾಂ)ಚ್ಞಾಂ ಬಿಭ್ರನ್ನಿಜಾನನುಜಿಘೃಕ್ಷುರವಾತಿತೀರ್ಷತ್॥'* 'ಶ್ರೀಹರಿಯ ಆಜ್ಞೆಯನ್ನು, ಉಜ್ವಲ ಶಿರೋರತ್ನದಂತೆ ಶಿರಸ್ಸಿನಲ್ಲಿ ಹೊತ್ತು, ಅಂಜಲಿ-ಬದ್ಧನಾಗಿ ನಿಂತನು; ದೇವಶ್ರೇಷ್ಠರು (ರುದ್ರಾದಿಗಳು) ಶೀಘ್ರವಾಗಿ ಸಜ್ಜನರನ್ನು ಅನುಗ್ರಸಲು ಪ್ರಾರ್ಥಿಸಿದರು; ಅದನ್ನು ಹಾರದಂತೆ ಎದೆಯಲ್ಲಿ ಧರಿಸಿ, (ಅವತಾರಕ್ಕೆ ಯೋಗ್ಯ ಸ್ಥಾನವನ್ನು ನಿರ್ಧರಿಸಿ) ಅವತರಿಸಿದನು. ಶ್ರೀಮದ್ವವಿಜಯ-ದಲ್ಲಿ ಹೇಳಲಾದ ಈ ವಿಷಯಗಳನ್ನೇ ಅಲ್ಪಶಬ್ದಗಳಿಂದ ನಿರೂಪಿಸಿಸುವ ಬಗೆಯನ್ನು ಗಮನಿಸಬೇಕು. ಶ್ರೀವಾಯುದೇವರು ತಮ್ಮ ಅವತಾರಕ್ಕಾಗಿ ಆರಿಸಿಕೊಂಡದ್ದು ಪವಿತ್ರ ಕರ್ಮಭೂಮಿಯಾದ ಭರತಖಂಡವನ್ನೇ. ಈ ಶುಭನಾಮವುಳ್ಳ ಕರ್ಮಭೂಮಿಯಲ್ಲಿ ನಶ್ವರ ಮಾನುಷದೇಹದಿಂದ ಕ್ಷಣಕಾಲದಲ್ಲಿ ಮಾಡಬಹುದಾದ ಕರ್ಮವನ್ನು ಭಗವದರ್ಪಣ ಮಾಡಿದವರು ಪುನರಾವೃತ್ತಿರಹಿತನಾದ ನಾರಾಯಣನ ಲೋಕ-ವನ್ನೇ ಹೊಂದುತ್ತಾರೆ. ಭರತಖಂಡದಲ್ಲಿ ಹುಟ್ಟಿ ಅಲ್ಪಕಾಲ ಜೀವಿಸುವುದು ಸಹ,

ಕಲ್ಪಪರ್ಯಂತ ದೀರ್ಘಕಾಲ ಜೀವಿಸಿರಬಹುದಾದ ಅನ್ಯಲೋಕ ವಾಸಕ್ಕಿಂತ ಶ್ರೇಷ್ಠ-ವೆಂದು, ಭಾಗವತವು ಭರತಖಂಡವನ್ನು ಸ್ತುತಿಸುತ್ತದೆ. ಶ್ರೀವಾಯುದೇವರು, *'ಸದ್ವೀಪವಾರಿನಿಧಿ ಸಪ್ತಕ ಭೂತಧಾತ್ರ್ಯಾ ಮಧ್ಯೇಪಿ ಕರ್ಮಭುವಿ ಭಾರತನಾಮ-ಖಂಡೇ'* (ಮಧ್ವವಿಜಯ)—ಸಪ್ತದ್ವೀಪ ಸಪ್ತ ಸಮುದ್ರಗಳಿಂದ ಸ್ತವಾದ ಭೂ-ಮಂಡಲದ ಮಧ್ಯದಲ್ಲಿರುವ ಭರತಖಂಡವೆಂಬ ಕರ್ಮಭೂಮಿಯಲ್ಲಿ (ಸತ್ಕುಲ ಪ್ರಸೂತರಾದ ಮಧ್ಯಗೇಹಭಟ್ಟರೆಂಬ ಬ್ರಾಹ್ಮಣಶ್ರೇಷ್ಠನಿಂದ ಅವರ ಪತ್ನಿಯಲ್ಲಿ) ಉದಯಿಸಿದರೆಂದು ಉಕ್ತವಾಗಿದೆ. ಯಾವ ಭೂಭಾಗದಲ್ಲಿ ಮನುಷ್ಯರಿಂದ ಮಾಡಲ್ಪಟ್ಟ ಶುಭಾಶುಭ ಕರ್ಮಗಳು ಸ್ವರ್ಗ ನರಕ ಪ್ರಾಪ್ತಿಗೆ ಕಾರಣವಾಗುವ ಅದೃಷ್ಟವನ್ನು ಉತ್ಪಾದಿಸುವುವೋ ಆ ಪ್ರದೇಶವು ಕರ್ಮಭೂಮಿಯೆನಿಸುತ್ತದೆ. *'ಯತ್ರ ಕೃತಾನಿ ಶುಭಾಶುಭ ಕರ್ಮಾಣಿ ಸ್ವರ್ಗ ನರಕ ಸಾಧನಾನಿ ಭವಂತಿ ಸಾ ಕರ್ಮ ಭೂಮಿಃ'* ಎಂದು ಕರ್ಮಭೂಮಿ ಶಬ್ದಾರ್ಥ ವಿವರಣೆಯಿದೆ. ಭರತಖಂಡವೇ ಕರ್ಮ-☐ ಭೂಮಿಯು. ಅನ್ಯ ಭೂಭಾಗಗಳು ಮತ್ತು ಲೋಕಗಳು ಭೋಗ ಸ್ಥಾನಗಳು. ಇಲ್ಲಿ ಮಾಡಿದ ಕರ್ಮಗಳ ಸುಖ-ದುಃಖರೂಪ ಫಲಗಳನ್ನು ಭೋಗಿಸಲು ಜನ್ಮತಾಳುವ ಪ್ರದೇಶಗಳು. ಸ್ವರ್ಗನರಕಗಳು ವಿಶೇಷ ಸುಖ-ದುಃಖ ಭೋಗ ಸ್ಥಾನಗಳು. ಉತ್ಕಟ ಪುಣ್ಯಾಪಾಪ (ಕರ್ಮ)ಗಳಿಂದ ಇಲ್ಲಿಯೇ (ಭರತಭೂಮಿಯಲ್ಲಿ ನರದೇಹದಿಂದ) ಆ ಕರ್ಮಫಲಗಳನ್ನು ಅನುಭವಿಸಿ, ಪೂರ್ಣಾನುಭವಕ್ಕಾಗಿ ಸ್ವರ್ಗನರಕಗಳನ್ನು (ದೇಹಾಂತರದಿಂದ) ಸೇರುವುದೂ ಉಂಟು. ತುಚ್ಛವಾದ ಅಲ್ಪ ಪುಣ್ಯಾಪಾಪಗಳ ಫಲಾನುಭವಕ್ಕೆ ಸಹ ಸ್ವರ್ಗನರಕಗಳಿಗೆ ಹೋಗಬೇಕಾದ್ದಿಲ್ಲ.

ದೇಶಕಾಲಗಳ ನಿಯಾಮಕನಾದ ಶ್ರೀಹರಿಯು ಸ್ವತಂತ್ರ ಪ್ರಭು; ನಿರ್ದಿಷ್ಟ ದೇಶ ಕಾಲಗಳಿಗೆ ವಿಶಿಷ್ಟ ಫಲ ಪ್ರಾಪಕತ್ವಾದಿ ವಿಶೇಷ ಮಹಿಮೆಗಳನ್ನು ನೀಡುತ್ತಾನೆ. ಇಲ್ಲಿ ಮಾಡುವ ಶ್ರುತಿ ಸ್ಮೃತ್ಯುಕ್ತ ಕರ್ಮಗಳಿಗೆ ಪುಣ್ಯಾಪಾಪ ರೂಪದ ಫಲಗಳನ್ನು ಕೊಡುವೆನೆಂದು ಸಂಕಲ್ಪಿಸಿ ತನ್ನ ಆಜ್ಞಾರೂಪದ ಶಾಸ್ತ್ರಗಳಲ್ಲಿ ಪ್ರಕಟಿಸಿರುವ ಭೂ-ಭಾಗವೇ ಕರ್ಮಭೂಮಿಯು. ಅದೇ ಭರತಖಂಡವು. ಅನ್ಯತ್ರ ಭೋಗಭೂಮಿ-ಗಳಲ್ಲಿ ಹಿಂದಿನ ಫಲಗಳನ್ನು ಭೋಗಿಸುತ್ತಿರುವ ದೇಹಗಳಲ್ಲಿ ಮಾಡುವ ಕರ್ಮ-ಗಳಿಂದ ಪುಣ್ಯಾಪಾಪಗಳು ಉದ್ಭವಿಸುವುದಿಲ್ಲ. ತಾತ್ಕಾಲಿಕ ಐಹಿಕ ಫಲಗಳು ಮಾತ್ರ ಲಭಿಸುತ್ತವೆ. ಕೃತಾದಿಯುಗಗಳ ಮಧ್ಯದಲ್ಲಿ, ಮೋಕ್ಷಸಾಧನ ದೃಷ್ಟಿಯಿಂದ, ಅಲ್ಪ ಕರ್ಮಗಳಿಗೆ ಮಹತ್ಫಲವನ್ನು ಸಾಧಿಸಲು ಅವಕಾಶವಿರುವ ಕಲಿಯುಗವೂ, ವಿವಿಧ ದೇಹಗಳ ಮಧ್ಯದಲ್ಲಿ ಮನುಷ್ಯದೇಹವೂ ಶ್ರೇಷ್ಠವಾಗಿರುವಂತೆ, ಭೂಭಾಗಗಳಲ್ಲಿ ಕರ್ಮಭೂಮಿಯಾದ ಭರತಖಂಡವೂ ಶ್ರೇಷ್ಠವು. ಅಂತೆಯೇ ಕರ್ಮಭೂಮಿಯೇ ಪುಣ್ಯಭೂಮಿಯು *'ಕಲ್ಪಾಯುಷಾಂ ಸ್ಥಾನಜಯಾತ್ ಪುನರ್ಭವಾತ್ ಕ್ಷಣಾಯುಷಾಂ*

*ಭಾರತ ಭೂಜಯೋಃ ವರಃ। ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ ಸಂನ್ಯಸ್ಯ ಸಂಯಾಂತ್ಯಭಯಂ ಪದಂ ಹರೇಃ॥'* ಎಂದು ಭಾಗವತವು ಭರತಖಂಡವನ್ನು ಪ್ರಶಂಸಿಸುತ್ತದೆ.

೪. ತಥಾ ಅವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ, ಸರ್ವದುರ್ಮತ-ಭಂಜಕಾನಾಂ, ಅನಾದಿತಃ ಸತ್ಸಂಪ್ರದಾಯ ಪರಂಪರಾಪ್ರಾಪ್ತ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪಕಾನಾಂ.....

ಪ್ರತಿಪದಾರ್ಥ: ತಥಾ ಅವತೀರ್ಯ—ಹಾಗೆ ಅವತರಿಸಿ, ಸಕಲಸಚ್ಛಾಸ್ತ್ರಕರ್ತೄಣಾಂ ,ಸಮಸ್ತ ಸಚ್ಛಾಸ್ತ್ರಗಳನ್ನು ರಚಿಸಿದ, ಸಕಲ ದುರ್ಮತ ಭಂಜಕಾನಾಂ—(ಮತ್ತು) ಸಕಲ ದುರ್ಮತಗಳನ್ನು ಖಂಡಿಸಿದ, ಅನಾದಿತಃ—ಅನಾದಿಕಾಲದಿಂದ, ಸತ್ಸಂಪ್ರದಾಯ ಪರಂಪರಾ ಪ್ರಾಪ್ತ—ಶುಭ ಸಂಪ್ರದಾಯ ಪರಂಪರೆಯಿಂದ ಪ್ರಾಪ್ತವಾದ, ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪಕಾನಾಂ—ಶ್ರೀವಿಷ್ಣುವೇ ಸರ್ವೋತ್ತಮನೆಂಬ ಸತ್ಸಿದ್ಧಾಂತವನ್ನು ಸ್ಥಾಪಿಸಿದ, (ಶ್ರೀಮದಾನಂದತೀರ್ಥರ);

ತಾತ್ಪರ್ಯ: ಶ್ರೀವಾಯುದೇವರು ನಮ್ಮ ಈ ಭರತಖಂಡದಲ್ಲಿ ಅವತರಿಸಿ ಎಲ್ಲ ದುರ್ಮತಗಳನ್ನು ಖಂಡಿಸಿ, 'ಸರ್ವಮೂಲ'ವೆಂದು ಪ್ರಸಿದ್ಧವಿರುವ ೩೭ ಸಚ್ಛಾಸ್ತ್ರ-ಗ್ರಂಥಗಳನ್ನು ರಚಿಸಿ, ಅನಾದಿ ಪರಂಪರೆಯಿಂದ ಪ್ರಾಪ್ತವಾದ, ಅತ ಏವ ಪರಮಪ್ರಮಾಣಭೂತಗಳಾದ, ಶ್ರೀವಿಷ್ಣುಸರ್ವೋತ್ತಮತ್ವಾದಿ ಸದ್ವೈಷ್ಣವ ಸಿದ್ಧಾಂತ-ಗಳನ್ನು ಸ್ಥಾಪಿಸಿ ಅನುಗ್ರಸಿದರು; ಶ್ರೀವಾಯುದೇವರ ಅವತಾರರಾದ ಇವರೇ ಶ್ರೀಮದಾನಂದತೀರ್ಥರು.

ಪ್ರಮೇಯ ವಿವರಣೆ: (೧) ಶ್ರೀಮನ್ಮದಾಚಾರ್ಯರಿಂದ ರಚಿತವಾದ ಮೂಲ ೩೭ ಸಚ್ಛಾಸ್ತ್ರಗ್ರಂಥಗಳು 'ಸರ್ವಮೂಲ'ವೆಂದು ಪ್ರಸಿದ್ಧವಾಗಿವೆ ಅವು ಯಾವು-ವೆಂದರೆ: (೧) ಗೀತಾಭಾಷ್ಯ (೨) ಗೀತಾತಾತ್ಪರ್ಯ (೩) ಸೂತ್ರಭಾಷ್ಯ (೪) ಅಣುಭಾಷ್ಯ (೫) ಅನುವ್ಯಾಖ್ಯಾನ (೬) ಪ್ರಮಾಣಲಕ್ಷಣ (೭) ಕಥಾಲಕ್ಷಣ (೮) ಉಪಾಧಿಖಂಡನ (೯) ಮಾಯಾವಾದಖಂಡನ (೧೦) ಪ್ರಪಂಚ ಮಿಥ್ಯಾತ್ವಾನು-ಮಾನ ಖಂಡನ (೧೧) ತತ್ವಸಂಖ್ಯಾನ (೧೨) ತತ್ವವಿವೇಕ (೧೩) ತತ್ವೋದ್ಯೋತ (೧೪) ಕರ್ಮನಿರ್ಣಯ (೧೫) ವಿಷ್ಣುತತ್ವನಿರ್ಣಯ (೧೬) ಋಗ್ಭಾಷ್ಯ (೧೭) ಉಪನಿಷದ್ಭಾಷ್ಯಗಳು: ಐತರೇಯ (೧೮) ಈಶಾವಾಸ್ಯ (೧೯) ಬೃಹದಾರಣ್ಯ (೨೦) ಕಾಠಕ (೨೧) ತೈತ್ತಿರೀಯ (೨೨) ಛಾಂದೋಗ್ಯ (೨೩) ತಲವಕಾರ (೨೪) ಷಟ್ಪ್ರಶ್ನ (೨೫) ಮಾಂಡೂಕ (೨೬) ಆಥರ್ವಣ (೨೭) ನ್ಯಾಯವಿವರಣ (೨೮) ಮಹಾಭಾರತ ತಾತ್ಪರ್ಯ ನಿರ್ಣಯ (೨೯) ಭಾಗವತ ತಾತ್ಪರ್ಯ ನಿರ್ಣಯ (೩೦) ಯಮಕ

ಭಾರತ (೩೧) ದ್ವಾದಶಸ್ತೋತ್ರ (೩೨) ಕೃಷ್ಣಾಮೃತ ಮಹಾರ್ಣವ (೩೩) ತಂತ್ರಸಾರ (೩೪) ನರಸಿಂಹ ನಖಸ್ತುತಿ (೩೫) ಸದಾಚಾರ ಸ್ಮೃತಿ (೩೬) ಯತಿಪ್ರಣವಕಲ್ಪ ಮತ್ತು (೩೭) ಜಯಂತೀ ನಿರ್ಣಯ.

(೨) ಮತಸ್ಥಾಪಕರೆಂಬ ಪ್ರತಿಯೊಬ್ಬರೂ ಶ್ರೀ ಬಾದರಾಯಣರಿಂದ ರಚಿತವಾದ ವೇದಾರ್ಥ ನಿರ್ಣಾಯಕ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿ ತಮ್ಮ ಸಿದ್ಧಾಂತವನ್ನು ಸ್ಥಾಪಿಸಿರುವೆವೆನ್ನುತ್ತಾರೆ. ಶ್ರೀಮನ್ಮಧ್ವಾಚಾರ್ಯರ ಕಾಲಕ್ಕೆ ಮುಂದೆ, ಬ್ರಹ್ಮಸೂತ್ರಗಳಿಗೆ ೨೧ ಭಾಷ್ಯಗಳು ರಚಿತವಾಗಿದ್ದವು. ವಿಶೇಷವಾಗಿ ಅವರು ಅವತರಿಸಿದ ಕಾಲದಲ್ಲಿ ಪ್ರಚಾರದಲ್ಲಿದ್ದುದು ೨೧ನೆಯದಾದ ಸಂಕರಭಾಷ್ಯ. ಇವೆಲ್ಲವನ್ನೂ ತಮ್ಮ ಭಾಷ್ಯಾದಿ ಗ್ರಂಥಗಳಿಂದ ಖಂಡಿಸಿ ಶ್ರೀಮದಾಚಾರ್ಯರು ಶ್ರೀಬಾದರಾಯಣರಿಗೆ ಸಮ್ಮತವಾದ ನಿರ್ಣಯಗಳನ್ನು ನಿರೂಪಿಸಿರುವರು. ಇವರಿಂದ ರಚಿತವಾದ ಸೂತ್ರಭಾಷ್ಯವು ೨೨ನೆಯದು. ಇದನ್ನು ಸಾಕ್ಷಾತ್ತಾಗಿ ಶ್ರೀಬಾದರಾಯಣರಿದ್ದ ಮೇಲಿನಬದರಿಗೆ (ಎಂದರೆ ಮನುಷ್ಯರಿಗೆ ಅಗಮ್ಯವಾದ, ಈಗ ಎಲ್ಲರೂ ಹೋಗಿ ಬರುವ ಚಿಕ್ಕ ಬದರಿಯಿಂದ ಭಿನ್ನವಾದ ಬದರಿಕಾಶ್ರಮಕ್ಕೆ) ಹೋಗಿ ಅವರಿಗೆ ಸಮರ್ಪಿಸಿ, 'ನಿನ್ನ ಆಜ್ಞೆಯನ್ನು ಪಾಲಿಸಿರುವೆನು, ಪ್ರೀತನಾಗು, ಪ್ರಭೋ!' ಎಂದರು. ಮುಂದಿನ ಪ್ರತಿಯೊಂದು ಭಾಷ್ಯವನ್ನು ಅವಲಂಬಿಸಿ ಒಂದೊಂದು ಮತವು ಪ್ರವೃತ್ತವಾಗಿದ್ದಿತು. ಆ ೨೧ ದುರ್ಮತಗಳ ಮೂಲವಾದ ದುರ್ಭಾಷ್ಯಗಳು (ಸೂತ್ರಕರ್ತರಾದ ಶ್ರೀವೇದವ್ಯಾಸರಿಗೆ ಸರ್ವಥಾ ಅಸಮ್ಮತವಾದವುಗಳು) ಯಾವುವೆಂದರೆ: (೧) ಭಾರತೀ ವಿಜಯ (೨) ಸಂವಿದಾನಂದ (೩) ಬ್ರಹ್ಮಘೋಷ (೪) ಶತಾನಂದ (೫) ಉದ್ವವ (೬) ವಿಜಯ (೭) ರುದ್ರಭಟ್ಟ (೮) ವಾಮನ (೯) ಯಾದವ ಪ್ರಕಾಶನ (೧೦) ರಾಮಾನುಜ (೧೧) ಭರ್ತೃ ಪ್ರಪಂಚ (೧೨) ದ್ರವಿಡ (೧೩) ಬ್ರಹ್ಮದತ್ತ (೧೪) ಭಾಸ್ಕರ (೧೫) ಪಿಶಾಚ (೧೬) ವೃತ್ತಿಕಾರಕ (೧೭) ವಿಜಯಭಟ್ಟ (೧೮) ವಿಷ್ಣುಕ್ರಾಂತ (೧೯) ವಾದೀಂದ್ರ (೨೦) ಮಾಧವದಾಸ (೨೧) ಸಂಕರ.

(೩) ವೈಷ್ಣವ ಸಿದ್ಧಾಂತವು ಅನಾದಿ ಪ್ರಾಪ್ತವಾದುದು. ಸಾಕ್ಷಾತ್ ಶ್ರೀಹರಿಯಿಂದ ತತ್ತ್ವೋಪದೇಶವನ್ನು ಆದಿಯಲ್ಲಿ ಪಡೆದವನು ಚತುರ್ಮುಖ ಬ್ರಹ್ಮನು. ಸೃಷ್ಟಿಕರ್ತನೂ ಸಕಲ ಜಗತ್ತಿನ ಪಿತಾಮಹನೂ ಆದ ಬ್ರಹ್ಮನಿಂದ ಪ್ರಾಪ್ತವಾದ ಪರಂಪರೆಯುಳ್ಳ ಸಿದ್ಧಾಂತವೇ ಅನಾದಿಮೂಲವುಳ್ಳದ್ದು. ಪ್ರಮಾಣತ್ವೇನ ಸರ್ವಗ್ರಾಹ್ಯವು. '*ವಂಶಸ್ಯಾದೀನ್ ಸನಕಾದೀನ್ ವಂದೇ...*' ಇತ್ಯಾದಿ ಪ್ರಮಾಣವಾಕ್ಯಗಳಲ್ಲಿ, ಪರಂಪರೆಯಲ್ಲಿ ಬಂದ ಅಚ್ಯುತಪ್ರೇಕ್ಷರೆಂಬ ಯತಿಗಳಿಂದ ಶ್ರೀಮನ್ಮಧ್ವಾಚಾರ್ಯರು ಯತ್ಯಾಶ್ರಮವನ್ನು ಸ್ವೀಕರಿಸಿ, ಅಚ್ಯುತಪ್ರೇಕ್ಷರಿಗೆ ಪರಂಪರೆಯಿಂದ ಉಪದಿಷ್ಟವಾಗಿದ್ದ ತತ್ತ್ವವನ್ನೇ ಸ್ಥಿರಪಡಿಸಿ, ತತ್ಸಂಬಂಧವಾದ ಅವರ ಸಂಶಯಗಳನ್ನೆಲ್ಲಾ ಪರಿಹರಿಸಿ, ಆ ತತ್ತ್ವಗಳಿಗೆ

ವಿರುದ್ಧವಾದ ವಾದಗಳನ್ನು ಖಂಡಿಸಿ, ನಿರ್ಭಯರಾಗಿ ವೈಷ್ಣವ ಸಿದ್ಧಾಂತಗಳನ್ನು ಸ್ಥಾಪಿಸಿದರು. ಬ್ರಹ್ಮದೇವನಿಂದ ಶ್ರೀಮಧ್ವಾಚಾರ್ಯರವರೆಗಿನ ಪರಂಪರೆಯ ವಿವರ-ವನ್ನು ಶ್ರೀ ನಾರಾಯಣಪಂಡಿತಾಚಾರ್ಯ ವಿರಚಿತ 'ಮಣಿಮಂಜರೀ' ಗ್ರಂಥದಿಂದ ತಿಳಿಯಬಹುದು. ಶ್ರೀಕೃಷ್ಣನು ಗೀತೆಯಲ್ಲಿ ಉಪದೇಶ ಮಾಡಿರುವುದೂ ಈ ವೈಷ್ಣವ ಸಿದ್ಧಾಂತವನ್ನೇ. ಉಪದಿಷ್ಟ ತತ್ತ್ವಜ್ಞಾನದ ಪರಂಪರೆಯ ಮಹತ್ವವನ್ನು ನಿರೂಪಿಸುತ್ತ, ಸಿದ್ಧಾಂತದ ಪ್ರಾಮಾಣ್ಯಕ್ಕೆ ಪರಂಪರೆಯ ಮುಖ್ಯಹೇತುವೆಂಬುದನ್ನು ತಿಳಿಸಿ, ತನ್ನ ಉಪದೇಶಕ್ಕೆ ಭಿನ್ನ ಪ್ರಕಾರದ ಮತ್ತೊಂದು ಪರಂಪರೆಯನ್ನು ತೋರಿಸಿದ್ದಾನೆ. '*ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ। ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್। ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ। ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ॥ ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ। ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್॥*' (ಗೀತಾ) ಶ್ರೀಕೃಷ್ಣನು ಹೇಳುತ್ತಾನೆ; "ಪರಮಾತ್ಮನ ಪ್ರಾಪ್ತಿಗೆ ಪ್ರಧಾನ ಸಾಧನವಾದ ನಿವೃತ್ತಕರ್ಮ ಲಕ್ಷಣದ, ಯೋಗವೆಂದು ಕರೆಯಲ್ಪಡುವ ಜ್ಞಾನೋಪಾಯವನ್ನು, ನಾನು ಮೊದಲಿಗೆ ಸೂರ್ಯನಿಗೆ ಉಪದೇಶಿಸಿದೆನು; ಸೂರ್ಯನು ತನ್ನ ಮಗನಾದ (ಶ್ರಾದ್ಧದೇವ) ಮನುವಿಗೆ ಆ ಯೋಗವನ್ನು ಉಪದೇಶಿಸಿದನು; ಮನುವು (ತನ್ನ ಮಗ) ಇಕ್ಷ್ವಾಕುವಿಗೆ ಉಪದೇಶಿಸಿದನು; ಇಕ್ಷ್ವಾಕುವಿನಿಂದ ಪರಂಪರೆಯಿಂದ ಈ ಜ್ಞಾನವು ರಾಜರ್ಷಿಗಳಿಗೆ ಪ್ರಾಪ್ತವಾಯಿತು; ಮಹತ್ತರವಾದ ಕಾಲವು ಗತಿಸಿ, ಈ ಯೋಗಜ್ಞಾನವು ನಷ್ಟವಾಯಿತು; ನೀನು ನನ್ನ ಭಕ್ತನೂ ಸಖನೂ ಆಗಿರುವುದರಿಂದ, ಅನಾದಿಯಾದ ಈ ರಹಸ್ಯವನ್ನೇ ಆದರದಿಂದ ಉಪದೇಶಿಸಿರುವೆನು." ಗೀತೋಪದೇಶವೇ ವೈಷ್ಣವ ಸಿದ್ಧಾಂತವೆಂಬು-ದನ್ನು ಶ್ರೀಮದಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ ಪ್ರತಿಪಾದಿಸಿದ್ದಾರೆ. ವೈಷ್ಣವ ಸಿದ್ಧಾಂತ ತತ್ತ್ವಗಳನ್ನು ಸಂಗ್ರಹಿಸಿ ಶ್ರೀವ್ಯಾಸತೀರ್ಥರು ಪ್ರಸಿದ್ಧವಾದ ಈ ಮುಂದಿನ ಶ್ಲೋಕದಲ್ಲಿ ನಿರೂಪಿಸಿರುವರು.

*ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ*
*ಭಿನ್ನಾ ಜೀವಗಣಾಃ ಹರೇರನುಚರಾ ನೀಚೋಚ್ಚಭಾವಂ ಗತಾಃ।*
*ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ*
*ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ॥*

ಇದರ ಭಾವಾರ್ಥ: (೧) ಶ್ರೀಹರಿಯೇ ಸರ್ವೋತ್ತಮನು (೨) ಜಗತ್ತು ಸತ್ಯ (೩) ಜೀವಗಣಗಳು (ಶ್ರೀಹರಿಯಿಂದ ಮತ್ತು ಪರಸ್ಪರ) ಭಿನ್ನವಾದವುಗಳು (೪) ಮತ್ತು ವಿಷ್ಣುವಿನ ಭೃತ್ಯರು (ಹರಿಯ ಅನುಚರರು) (೫) ಜೀವರಲ್ಲಿ ಪರಸ್ಪರ ತಾರತಮ್ಯವಿದೆ

(೬) ಸ್ವಸ್ವರೂಪಾನಂದದ ಆವಿರ್ಭಾವವೇ ಮುಕ್ತಿಯು (೭) ಶುದ್ಧವಾದ ಭಕ್ತಿಯೇ ಮುಕ್ತಿಗೆ ಕಾರಣವು (೮) ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂದು ಪ್ರಮಾಣಗಳು ಮೂರೇ (೯) ಶ್ರೀಹರಿಯೇ ಸರ್ವವೇದ ಮುಖ್ಯ ಪ್ರತಿಪಾದ್ಯನು (ವೇದೈಕಗಮ್ಯನು ವೇದಗಳಿಂದಲೇ ತಿಳಿಯಲ್ಪಡತಕ್ಕವನು). ಈ (೯) ನವ ಪ್ರಮೇಯಗಳು ವೈಷ್ಣವ ಸಿದ್ಧಾಂತದ ನವರತ್ನಗಳಂತಿವೆ.

೫. ಅತ ಏವ ಭಗವತ್ಪರಮಾನುಗ್ರಹಪಾತ್ರಭೂತಾನಾಂ, ಸರ್ವದಾ ಭಗವದಾಜ್ಞಯಾ ಭಗವತ್ಸನ್ನಿಧೌ ಪೂಜ್ಯಾನಾಂ, ತಥಾ ಭಗವತಾ ದತ್ತವರಾಣಾಂ.....

ಪ್ರತಿಪದಾರ್ಥ: ಅತ ಏವ–ಹೀಗೆ ಭಗವದಾಜ್ಞೆಯನ್ನು ಅತ್ಯಂತ ಸಮರ್ಪಕವಾಗಿ ನೆರವೇರಿಸಿದ್ದರಿಂದ, ಭಗವತ್ಪರಮಾನುಗ್ರಹಪಾತ್ರಭೂತಾನಾಂ—ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರರಾದ, ಸರ್ವದಾ—ಎಲ್ಲ ಕಾಲದಲ್ಲಿ, ಭಗವದಾಜ್ಞಯಾ—ಭಗವಂತನ ಆಜ್ಞೆಯಿಂದ, ಭಗವತ್ಸನ್ನಿಧೌ—ಭಗವಂತನ ಸಮ್ಮುಖದಲ್ಲಿ, ಪೂಜ್ಯಾನಾಂ—(ಭಕ್ತರಿಂದ) ಪೂಜಿಸಲ್ಪಡುವ, ತಥಾ—ಹಾಗೆ, ಭಗವತಾ—ಶ್ರೀಹರಿಯಿಂದ, ದತ್ತವರಾಣಾಂ—ಕೊಡಲ್ಪಟ್ಟ ವರವುಳ್ಳವರಾದ (ಶ್ರೀಮದಾನಂದತೀರ್ಥರ)

ತಾತ್ಪರ್ಯ: ದುರ್ಮತಗಳನ್ನು ಖಂಡಿಸಿ ವೈಷ್ಣವಮತ ಪ್ರತಿಷ್ಠಾಪಕ ಭಾಷ್ಯಾದಿ ಗ್ರಂಥಗಳನ್ನು ರಚಿಸಿ ಶ್ರೀಹರಿಗೆ ಸಮರ್ಪಿಸಿದ್ದರಿಂದ ಪ್ರಸನ್ನನಾದವನಂತೆ ಶ್ರೀಹರಿಯು (ವಾಯುದೇವರ ಮೇಲೆ ಸದಾ ಪ್ರಸನ್ನನೇ ಆಗಿರುವನು) ತನ್ನ ಪೂಜಾದಿ ಕಾಲದಲ್ಲಿ, ತನ್ನ ಸಮ್ಮುಖದಲ್ಲಿ ಶ್ರೀವಾಯುದೇವರೂ ಪೂಜಿಸಲ್ಪಡುವಂತೆ ವರವಿತ್ತು ಅನುಗ್ರಸಿದನು. ಆದ್ದರಿಂದ ರಮಾನಾರಾಯಣರ ಪೂಜೆಯಾದೊಡನೆ ಶ್ರೀಮುಖ್ಯಪ್ರಾಣನ ಪೂಜೆಯನ್ನೂ ಮಾಡಲೇಬೇಕು; ಇಲ್ಲದಿದ್ದರೆ ಶ್ರೀಹರಿ ಪೂಜೆಯೇ ಅಸಂಪೂರ್ಣವಾಗುತ್ತದೆ. ಶ್ರೀಹರಿಯು ಪ್ರೀತನಾಗುವುದಿಲ್ಲ.

ಪ್ರಮೇಯ ವಿವರಣೆ: (೧) ಶ್ರೀವಾಯುದೇವರ ವೇದಪ್ರಸಿದ್ಧ ಅವತಾರಗಳು ಮೂರು; ಹನುಮ, ಭೀಮ, ಮಧ್ವ ನಾಮಕವಾದವುಗಳೇ ಆ ಮೂರು. ಶ್ರೀಹರಿಯು ಸರ್ವದಾ ಶ್ರೀವಾಯುದೇವರ ಮೇಲೆ ಪ್ರಸನ್ನನಾಗಿರುವನೆಂಬುದೂ, ಅವರು ಸರ್ವದಾ ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರರೆಂಬುದೂ, ಈ ಮೂರು ಅವತಾರ ಚರಿತ್ರೆಗಳಿಂದ ಸಿದ್ಧವಾಗುತ್ತದೆ.

ಹನುಮದವತಾರದಲ್ಲಿ ಸಲ್ಲಿಸಿದ ಅಸದೃಶ ಸೇವೆಯಿಂದ ಸುಪ್ರೀತನಾದ ಶ್ರೀರಾಮಚಂದ್ರನು, ಇವರ ಸೇವೆಗೆ ಪ್ರತಿಯಾಗಿ, ಕಾಲ ಪ್ರಾಪ್ತವಾದಾಗ ಮೋಕ್ಷವನ್ನೇ ಕೊಟ್ಟರೂ ಕಡಿಮೆಯೆಂದು ಸಾರಿ 'ಸಹಭೋಗ'ವನ್ನಿತ್ತನು ಮತ್ತು ಸ್ವೇಚ್ಛೆಯಿಂದ ಮುಕ್ತಸ್ಥಾನಗಳನ್ನು ಪ್ರವೇಶಿಸಿ ತನ್ನ ದರ್ಶನಾದಿಗಳನ್ನು ಹೊಂದುವ ಅನುಮತಿಯನ್ನು

ಕರುಣಿಸಿದನು. ತನ್ನ ಒಂದು ರೂಪವನ್ನು (ಶ್ರೀರಾಮ ರೂಪವನ್ನು) ಹನುಮಂತನಿಗೆ ಮೀಸಲಾಗಿಟ್ಟು, ನಿತ್ಯ ಸಂದರ್ಶನ ಭಾಗ್ಯವನ್ನು ಕೊಟ್ಟನು. ಸಮಸ್ತ ಜೀವಾಧಿಕ ನಿತ್ಯಪ್ರವೃದ್ಧ ಭಕ್ತಿಯನ್ನೂ ಅನುಗ್ರಸಿದನು. ಸಹಭೋಗಕ್ಕಿಂತ ಹೆಚ್ಚಿನ ವಿಶೇಷಾನುಗ್ರಹ-ವೆಂಬುದಿಲ್ಲ. ಸರ್ವ ಶುಭ ಕರ್ಮ ಫಲಭೋಕ್ತನಾದ ಶ್ರೀಹರಿಯೊಂದಿಗೆ, ಬ್ರಹ್ಮಾಂಡ-ದಲ್ಲಿನ ಸಮಸ್ತ ಸಜ್ಜನರು ಆಚರಿಸುವ ಸರ್ವ ಶುಭ ಕರ್ಮ ಫಲಗಳನ್ನು, ಸತ್ಯ ಲೋಕಾಧಿಪತಿಯಾಗಿದ್ದುಕೊಂಡು, ಭೋಗಿಸುವುದು 'ಸಹಭೋಗವು.' *'ಭೋಗಾಶ್ಚ ಯೇ ಯಾನಿ ಚ ಕರ್ಮಜಾತಾನ್ಯನಾದ್ಯನಂತಾನಿ ಮಮೇಹ ಸಂತಿ। ಮದಾಜ್ಞಯಾ ತಾನ್ಯಖಿಲಾನಿ ಸಂತಿ ಧಾತುಃ ಪದೇ ತತ್ಸಹಭೋಗ ನಾಮ'* (ಭಾ.ತಾ.) ಎಂದು ಸಹಭೋಗವನ್ನು ವರ್ಣಿಸಲಾಗಿದೆ.

ಭೀಮಾವತಾರದಲ್ಲಿ ಭೂಭಾರಹರಣ ಕಾರ್ಯದಲ್ಲಿ ಶ್ರೀಕೃಷ್ಣನಿಗೆ, ಭೀಮನಂತೆ ಸೇವೆ ಸಲ್ಲಿಸಿದವನು ಮತ್ತೊಬ್ಬನಿಲ್ಲ. ಅಂತೆಯೇ ಶ್ರೀಕೃಷ್ಣನಿಗೆ ಭೀಮನಲ್ಲಿದ್ದ ಪ್ರೀತಿ ವಿಶ್ವಾಸಗಳು ಮತ್ತೊಬ್ಬನಲ್ಲಿರಲಿಲ್ಲ. ದುರ್ಯೋಧನಾದಿ ೧೦೦ ದುಷ್ಟ ಸಹೋದರ-ರನ್ನೂ, ಕೀಚಕನನ್ನೂ, ನೂರಾರು ಮಂದಿ ಉಪಕೀಚಕರನ್ನೂ ಭೀಮಸೇನನೊಬ್ಬನೇ ಕೊಂದನು. ಜರಾಸಂಧ, ಬಕ, ಕಿರ್ಮೀರಾದಿ ಅವಧ್ಯರನ್ನು ಕೊಂದು, ಈ ವಿಶಿಷ್ಟ ಕಾರ್ಯಗಳನ್ನೂ ಶ್ರೀಕೃಷ್ಣನ ಪ್ರೀತಿಕರವಾದ ಯಜ್ಞವೆಂದಾಚರಿಸಿ, ಶ್ರೀಕೃಷ್ಣನಲ್ಲಿಯೇ ಸಮರ್ಪಿಸಿದ ಭೀಮನಲ್ಲದೇ ಬೇರಾರು ಶ್ರೀಕೃಷ್ಣನ ವಿಶೇಷಾನುಗ್ರಹಕ್ಕೆ ಪಾತ್ರರು? ತೃತೀಯಾವತಾರದಲ್ಲಿ, ಶ್ರೀಮದಾನಂದತೀರ್ಥರಾಗಿ ಅವತರಿಸಿ, ಅನ್ಯಾಸಾಧ್ಯವೆಂದು ಭಗವಂತನೇ ತಿಳಿದು, ಇವರಿಗೆ ಮಾಡಿದ ಆಜ್ಞೆಯನ್ನು, ಅತಿತೃಪ್ತಿಕರವಾಗಿ ನೆರವೇರಿಸಿದರು. ಕಲಿಯುಗದಲ್ಲಿ, ಕಲಿಯಿಂದ ಪ್ರವೃತ್ತವಾಗಿ, ಕಲಿಯಿಂದಲೇ ಅಭಿಮನ್ಯವಾದ, ಕಲಿಯ ನಿತ್ಯ ಸ್ಥಾನವಾದ ಅಂಧತಮಸ್ಸನ್ನೇ ದೊರಕಿಸುವ 'ಮಾಯಾವಾದ' ಸ್ವತವಾದ ಸರ್ವ ದುರ್ಮತಗಳನ್ನು ಖಂಡಿಸಿ, ಸಯುಕ್ತಿಕ-ವಾಗಿಯೂ ಸಪ್ರಮಾಣಿಕವಾಗಿಯೂ, ಸದ್ವೈಷ್ಣವ ಸಿದ್ಧಾಂತ ತತ್ವಗಳನ್ನು ಸ್ಥಾಪನೆ ಮಾಡಿದುದು ಸಾಮಾನ್ಯ ಸೇವೆಯೇ? ರುದ್ರಾದಿ ಅನ್ಯ ದೇವತೆಗಳಿಂದ ಸಹ ದುಸ್ಸಾಧ್ಯವಾದ ಕಾರ್ಯವಿದು. ಇದರಿಂದ ಪ್ರೀತನಾದ ಶ್ರೀವೇದವ್ಯಾಸರೂಪೀ ಶ್ರೀನಾರಾಯಣನು, ಸೂತ್ರಭಾಷ್ಯವನ್ನು ಶ್ರೀಮದ್ ಆನಂದತೀರ್ಥರು ತನ್ನಲ್ಲಿ ಸಮರ್ಪಿಸಿದಾಗ, ಪ್ರಥಮಾವತಾರದಲ್ಲಿ ಅನುಗ್ರಸಿದ ಸಹಭೋಗವನ್ನೇ ಮತ್ತಷ್ಟು ವೃದ್ಧಿ (ಪೂರ್ಣ)ಗೊಳಿಸುವುದೆಂಬ ವಿಶೇಷಾನುಗ್ರಹವನ್ನು ಮಾಡಿದನೆಂದು ಹೇಳ-ಲಾಗಿದೆ. *'ಸಹಭೋಗಮನನ್ಯಲಭ್ಯಮಸ್ಮೈ ಹನುಮದ್ರೂಪವತೇ ದದೌ ಪುರಾ ಹಿ। ಅನವೇಕ್ಷ್ಯ ಪರಂಸ್ವಭೀಷ್ಟಕರ್ತ್ರೇ ಪ್ರತಿದಾತುಂ ಹರಿರೈಧಯತ್ತಮೇವ॥'* (ಸುಮಧ್ವ-ವಿಜಯ) ಉಕ್ತಪ್ರಮೇಯವು ಈ ಶ್ಲೋಕದ ಭಾವಾರ್ಥವೇ ಆಗಿದೆ.

(೨)..ೕಗೆ ಪ್ರಸಿದ್ಧ ಮೂರು ಅವತಾರಗಳಲ್ಲಿಯೂ, ಮತ್ತು ಮುಖ್ಯಪ್ರಾಣನಾಗಿ ಅನಂತರೂಪಗಳಿಂದ ಸಲ್ಲಿಸುವ ಜಗತ್ಕಾರ್ಯ ನಿರ್ವಾಹದಲ್ಲಿಯೂ, ಶ್ರೀವಾಯು-ದೇವರಿಗೆ ಸಮರಾದವರು ಅನ್ಯರಾರೂ ಇಲ್ಲ. ಆದ್ದರಿಂದಲೇ ಇವರಿಗಿಂತ ಅಧಿಕ-ವಾದ ಶ್ರೀಹರಿಯ ಅನುಗ್ರಹವನ್ನು ಹೊಂದಿರುವವರು ಅನ್ಯರಿಲ್ಲ. ಭಕ್ತಿಜ್ಞಾನಾದಿ ಸದ್ಗುಣಗಳಲ್ಲಿ ಇವರನ್ನು ಸರಿಗಟ್ಟುವ ಜೀವನಿಲ್ಲ. ಭೂತ ಭವಿಷ್ಯತ್ಕಾಲಗಳಲ್ಲಿ ಸಹ ಇಲ್ಲ. ಇವರು ಶ್ರೀಹರಿಯ ಏಕಾಂತ ಭಕ್ತರಲ್ಲಿ ಶ್ರೇಷ್ಠರು; ಅಪ್ರತಿಮಭಕ್ತರು.. ಆದ್ದರಿಂದಲೇ *'ಹನೂಮತೋ ನ ಪ್ರತಿಕರ್ತೃತಾ ಸ್ಯಾತ್ ಸ್ವಭಾವಭಕ್ತಸ್ಯ ನಿರೌಪಧಂ ಮೇ'* (ಭಾ.ತಾ.) ನನ್ನನ್ನು ಸೇವಿಸಿದ ಇತರರಿಗೆ ಮೋಕ್ಷದಾನವು ಪ್ರತ್ಯುಪಕಾರ-ವಾದೀತು; ಆದರೆ ಸ್ವಭಾವಭಕ್ತನಾದ ಹನುಮಂತನಿಗೆ ಆತನ ಸೇವೆಗೆ ತಕ್ಕ ಯಾವ ಫಲವನ್ನೂ ಕೊಡಲು ಸಾಧ್ಯವಿಲ್ಲವೆಂದು ಶ್ರೀರಾಮಚಂದ್ರನು ಹೇಳಿದ್ದಾನೆ. ಏಕಾಂತ ಭಕ್ತಶ್ರೇಷ್ಠರು ಶ್ರೀವಾಯುದೇವರಾದರೆ, ಏಕಾಂತ ಭಕ್ತರು ಯಾರು ಮತ್ತೆ ಅವರ ಲಕ್ಷಣಗಳೇನೆಂಬುದನ್ನು ತಿಳಿಯಬೇಕಲ್ಲವೇ? *'ಯದಿ ದದ್ಯಾದ್ಭಕ್ತಿಯೋಗಫಲಂ ಮೋಕ್ಷಮಪೀಶ್ವರಃ। ಭಕ್ತಿಯೋಗ ಫಲತ್ವೇನ ನ ತದ್ಗೃಣ್ಹೀಯುರೇವ ತೇ॥'* (ಭಾಗ-ತಾ. ೧೧ನೇ ಸ್ಕಂಧ) ಎಂದರೆ, ಭಕ್ತಿಯೋಗದ ಫಲವೆಂದು ಶ್ರೀಹರಿಯು ಮೋಕ್ಷವನ್ನು ಕೊಟ್ಟರೆ ಭಕ್ತಿಫಲವನ್ನಾಗಿ ಮೋಕ್ಷವನ್ನು ಸ್ವೀಕರಿಸುವುದಿಲ್ಲವೆಂದೂ, *'ನೇಚ್ಛಂತಿ ಸಾಯುಜ್ಯಮಪಿ ಫಲತ್ವೇನ ಹರಿರ್ಯದಿ। ದದಾತಿ ಭಕ್ತಿಸಂತುಷ್ಟ ಆಜ್ಞಾತ್ವೇನೈವಗೃಹ್ಣತೇ॥'* (ಭಾಗ-ತಾ. ೩ನೇ ಸ್ಕಂಧ) ಎಂದರೆ, ಭಕ್ತಿಯಿಂದ ಪ್ರೀತನಾಗಿ ಶ್ರೀಹರಿಯು ಸಾಯುಜ್ಯ ಮುಕ್ತಿಯನ್ನು ಕೊಟ್ಟರೂ, ಅದನ್ನು ಫಲರೂಪ ದಿಂದ ಸ್ವೀಕರಿಸಲು ಇಚ್ಛಿಸುವುದಿಲ್ಲ; ಆದರೆ ಶ್ರೀಹರಿಯ ಆಜ್ಞೆಯೆಂದು ಸ್ವೀಕರಿಸು-ತ್ತಾರೆಂದೂ, ಏಕಾಂತ ಭಕ್ತರ ಫಲಾಶಾರ್ರಾತ್ಯದ ಸ್ವರೂಪವನ್ನು ನಿರ್ಣಯಿಸಿ ಹೇಳಲಾಗಿದೆ. ಇಂಥ ಏಕಾಂತ ಭಕ್ತರು ಯಾರೆಂದರೆ *'ಏಕಾಂತಭಕ್ತಾಸ್ತೇ ಪ್ರೀತಿಮಾತ್ರೋದ್ದೇಶ್ಯಾಸ್ತಥಾ ಹರೇಃ। ಸರ್ವೇಚ ಸೋಮಪಾಃ ಪ್ರೋಕ್ತಾಃ ಸಭಾರ್ಯಾಸ್ತ್ರಿದಿವೌಕಸಃ॥'* (ಸ.ರ.ಮಾ.) 'ಶ್ರೀಹರಿಪ್ರೀತಿಯೊಂದನ್ನೇ ಕೋರುವ ಏಕಾಂತಭಕ್ತರೆಂದರೆ ಸೋಮಪಾನಾರ್ಹರಾದ ದೇವತೆಗಳು ಮತ್ತು ಅವರ ಭಾರ್ಯರು' ಎಂದು ಸ್ಪಷ್ಟಪಡಿಸಲಾಗಿದೆ. *'ನವಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು। ಸೋಮಾಧಿಕಾರೋ ವೇದೋಕ್ತೋ ಬ್ರಹ್ಮಣಿ ದ್ವೇಶತಾಧಿಕೇ । ಯಥಾತಥೈವಾಸಂಖ್ಯೇಯಾಃ ಪ್ರಜಾಸ್ತಾಸು ಕಿಯಾನ್ ಜನಃ। ಜ್ಞಾನಾಧಿಕಾರೀ ಸಂಪ್ರೋಕ್ತೋ ವಿಷ್ಣುಪಾದೈಕಸಂಶ್ರಯಃ॥'* (ಭಾಷ್ಯ) ಎಂದರೆ ಒಂಭತ್ತು ಕೋಟಿ ಪ್ರಸಿದ್ಧರಾದ ದೇವತೆಗಳ ಮಧ್ಯದಲ್ಲಿ ಪರಬ್ರಹ್ಮ (ಪರಮಾತ್ಮ ) ಮತ್ತು ಅಪರಬ್ರಹ್ಮ (ವಿರಿಂಚಿ), ಇವರೊಂದಿಗೆ ಕೇವಲ ೧೦೦ ದೇವತೆಗಳಿಗೆ ಮಾತ್ರ ಸೋಮಪಾನದಲ್ಲಿ

ಅಧಿಕಾರವಿರುವಂತೆ, ಅಸಂಖ್ಯಾತ ಜೀವರಲ್ಲಿ ವಿಷ್ಣುಪಾದೈಕ ಶರಣರಾದ ಕೆಲವರಿಗೆ ಮಾತ್ರ ಜ್ಞಾನಾಧಿಕಾರವೆಂದು ಹೇಳಲಾಗಿದೆ. ಸೋಮಪಾನಾರ್ಹರಾದ ಆ ನೂರೆರಡು (೧೦೨) ದೇವತೆಗಳು ಯಾರೆಂದರೆ ಪರಬ್ರಹ್ಮ—೧; ಚತುರ್ಮುಖ ಬ್ರಹ್ಮ—೧; ಪ್ರಧಾನ ವಾಯು—೧; ಮರುದ್ಗಣ—೪೯; ಆದಿತ್ಯರು—೧೨; ರುದ್ರರು—೧೧; ವಸುಗಳು—೮; ಅಶ್ವಿನೀದೇವತೆಗಳು—೨; ದ್ಯಾವಾಪೃಥಿವೀ—೨; ಋಭುಗಣ—೧; ಬೃಹಸ್ಪತಿ—೧; ವಿಶ್ವೇದೇವತೆಗಳು—೧೦; ಪಿತೃದೇವತೆಗಳು—೩; ಹೀಗೆ ೧೦೨ ಜನರು ಸೋಮಪಾನಾರ್ಹರು. ಇವರಲ್ಲಿ ಪರಬ್ರಹ್ಮನಿಂದ ಭಿನ್ನರಾದ ೧೦೧ ಜನರು ಏಕಾಂತ ಭಕ್ತರು; ಅವರಲ್ಲಿ ವಾಯುಬ್ರಹ್ಮರು ಶ್ರೇಷ್ಠರು.

(೩) ಶ್ರೀಹರಿ ಸಾನ್ನಿಧ್ಯದಲ್ಲಿ ಶ್ರೀವಾಯುದೇವರು ಸದಾ ಪೂಜ್ಯರು, ಸರ್ವರಿಂದ, ಶ್ರೀಹರಿಪೂಜಾಸಾಫಲ್ಯಕ್ಕಾಗಿ, ತಪ್ಪದೇ ಪೂಜಿಸಲ್ಪಡಬೇಕಾದವರು. ಇವರಿದ್ದಲ್ಲಿ ಶ್ರೀಹರಿಯು ಇದ್ದೇ ಇರುವನು; ಬ್ರಹ್ಮಾಂಡದಲ್ಲಿ ಶ್ರೀಹರಿಯು ಇರುವಲ್ಲೆಲ್ಲ (ಸರ್ವತ್ರ) ಶ್ರೀವಾಯುದೇವರು ಇದ್ದೇ ಇರುವರು. ಇವರಿಲ್ಲದಿದ್ದಲ್ಲಿ ಅವನೂ ಇಲ್ಲ. ಬ್ರಹ್ಮಾಂಡದೊಳಗೆ ಮಾತ್ರ ಈ ವಿಧವಾದ ಉಭಯರ ವ್ಯಾಪ್ತಿ. ಶ್ರೀವಾಯುದೇವರ ಈ ವಿಧ ವ್ಯಾಪ್ತಿಯೂ ಶ್ರೀಹರಿಯ ವಿಶೇಷಾನುಗ್ರಹ ಬಲದಿಂದಲೇ—ಅನ್ಯಥಾಸ್ವರೂಪದಿಂದ ಅಣುವಾದವರಿಗೆ ವ್ಯಾಪ್ತತ್ವವು ಹೇಗೆ ಕೂಡುತ್ತದೆ? ಶ್ರೀಹರಿಯ ಅಚಿಂತ್ಯ ಶಕ್ತಿಯಿಂದಲೇ ಇವರು ಅನಂತಾಂಶಗಳಿಂದ ವಿಭಕ್ತರಾಗಿ ಸರ್ವತ್ರ ಇರುವರು. ಆದ್ದರಿಂದ ಶ್ರೀಹರಿವಾಯುಗಳ ಉಭಯ ಸಾನ್ನಿಧ್ಯಕ್ಕೆ ಎಂದೂ ಹಾನಿಯಿಲ್ಲ. ಅಧ್ಯಾತ್ಮಾದಿಗಳಲ್ಲಿ ಹೀಗೆ ಉಭಯರ ಸಾನ್ನಿಧ್ಯವಿರುತ್ತಿರಲು, ಶ್ರೀವಾಯುದೇವರ ಅವತಾರ ರೂಪಗಳು ಸಹ ಶ್ರೀಹರಿ ಸಾನ್ನಿಧ್ಯದಲ್ಲಿ ದೇವಾದಿಗಳಿಂದ ಪೂಜಿಸಲ್ಪಟ್ಟಿರುವುವು. ಉಡುಪಿ ಕ್ಷೇತ್ರದಲ್ಲಿ ಶ್ರೀಅನಂತೇಶ್ವರ ಸನ್ನಿಧಿಯಲ್ಲಿ ಐತರೇಯೋಪನಿಷದ್ಭಾಷ್ಯ ಪ್ರವಚನವನ್ನು ನಡೆಸುತ್ತಿರಲು, ಆಕಾಶಮಾರ್ಗದಲ್ಲಿ ದೇವ, ಗಂಧರ್ವ, ಋಷ್ಯಾದಿಗಳು ನಿಂತು ದೇವಲೋಕದ ಪುಷ್ಪಗಳನ್ನು ವೃಷ್ಟಿಗರೆದು, ವಿಜಯಮಹೋತ್ಸವವನ್ನಾಚರಿಸಿ ಪೂಜಿಸಿದರೆಂದು ಶ್ರೀ ಸುಮಧ್ವವಿಜಯದಲ್ಲಿ ಉಲ್ಲೇಖಿಸಲಾಗಿದೆ.

೬. ದ್ವಾತ್ರಿಂಶಲ್ಲಕ್ಷಣೋಪೇತಾನಾಂ, ತಥಾ ಸಮಗ್ರಗುರುಲಕ್ಷಣೋಪೇತಾನಾಂ, ಅಸಂಶಯಾನಾಂ, ಪ್ರಸಾದಮಾತ್ರೇಣ ಸ್ವಭಕ್ತಾಶೇಷ ಸಂಶಯಚ್ಛೇತ್ತ್ರೂಣಾಂ....

ಪ್ರತಿಪದಾರ್ಥ: ದ್ವಾತ್ರಿಂಶಲ್ಲಕ್ಷಣೋಪೇತಾನಾಂ—೩೨ (ಮೂವತ್ತೆರಡು) ಸಲ್ಲಕ್ಷಣಗಳಿಂದ ಯುಕ್ತರೂ, ತಥಾ—ಹಾಗೂ, ಸಮಗ್ರ ಗುರುಲಕ್ಷಣೋಪೇತಾನಾಂ—ಸಕಲ ಸದ್ಗುರು ಲಕ್ಷಣಗಳಿಂದ ಕೂಡಿದವರೂ, ಅಸಂಶಯಾನಾಂ—ಸಂಶಯ ರಹಿತ ತತ್ವಜ್ಞಾನ ನಿಶ್ಚಯವುಳ್ಳವರೂ, ಪ್ರಸಾದಮಾತ್ರೇಣ—ಪ್ರಸನ್ನರಾಗಿ ಅನುಗ್ರಸುವ ಮಾತ್ರದಿಂದ,

ಸ್ವಭಕ್ತಾಶೇಷಸಂಶಯ ಛೇತ್ತೄಣಾಂ— ತಮ್ಮ ಭಕ್ತರ ಸಕಲ ಸಂಶಯಗಳನ್ನು ಪರಿಹರಿಸು-ವವರೂ ಆದ (ಶ್ರೀಮದಾನಂದತೀರ್ಥರ)....

ತಾತ್ಪರ್ಯ: ಶ್ರೀವಾಯುದೇವರು ಸದ್ಗುರುಗಳಲ್ಲಿರಬೇಕಾದ ಸಕಲ ಸಲ್ಲಕ್ಷಣ-ಗಳುಳ್ಳವರು; ಅವರ ದೇಹವು, ಲಕ್ಷಣಶಾಸ್ತ್ರದಲ್ಲಿ ಹೇಳಿರುವ, ಜಗದ್ಗುರುಗಳಿಗಿರ-ಬೇಕಾದ, ೩೨ ಸಲ್ಲಕ್ಷಣಗಳುಳ್ಳದ್ದು. (ಅವತಾರಗಳಲ್ಲಿ ಸಹ) ಅವರು ಸದ್ಗುರುವಿನ ಮುಖ್ಯ ಲಕ್ಷಣವಾದ ನಿಸ್ಸಂಶಯ ಜ್ಞಾನವುಳ್ಳವರು ಮತ್ತು ತಮ್ಮನ್ನು ಭಕ್ತಿಯಿಂದ ಆಶ್ರಯಿಸಿ ಸೇವಿಸುವ ಭಕ್ತರ ಸಕಲ ಸಂಶಯಗಳನ್ನು ಪರಿಹರಿಸಿ, ನಿಶ್ಚಯಜ್ಞಾನವನ್ನು ದೊರಕಿಸುವ ಸಾಮರ್ಥ್ಯವುಳ್ಳವರು.

ಪ್ರಮೇಯ ವಿವರಣೆ: (೧) *'ಅಸಂಶಯಃ ಸಂಶಯಛಿದ್ಗುರುರುಕ್ತೋ ಮನೀ-ಷಿಭಿಃ। ತಸ್ಮಾದ್ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ॥ ಅನ್ಯೇಽಪಿ-ಸ್ವಾತ್ಮನೋ ಮುಖ್ಯಾಃ ಕ್ರಮಾದ್ಗುರವ ಈರಿತಾಃ। ಕ್ರಮಾಲ್ಲಕ್ಷಣಹೀನಾಶ್ಚ ಲಕ್ಷಣಾಲಕ್ಷಣೈಃ ಸಮಾಃ॥'* (ಭಾ.ತಾ.); ಎಂದರೆ ನಿಸ್ಸಂಶಯ ಜ್ಞಾನವುಳ್ಳವನಾಗಿ, ಶಿಷ್ಯರ ಸಂಶಯ-ಗಳನ್ನು ಪರಿಹರಿಸಬಲ್ಲವನೇ ಗುರುವೆಂದು ಜ್ಞಾನಿಗಳು ಹೇಳುವರು. ಈ ಲಕ್ಷಣವನ್ನು ಮುಖ್ಯವಾಗಿ ಹೊಂದಿರುವ ಬ್ರಹ್ಮನೇ ಸರ್ವರಿಗೆ ಸರ್ವದಾ ಮುಖ್ಯ ಗುರುವು. ತಮಗಿಂತ ಉತ್ತಮರಾದ ಇತರರೂ, ಕ್ರಮದಿಂದ ಗುರುಗಳೇ; ಈ (ಸ್ವೋತ್ತಮ) ಗುರುಗಳೆಲ್ಲರೂ ಅವರ ಸ್ವರೂಪಯೋಗ್ಯತಾ ತಾರತಮ್ಯಾನುಸಾರವಾಗಿ, ಕೆಳ ಕೆಳಗಿನವರು ಲಕ್ಷಣಗಳಿಂದ ..ೀನರೂ, ಇನ್ನೂ ಕೆಳಗಿನವರು ಲಕ್ಷಣ-ಅಲಕ್ಷಣ-(ಅವಲಕ್ಷಣ)ಗಳು ಸಮವಾಗುಳ್ಳವರು ಆಗಿರುತ್ತಾರೆ. ಇಂತಹ ಜಗದ್ಗುರುವಿನ ದೇಹಲಕ್ಷಣವೂ ಅಲ್ಲಿಯೇ (ಭಾ.ತಾ) ವರ್ಣಿಸಲ್ಪಟ್ಟಿದೆ. *'ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ। ಸಪ್ತಪಾದಶ್ಚತುರ್ಹಸ್ತೋ ದ್ವಾತ್ರಿಂಶಲ್ಲಕ್ಷಣೈರ್ಯುತಃ॥'* ಎಂದರೆ, ಪಾದದಿಂದ ನೆತ್ತಿಯವರೆಗೆ ೯೬ ಅಂಗುಲ ಎತ್ತರದ ದೇಹವುಳ್ಳವನಾಗಿರ-ಬೇಕು; ಆ ದೇಹವು ೪೮ ಅಂಗುಲ ಸುತ್ತಳತೆಯುಳ್ಳದ್ದಾಗಿರಬೇಕು; ಒಂದು ಪಾದದ ೭ರಷ್ಟು ಅಳತೆಯು ಒಂದು ಹಸ್ತದ ೪ರಷ್ಟಕ್ಕೆ ಸಮನಾಗಿರಬೇಕು; ೩೨ ಸಲ್ಲಕ್ಷಣ-ಯುಕ್ತವಾಗಿರಬೇಕು. ಈ ವಿಧ ಜ್ಞಾನ ಮತ್ತು ದೇಹ— ಉಭಯ ಲಕ್ಷಣಗಳುಳ್ಳವನು ಬ್ರಹ್ಮದೇವನೊಬ್ಬನೇ. *'ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ಬ್ರಹ್ಮೈವ ಸ ಸ್ಮೃತಃ'* (ಸ.ರ.ಮಾ.)— ಶ್ರೀವಾಯುದೇವರೇ ಬ್ರಹ್ಮತ್ವವನ್ನು (ಬ್ರಹ್ಮ ಪದವಿಯನ್ನು) ಹೊಂದುವುದರಿಂದ, ಅವರು ಬ್ರಹ್ಮನೆಂದೂ ಕರೆಯಲ್ಪಡುವರು. ಆದ್ದರಿಂದ ವಾಯ್ವವತಾರರಾದ ಶ್ರೀಮದಾನಂದತೀರ್ಥರೇ ಮುಖ್ಯ ಗುರುಗಳು— ಸರ್ವರ ಗುರುಗಳಾದ್ದರಿಂದ ಜಗದ್ಗುರುಗಳು— ಅವರೇ ಗುರುಸಾರ್ವಭೌಮರು. ವಾಯ್ವಾ-

ವೇಶ ಯುಕ್ತರಾದ್ದರಿಂದಲೇ ಶ್ರೀ ರಾಘವೇಂದ್ರತೀರ್ಥರೂ ಗುರುಸಾರ್ವಭೌಮರೆಂದು ಜ್ಞಾನಿಗಳಿಂದ ಸಂಬೋಧಿಸಲ್ಪಟ್ಟಿರುವರು.

ಜಗದ್ವಿಷಯಕ ಅಶೇಷ ವಿಶೇಷ ಸ್ವತವಾದ ಪೂರ್ಣಜ್ಞಾನವುಳ್ಳವರು ಶ್ರೀವಾಯುದೇವರು. ಈ ಸರ್ವವನ್ನೂ ಆಲೋಚನೆ ಮಾತ್ರದಿಂದ ಅರಿಯಬಲ್ಲರು. ಅವರು ಅನಾದಿಕಾಲದಿಂದ ಅಪರೋಕ್ಷವುಳ್ಳ, ದೇವತಾವರ್ಗಗಳಿಗೆಲ್ಲ ಶ್ರೇಷ್ಠವಾದ ಋಜುಗಣವೆಂಬ ದೇವಗಣಕ್ಕೆ ಸೇರಿದವರು—ಬ್ರಹ್ಮಪದಯೋಗ್ಯರು. ಅವರ ಜ್ಞಾನವು ಸರ್ವದಾ ಯಥಾರ್ಥವನ್ನು ಗ್ರಸುತ್ತದೆ. ಸಂಶಯ-ಭ್ರಮಾದಿಗಳು ಅವರ ಬಳಿ ಸುಳಿಯಲಾರವು. ರುದ್ರಾದಿ ದೇವಶ್ರೇಷ್ಠರಿಗೂ ಜ್ಞಾನಪ್ರದರಾದವರಲ್ಲಿ ಅಜ್ಞಾನ ಸಂಶಯ ಜ್ಞಾನಾದಿಗಳಿರುವುದು ಸಂಭಾವಿತವೇ ಅಲ್ಲ. ಇವರೇ ಸರ್ವ ಜ್ಞಾನಾಧಿಕಾರಿಗಳಿಗೆ ಪ್ರಾಪ್ತವಾಗುವ ಸಮಸ್ತ ಸಂಶಯಗಳನ್ನೂ ಪರಿಹರಿಸಬಲ್ಲರು. ಸ್ವೋತ್ತಮರು ಸ್ವಾವರರ (ಉತ್ತಮರು ಕೆಳಗಿನವರ) ಸಂಶಯಗಳನ್ನು ಬಹುಮಟ್ಟಿಗೆ ಪರಿಹರಿಸಬಲ್ಲರಾದರೂ, ಸರ್ವಸಂಶಯಗಳ ಆತ್ಯಂತಿಕ ಪರಿಹಾರವು ಸರ್ವರಿಗೆ, ಪ್ರಳಯಕಾಲದಲ್ಲಿ ಎಲ್ಲರೂ ಬ್ರಹ್ಮದೇವನಲ್ಲಿ ಬಂದು ಸೇರಿದಾಗ ಆತನ ಉಪದೇಶದಿಂದಲೇ ದೊರೆಯುವುದು.

ಲಕ್ಷಣಶಾಸ್ತ್ರದಲ್ಲಿ ಹೇಳಲ್ಪಟ್ಟ ೩೨ ಲಕ್ಷಣಗಳಾವುವೆಂದರೆ: *'ಪಂಚದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ। ತ್ರಿಪೃಥು ತ್ರಿಷು ಗಂಭೀರೋ ದ್ವಾತ್ರಿಂಶಲ್ಲಕ್ಷಣಸ್ತ್ವಿತಿ॥'* ಭುಜ, ನೇತ್ರ, ಹನು, ಜಾನು ಮತ್ತು ನಖ, ಇವು ಐದು ದೀರ್ಘವಾಗಿರಬೇಕು; ತ್ವಕ್, ಕೇಶ, ಅಂಗುಲಿ (ಬೆರಳುಗಳು), ದಂತ, ಅಂಗುಲಿಪರ್ವ (ಗೆಣ್ಣುಗಳ ಮಧ್ಯಭಾಗಗಳು), ಇವು ೫ ಸೂಕ್ಷ್ಮವಾಗಿರಬೇಕು; ಅಂಗೈ, ಅಂಗಾಲು, ನೇತ್ರಾಂಶ (ಕಣ್ಣುಕುಡಿ—ತುದಿ), ತಾಲು (ಬಾಯೊಳಗಿನ ಮೇಲ್ಭಾಗ), ಜಿಹ್ವೆ (ನಾಲಿಗೆ), ಅಧರೋಷ್ಠ (ಕೆಳದುಟಿ), ನಖ (ಕೈಯುಗುರು) ಇವು ೭ ಕೆಂಪಗಿರಬೇಕು; ವಕ್ಷ (ಎದೆ), ಕುಕ್ಷಿ (ಹೊಟ್ಟೆ), ಅಲಕ (ಹಣೆ), ಸ್ಕಂಧ (ಹೆಗಲು), ಕರ (ಮುಂಗೈ ಮೇಲ್ಭಾಗ), ವಕ್ತ್ರ (ಮುಖ) ಇವು ೬ ಉನ್ನತವಾಗಿರಬೇಕು; (ತುಂಬಿಕೊಂಡು ಎದ್ದಿರಬೇಕು; ಲಲಾಟ, ಕಟಿ (ಸೊಂಟ), ವಕ್ಷ, ಇವು ೩ ಪೃಥು (ವಿಸ್ತಾರ) ಅಗಲವಾಗಿರಬೇಕು. ಜಂಘೆ (ಮೊಣಕಾಲುಚಿಪ್ಪು), ಗ್ರೀವ (ಕಂಠ), ಮೇಹನ (ಶಿಶ್ನ)—ಇವು ೩ ಹ್ರಸ್ವ(ಚಿಕ್ಕ)ವಾಗಿರಬೇಕು; ಸತ್ವ (ಸ್ವಭಾವ) ಸ್ವರ, ನಾಭಿಗಳು ಇವು ೩ ಗಂಭೀರವಾಗಿರಬೇಕು. ಈ ೩೨ ಲಕ್ಷಣಗಳುಳ್ಳ ದೇಹವು ಋಜುಗಣದ ಜೀವರಿಗೆ ಮಾತ್ರ. ಪ್ರಾಕೃತದೇಹರ್ರತನಾದ ಶ್ರೀಹರಿಯ ಅಪ್ರಾಕೃತ (ಚಿದಾನಂದಾತ್ಮಕ) ದೇಹಗಳಿಗೆ ಸರ್ವ ಸಲ್ಲಕ್ಷಣಗಳು ಅತ್ಯಂತ ಸೂಕ್ಷ್ಮಾಂಶಗಳಲ್ಲಿ ಸಹ ಪೂರ್ಣವೂ

ಅಪರಿಮಿತವೂ ಆಗಿರುತ್ತವೆ. *'ನ ಕೇವಲಂ ಭಗವತೋ ದ್ವಾತ್ರಿಂಶಲ್ಲಕ್ಷಣಾನ್ಯೇವ। ಅಪಿತು ಅತಿ ವಿಲಕ್ಷಣಾನ್ಯನಂತಾನಿ ಲಕ್ಷಣಾನಿ ಸಂತಿ॥'* (ಸ.ರ.ಮಾ.) ಎಂದರೆ, ನಾರಾಯಣನಲ್ಲಿ ೩೨ ಲಕ್ಷಣಗಳು ಮಾತ್ರವಲ್ಲ ಅಚಿಂತ್ಯ ಅನಂತ ಸಲ್ಲಕ್ಷಣಗಳು ವಿಲಕ್ಷಣವೂ ಪೂರ್ಣವೂ ಆಗಿರುತ್ತದೆ. ಬ್ರಹ್ಮ-ವಾಯು ಮತ್ತು ಸರಸ್ವತೀ ಭಾರತಿಯ-ರಿಂದ ಕೆಳಗಿನವರಾದ, ರುದ್ರಾದಿ ದೇವತೆಗಳಲ್ಲಿ ಕೆಲವು ಲಕ್ಷಣಗಳು ಇರುವುದಿಲ್ಲ; ಯಾವ ಅಂಗಗಳು ಲಕ್ಷಣೋನವಾಗಿರುತ್ತವೆಂಬುದನ್ನೂ, ದುರ್ಲಕ್ಷಣಗಳ ಸ್ವರೂಪ-ವನ್ನೂ, ಅಧಮಾಧಮನಾದ ಕಲಿಯ ದೇಹಕ್ಕಿರುವ ೩೨ ದುರ್ಲಕ್ಷಣಗಳ ವಿವರ-ಗಳನ್ನೂ ಗರುಡ ಪುರಾಣದ ಬ್ರಹ್ಮಕಾಂಡವು ವಿಸ್ತಾರವಾಗಿ ನಿರೂಪಿಸುತ್ತದೆ. ಆ ಭಾಗವನ್ನು ಅಭ್ಯಸಿಸಿ ತಿಳಿದುಕೊಳ್ಳಬಹುದು.

(೨) *'ಪ್ರಸಾದಮಾತ್ರೇಣ ಸ್ವಭಕ್ತಾಶೇಷ ಸಂಶಯಛೇತ್ತ್ರೇಣಾಂ'* ಎಂಬುದರ ತಾತ್ಪರ್ಯಾರ್ಥವನ್ನು ಸರಿಯಾಗಿ ಗ್ರಸಬೇಕು. ಇಲ್ಲಿರುವ 'ಮಾತ್ರ' ಶಬ್ದವು, ಕೇವಲ ಗುರುಪ್ರಸಾದದಿಂದ, ಶಿಷ್ಯರ ಸರ್ವಸಂಶಯಗಳ ಪರಿಹಾರವು ದೊರೆಯು-ತ್ತದೆಂದು ಹೇಳುವುದಿಲ್ಲ. ಇತರ ಶಾಸ್ತ್ರ ಶ್ರವಣ ಮನನಾದಿ ಪರಿಕರಗಳೆಲ್ಲವಿದ್ದರೂ, ದೊರೆಯದಿರುವ ಫಲವು (ನಿಶ್ಚಯ ಜ್ಞಾನವು), ಗುರುಪ್ರಸಾದದಿಂದ ಮಾತ್ರ ದೊರೆಯುವುದೆಂಬರ್ಥವನ್ನು ಹೇಳುತ್ತದೆ. ಈಗೆಂಬ ಗುರುಪ್ರಸಾದದ ಸ್ಥಾನವನ್ನು *'ಓಂ ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ಓಂ'* ಎಂಬ ಸೂತ್ರದಲ್ಲಿ ಶ್ರೀ ಬಾದರಾಯಣರು ನಿರ್ಣಯಿಸಿದ್ದಾರೆ. ಸೂತ್ರಾರ್ಥವು ಈಗಿದೆ: ಲಿಂಗಭೂಯಸ್ತ್ವಾತ್ —(ಸತ್ಯಕಾಮನ ಚರಿತ್ರೆಯಲ್ಲಿ) ಗುರುಪ್ರಸಾದಕ್ಕೆ ಪ್ರಾಬಲ್ಯ ಜ್ಞಾಪಕ ಬಹುಲಕ್ಷಣ-ಗಳು (ಲಿಂಗಗಳು) ಕಂಡುಬರುವುದರಿಂದ, ತತ್—ಅದೇ (ಗುರುಪ್ರಸಾದವೇ, ಬ್ರಹ್ಮಜ್ಞಾನ ಪ್ರಾಪ್ತಿ ವಿಷಯದಲ್ಲಿ), ಬಲೀಯಃ—ಪ್ರಬಲ ಕಾರಣವೆನಿಸುತ್ತದೆ; ತದಪಿ —ಹಾಗಿದ್ದರೂ ಶ್ರವಣಾದಿಗಳನ್ನು ಆಚರಿಸಲೇಬೇಕು; *'ಹಿ-ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತ್ರವ್ಯೋ ನಿದಿಧ್ಯಾಸಿತವ್ಯಃ'* ಎಂದು ಶ್ರುತಿಯು ಹೇಳುವುದರಿಂದ (ಶ್ರವಣಾದಿಗಳಿಲ್ಲದ ಗುರುಪ್ರಸಾದವು ಜ್ಞಾನಜನಕವಲ್ಲ). *'ಆಚಾರ್ಯವಾನ್ ಪುರುಷೋ ವೇದ' 'ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಃ'* ಇತ್ಯಾದಿ ಪ್ರಮಾಣಗಳು **ಗುರುಪ್ರಸಾದವನ್ನು** ಬ್ರಹ್ಮಜ್ಞಾನ ಕಾರಣಗಳಲ್ಲಿ ಪ್ರಬಲತಮವೆಂದು ಹೇಳುತ್ತವೆ. *'ಬಲೀಯಸ್ತಮ ಗುರುಪ್ರಸಾದ-ರೂಪೇತಿ ಕರ್ತವ್ಯತಾಯುಕ್ತ ಶ್ರವಣಾದ್ಯುಪಾಸಾ **ಗೋಚರಾಯ** ನಮಃ'* ಎಂದು ಶ್ರೀವಾದಿರಾಜಸ್ವಾಮಿಗಳು ತಮ್ಮ ಅಧಿಕರಣ ನಾಮಾವಳಿಯಲ್ಲಿ ಈ ಅಧಿಕರಣಾರ್ಥ-ವನ್ನು ಸಂಗ್ರಸಿ ನಿರೂಪಿಸಿದ್ದಾರೆ.

೭. ಪ್ರಣವಾದ್ಯಶೇಷ ವೈಷ್ಣವ ಮಂತ್ರೋದ್ಧಾರಕಾಣಾಂ, ಸರ್ವದಾ ಸರ್ವ ವೈಷ್ಣವ ಮಂತ್ರ ಜಾಪಕಾನಾಂ, ಸಂಸಿದ್ಧ ಸಪ್ತಕೋಟಿ ಮಹಾಮಂತ್ರಾಣಾಂ.....

**ಪ್ರತಿಪದಾರ್ಥ:** ಪ್ರಣವಾದಿ—ಓಂಕಾರವೇ ಮೊದಲಾದ, ಅಶೇಷ ವೈಷ್ಣವಮಂತ್ರ—ಸಮಸ್ತ ವಿಷ್ಣು ಪ್ರೀತಿಕರವಾದ ಮಂತ್ರಗಳ, ಉದ್ಧಾರಕಾಣಾಂ—ಪ್ರದರ್ಶಕರಾದ, ಸರ್ವದಾ ಸರ್ವ ವೈಷ್ಣವ ಮಂತ್ರ ಜಾಪಕಾನಾಂ—ಸದಾ ಸಕಲ ವೈಷ್ಣವ ಮಂತ್ರಗಳನ್ನು ಜಪಿಸುವವರೂ, ಸಂಸಿದ್ಧ ಸಪ್ತಕೋಟಿ ಮಹಾಮಂತ್ರಾಣಾಂ—ಏಳು ಕೋಟಿ ಮಹಾಮಂತ್ರಗಳ ಸಿದ್ಧಿಯನ್ನು ಪಡೆದಿರುವವರೂ, ಆದ (ಶ್ರೀಮದಾಚಾರ್ಯರ);

**ತಾತ್ಪರ್ಯ:** ಪ್ರಣವಾದಿ 'ಅಷ್ಟಮಹಾಮಂತ್ರ'ಗಳೆಂದು ಪ್ರಸಿದ್ಧವಾದ ಮಂತ್ರಗಳು ವಿಷ್ಣು ಪ್ರಸನ್ನತೆಯನ್ನು ದೊರಕಿಸುವ ಶ್ರೇಷ್ಠ ಸಾಧನಗಳು; ಇವುಗಳ ಉದ್ಧಾರಕರು ಶ್ರೀವಾಯುದೇವರು—ಎಂದರೆ, ಮೂಲತಂತ್ರಸಾರದಿಂದ (ಶ್ರೀಹರಿಯು ಮೂಲರೂಪದಿಂದ ಚತುರ್ಮುಖಿಗೆ ಉಪದೇಶಿಸಿದ ಅತಿ ವಿಸ್ತಾರವಾದ ತಂತ್ರಸಾರದಿಂದ) ಸಕಲಾಭೀಷ್ಟಪ್ರದಗಳಾದ ಕಲ್ಪವೃಕ್ಷದಂತಿರುವ ಕೆಲವು ಮುಖ್ಯ ಭಾಗಗಳನ್ನು ಸಂಗ್ರಸಿ, ತಮ್ಮ 'ತಂತ್ರಸಾರ' ಗ್ರಂಥವನ್ನು ಶ್ರೀಮದ್ವರೂಪದಿಂದ ಪ್ರಕಟಿಸಿದರು. ಸಕಲ ವೈಷ್ಣವ ಮಹಾಮಂತ್ರಗಳನ್ನೂ ದೇವರಹಸ್ಯಗಳಾದ ಏಳು ಕೋಟಿ ಮಹಾಮಂತ್ರಗಳನ್ನು ಸದಾ ಜಪಿಸುತ್ತ ಶ್ರೀವಿಷ್ಣುಪ್ರಸಾದಕ್ಕೆ ಪೂರ್ಣಪಾತ್ರರಾಗಿ ಆ ಮಂತ್ರಗಳ (ವೈಷ್ಣವ ಮಂತ್ರಗಳ) ಪ್ರಭಾವವನ್ನು ಸಜ್ಜನ ಲೋಕಕ್ಕೆ ತಿಳಿಸುತ್ತಾ ನಿದರ್ಶಕರಾಗಿರುವರು—ಶ್ರೀಮದಾಚಾರ್ಯರು.

**ಪ್ರಮೇಯ ವಿವರಣೆ:** (೧) ಪ್ರಣವಾದಿ ಅಷ್ಟ ಮಹಾಮಂತ್ರಗಳು, ಜಪಕ್ರಮ, ಪೂರ್ವಭಾವಿಯಾಗಿ ಆಚರಿಸಬೇಕಾದ ನ್ಯಾಸಾದಿಗಳು ಮೊದಲಾದ ವಿವರಗಳನ್ನು, ತಂತ್ರಸಾರವನ್ನು ಗುರುಮುಖೇನ ಅಭ್ಯಸಿಸಿ ತಿಳಿಯಬೇಕು. ಈ ಮಂತ್ರಗಳ ಜಪದಿಂದ ಸಾಧಿಸಲಾಗುವ ಸಿದ್ಧಿಯು, ಶ್ರೀವಿಷ್ಣುಪ್ರಸಾದರೂಪವಾದುದು. *'ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ'* ಎಂದಂತೆ ಶ್ರೀವಿಷ್ಣುವು ಪ್ರಸನ್ನನಾದರೆ ಅಲಭ್ಯವಾದುದು ಯಾವುದೂ ಇಲ್ಲ—ಇಚ್ಛಿತ ಸರ್ವವನ್ನೂ ಹೊಂದಬಹುದು. ಈ ಮಹಾಸಿದ್ಧಿಯ ಮುಂದೆ ಅಣಿಮಾದಿ ಸಿದ್ಧಿಗಳು ಕ್ಷುದ್ರ (ಅಲ್ಪ)ಗಳಾಗಿರುವುವು. ಅಷ್ಟ ಮಹಾಮಂತ್ರಗಳು ಯಾವುವೆಂದರೆ: (೧) ಪ್ರಣವ (೨) ಭೂಃ-ಭುವಃ-ಸ್ವಃ ಮತ್ತು ಭೂರ್ಭುವಃಸ್ವಃ ಎಂಬ ೪ ವ್ಯಾಹೃತಿಗಳು (೩) ನಾರಾಯಣಾಷ್ಟಾಕ್ಷರ (೪) ವಾಸುದೇವ ದ್ವಾದಶಾಕ್ಷರ (೫) ಗಾಯತ್ರೀ (೨೪ ಅಕ್ಷರ) (೬) ಮಾತೃಕಾ (೭) ಪುರುಷಸೂಕ್ತ (೮) ವಿಷ್ಣುಷಡಕ್ಷರ, ಇವುಗಳ ವಿವರಣೆಯನ್ನು ವಾಕ್ಯ (೧), ಪ್ರ.ವಿ. (೫)ರಲ್ಲಿ ಕಾಣಬಹುದು. ಶ್ರೀಮದಾಚಾರ್ಯರು ತಮ್ಮ ತಂತ್ರಸಾರದಲ್ಲಿ ಅಷ್ಟಮಹಾಮಂತ್ರಗಳ-

ಲ್ಲದೇ ವರಾಹ, ನೃಸಿಂಹಾದಿ ಅನೇಕ ಭಗವದ್ರೂಪಗಳ ಉಪಾಸನಾಮಂತ್ರಗಳನ್ನೂ ನಿರೂಪಿಸಿದ್ದಾರೆ. ಮೂಲತಂತ್ರಸಾರದಲ್ಲಿ ದೇವರಹಸ್ಯಗಳಾದ ಅಸಂಖ್ಯ ವೈಷ್ಣವ ಮಂತ್ರಗಳಿದ್ದು, ಅವೆಲ್ಲವುಗಳ ಸಿದ್ಧಿಯುಳ್ಳವರು ಶ್ರೀವಾಯುದೇವರು. ವೈಷ್ಣವ ಮಂತ್ರಗಳೆಂದರೆ, ವಿಷ್ಣುಭಕ್ತರಿಂದ (ಸಕಲ ಸದ್ಭಕ್ತರಿಂದ) ಸೇವ್ಯವಾದವುಗಳು—ವಿಷ್ಣುಪ್ರಸನ್ನತೆಯನ್ನು ದೊರಕಿಸುವ ಸಾಮರ್ಥ್ಯವುಳ್ಳವುಗಳು—ವಿಷ್ಣು ಮಹಿಮೆಗಳನ್ನು ಪ್ರತಿಪಾದಿಸತಕ್ಕವುಗಳು—ವಿಷ್ಣು ಸಾಕ್ಷಾತ್ಕಾರವನ್ನು ದೊರಕಿಸುವವುಗಳು. ಇವು-ಗಳನ್ನು ಸರ್ವದಾ ಜಪಿಸುವ ಅಧಿಕಾರವು ಶ್ರೀವಾಯುದೇವರಿಗೆ ಮಾತ್ರ.

(೨) ಸರ್ವದಾ ಸರ್ವ ಮಂತ್ರಗಳನ್ನು ಜಪಿಸುವರೆಂಬುದನ್ನು ಅಸಂಭಾವ್ಯವೆಂದು ಶಂಕಿಸಲಾಗದು. 'ಅಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ' (ದ್ವಾದಶ-ಸ್ತೋತ್ರ) ಎಂಬುದಾಗಿ ಶ್ರೀವಾಸುದೇವನ ಕಂಠದ ಮಹಿಮೆಯು ವರ್ಣಿತವಾಗಿದೆ. ಪ್ರತಿಕ್ಷಣದಲ್ಲಿ ಅನಂತವೇದಗಳು ಏಕದಾ ಉಚ್ಚರಿತವಾಗುತ್ತಿರುವ ಅತ್ಯದ್ಭುತ ಕಂಠ-ವನ್ನು ಚಿಂತಿಸುತ್ತೇನೆಂದು ಶ್ರೀಮದ್ ಆಚಾರ್ಯರು ಹೇಳಿರುವರು. ಏಕದಾ ಅನಂತ-ವೇದಗಳನ್ನು ಉಚ್ಚರಿಸುವುದು ಸಾಧ್ಯವೇ ಮತ್ತು ಈ ವಿಧ ನಿಷ್ಪ್ರಯೋಜನ ವ್ಯಾಪಾರ-ದಲ್ಲಿ ಶ್ರೀಹರಿಯು ತೊಡಗಿರುವುದೇಕೆ—ಎಂಬ ಮುಂತಾದ ಸಂಶಯಗಳಿಗೆ ಯುಕ್ತಿ ಯುಕ್ತವಾದ ಪರಿಹಾರಗಳನ್ನು, ಜ್ಞಾನಿಗಳ ವ್ಯಾಖ್ಯಾನಗಳಲ್ಲಿ ಕಾಣುತ್ತೇವೆ. ಈ ಪ್ರಕಾರದ ಅದ್ಭುತ ಮಹಿಮೆಯ ಸಾದೃಶ್ಯವನ್ನು ಮುಖ್ಯ ಪ್ರತಿಬಿಂಬರಾದ ಶ್ರೀವಾಯು-ದೇವರಲ್ಲಿ ಮಾತ್ರ ಕಾಣಬೇಕಲ್ಲದೇ ಬೇರೆಲ್ಲಿ ಕಾಣಲಾದೀತು! ಇವರು ಸರ್ವದಾ ಸರ್ವವೈಷ್ಣವ ಮಂತ್ರಗಳನ್ನು ಜಪಿಸುವುದು ಸತ್ಯ—ಅದು ಅಲ್ಪ ಮಾನವರ ಕಲ್ಪನೆಗೆ ನಿಲುಕದು. *'ನಿಜಹೃತ್ಕಮಲೇಽತಿ ನಿರ್ಮಲೇ ಸತತಂ ಸಾಧು ನಿಶಾಮಯನ್ನಪಿ। ಅವಲೋಕ್ಯ ಪುನಃ ಪುನರ್ನವಂ ತಮಸೌ ವಿಸ್ಮಿತ ಇತ್ಯಚಿಂತಯತ್॥'* ಮತ್ತು *'ನ ಹಿ ಹರಿಂ ಸತತಂ ನ ನಮತ್ಯಸೌ ನ ಚ ನ ಪಶ್ಯತಿ ನಾಪಿ ನ ವಂದತೇ। ಅಪಿ ತಥೇತಿ ವಿಧಾಯ ವಿಶೇಷತಃ ಸ ನನು ಸಾಧುಜನಾನ್ ಸಮಶಿಕ್ಷಯತ್॥'* ಎಂಬ (ಶ್ರೀ ಸುಮಧ್ವವಿಜಯದ) ಎರಡು ಶ್ಲೋಕಗಳು ಪ್ರಸಕ್ತ ಪ್ರಮೇಯದಲ್ಲಡಕವಾದ ವಾಯು-ದೇವರ ಮಹಿಮೆಯನ್ನು ಹೇಳುತ್ತವೆ. ಈ ಶ್ಲೋಕಗಳ ಭಾವಾರ್ಥವು ಹೀಗಿದೆ: *'ಪರಮಾತ್ಮನೇ ಸತತಮೇಕರೂಪಿಣೇ ದಶರೂಪಿಣೇ ಶತಸಹಸ್ರರೂಪಿಣೇ। ಅವಿ-ಕಾರಿಣೇ ಸ್ಫುಟಮನಂತ ರೂಪಿಣೇ ಸುಖಚಿತ್ಸಮಸ್ತ ತನವೇ ನಮೋ ನಮಃ॥'* ಎಂದು ಹೇಳಲಾಗುವ ಪರಮಾತ್ಮನ ಅನಂತ ರೂಪಗಳನ್ನು ಶ್ರುತಿಸಿದ್ಧಗಳಾದ ಮತ್ಸ್ಯಾದಿ ದಶ, ನಾರಾಯಣಾದಿ ಶತ, ವಿಶ್ವಾದಿ ಸಹಸ್ರ, ಅಮಿತಾದಿ ಅನಂತ ರೂಪಗಳ ವ್ಯೂಹಗಳನ್ನು ಸದಾ ಸ್ಫುಟವಾಗಿ ಸಚ್ಚಿದಾನಂದ ರೂಪಗಳನ್ನಾಗಿಯೇ ಅಪರೋಕ್ಷದಲ್ಲಿ ಕಾಣುತ್ತಾರೆ. ಪರಮ ಪರಿಶುದ್ಧವಾದ ತಮ್ಮ ಹೃತ್ಕಮಲದಲ್ಲಿ ಸರ್ವದಾ ಅನಂತ-

ರೂಪಗಳನ್ನು ಚೆನ್ನಾಗಿ ಕಾಣುತ್ತಿದ್ದರೂ, ಸಮ್ಮುಖದಲ್ಲಿದ್ದ ಶ್ರೀವೇದವ್ಯಾಸ ರೂಪದಲ್ಲಿ ಪುನಃ ಪುನಃ ಹೊಸ ರೂಪಗಳನ್ನು ಕಾಣುತ್ತಾ ಆಶ್ಚರ್ಯದಿಂದ ಶ್ರೀಹರಿಯ ರೂಪ-ಗಳನ್ನು ಚಿಂತಿಸಿದರು; ಈ ಬಾಲಕನು (ವಾಸುದೇವನು—ಪೂರ್ಣಪ್ರಜ್ಞರಿಗೆ ತಂದೆ-ಯಿಟ್ಟ ಹೆಸರು) ಶ್ರೀಹರಿಯನ್ನು ನಿರಂತರ ನಮಸ್ಕರಿಸುವುದಿಲ್ಲವೆಂದಲ್ಲ—ಸರ್ವದಾ ನಮಸ್ಕರಿಸುತ್ತಾನೆ; ಶ್ರೀಹರಿಯನ್ನು ಸದಾ ನೋಡುವುದಿಲ್ಲವೆಂದಲ್ಲ—ಸರ್ವದಾ ಪ್ರತ್ಯಕ್ಷ ವಾಗಿ ನೋಡುತ್ತಿರುವನು; ಸದಾ ಸ್ತುತಿಸುವುದಿಲ್ಲವೆಂದಲ್ಲ—ನಿರಂತರ ಸ್ತುತಿಸು-ತ್ತಾನೆ; ..ೀಗಿದ್ದರೂ ಸರ್ವಸಮಕ್ಷವಾಗಿ ಕಾಲ ವಿಶೇಷಗಳಲ್ಲಿ ನಮಸ್ಕಾರಾದಿಗಳನ್ನು ಮಾಡಿ, ಮುಕ್ತಿಯೋಗ್ಯ ಜೀವರಿಗೆ ಸನ್ಮಾರ್ಗ ಶಿಕ್ಷಕನಾಗುತ್ತಾನೆ.

(೩) ಒಂದೊಂದು ಮಂತ್ರ ಸಿದ್ಧಿಯನ್ನು ಪಡೆದ ಯೋಗಿಗಳ ಅತಿಮಾನುಷ ಕೃತಿಗಳನ್ನು ಕಂಡು ಆಶ್ಚರ್ಯದಿಂದ ಮುಗ್ಧರಾಗುವ ಅಲ್ಪರು ಒಂದೊಂದು ವೈಷ್ಣವ ಮಹಾಮಂತ್ರದಿಂದ ಲಭಿಸುವ ಸಿದ್ಧಿಯ ಮ಼ುಮೆಯನ್ನು ಕಲ್ಪಿಸಿಕೊಳ್ಳಲು ಅಸಮರ್ಥರು. ..ೀಗಿರಲು, ಮಂತ್ರಪ್ರತಿಪಾದ್ಯ ಭಗವನ್ಮೂರ್ತಿಗಳು ಅವುಗಳ ವಿಶಿಷ್ಟ ಮ಼ುಮೆಗಳು ಹಾಗಿರಲಿ, ಆ ಮಂತ್ರಗಳ ಹೆಸರುಗಳನ್ನು ಕೇಳಿ ಅರಿಯದ ಅಸ್ಮದಾದಿ-ಗಳು ಸಪ್ತಕೋಟಿ ವೈಷ್ಣವ ಮಹಾಮಂತ್ರಗಳ ಸಿದ್ಧಿಯನ್ನು ಪಡೆದವರ ಮಹಾ-ಮ಼ುಮೆಯನ್ನು ತಿಳಿಯಲು ಶಕ್ಯವೇ; ದುಸ್ಸಾಧ್ಯವೇ ಸರಿ. ಆದ್ದರಿಂದ ಶ್ರೀವಾಯು-ದೇವರನ್ನು ಅನಂತ ಮ಼ುಮೆಗಳುಳ್ಳ ಮಹಾತ್ಮರೆಂದೂ, ರುದ್ರಾದಿ ದೇವತೆಗಳಿಂದ ಸಹ ಹೇಳಿ ಮುಗಿಸಲಾಗದ ಮ಼ುಮೆಗಳುಳ್ಳವರೆಂದೂ ತಿಳಿದು, ಆಶ್ಚರ್ಯಶಬ್ದ-ವಾಚ್ಯನಾದ ಶ್ರೀಹರಿಯ ನಂತರ ಇವರೂ 'ಆಶ್ಚರ್ಯ'ರೆಂದೇ ಭಾವಿಸಬೇಕಲ್ಲದೇ ಗತ್ಯಂತರವಿಲ್ಲ.

೮. ಭಗವತಿ ಭಕ್ತ್ಯತಿಶಯೇನ ಭಗವದುಪಾಸನಾರ್ಥಂ ಸ್ವೇಚ್ಛಯಾ ಗೃಹೀತ-ರೂಪಾಣಾಂ.....

ಪ್ರತಿಪದಾರ್ಥ: ಭಗವತಿ—ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯಲ್ಲಿ, ಭಕ್ತ್ಯತಿ-ಶಯೇನ—ಭಕ್ತಿಯ ಆಧಿಕ್ಯದಿಂದ, ಭಗವದುಪಾಸನಾರ್ಥಂ—ಭಗವಂತನನ್ನು ಧ್ಯಾನಿಸ-ಲಿಕ್ಕಾಗಿ, ಸ್ವೇಚ್ಛಯಾ ಗೃೀತ—ಇಚ್ಛಾನುಸಾರ ಸ್ವೀಕರಿಸಲ್ಪಟ್ಟ, ರೂಪಾಣಾಂ—ಭಗವನ್ಮೂರ್ತಿಗಳುಳ್ಳವರಾದ;

ತಾತ್ಪರ್ಯ: ನಿರಂತರ ಶ್ರೀಹರಿಧ್ಯಾನದಿಂದ ಉಕ್ಕಿಹರಿಯುವ ತಮ್ಮ ಭಕ್ತಿಗೆ ಮೆಚ್ಚಿ ..ಡಿಯುವ ಮತ್ತು ಧ್ಯಾನದಿಂದಾಗುವ ಆನಂದವನ್ನು ವೃದ್ಧಿಗೊಳಿಸುವ ವಿಶಿಷ್ಟ ಭಗವನ್ಮೂರ್ತಿಗಳನ್ನು, ಸ್ವೇಚ್ಛಾನುಸಾರ—ಧ್ಯಾನಾರ್ಥವಾಗಿ ಸ್ವೀಕರಿಸುವ ಮಹಾತ್ಮರು, ಶ್ರೀಮದಾನಂದತೀರ್ಥರು.

ಪ್ರಮೇಯ ವಿವರಣೆ: ಯದ್ಯಪಿ, ಶ್ರೀವಾಯುದೇವರು ಯಾವುದೊಂದು ಭಗವದ್ರೂಪದಲ್ಲಿ ಅನಂತಗುಣಗಳನ್ನು ಚಿಂತಿಸುವ ಸಾಮರ್ಥ್ಯವುಳ್ಳವರು. ಆದರೂ ಗುಣ (ಮ್ಹಮಾ) ಧ್ಯಾನದಿಂದ ಅಭಿವೃದ್ಧಿಯಾಗುವ ಭಕ್ತಿಯನ್ನು, ಬಹುರೂಪಗಳನ್ನು ಏಕಕಾಲದಲ್ಲಿ ಧ್ಯಾನಿಸುವುದರಿಂದ, ತಣಿಸುವ ಮಹಾಪ್ರಯತ್ನದಲ್ಲಿ ನಿರಂತರ ತೊಡಗಿರುವ ಮಹಾತ್ಮರವರು. ಅವರು ಕ್ಷಣಕ್ಷಣಕ್ಕೆ ಅಭಿವೃದ್ಧವಾಗುವ ಭಕ್ತಿಯುಳ್ಳವರು—ಮುಕ್ತಿಪರ್ಯಂತವಾಗಿ ಈ ಪ್ರಕಾರ ವೃದ್ಧಿಗೊಳ್ಳುವ ಮಹಾಭಕ್ತಿಯುತರು. ಇದನ್ನೇ ಹನುಮದವತಾರದಲ್ಲಿ ಸಹ ವರವನ್ನಾಗಿ ಶ್ರೀರಾಮಚಂದ್ರನಿಂದ ಪಡೆದಿರುವರು. *'ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ ತ್ವಯೀಶ ಮೇ ಹ್ರಾಸವಿವರ್ಜಿತಾ ಸದಾ। ಅನುಗ್ರಹಸ್ತೇ ಮಯಿ ಚೈವಮೇವ....'* (ಭಾ.ತಾ.). ಈ ವಾಕ್ಯವು, ಆಂಜನೇಯನ ಸೇವೆಗೆ ಪರಮಪ್ರಸನ್ನನಾದ ಶ್ರೀರಾಮನು, ವರವನ್ನು ಬೇಡಿಕೊಳ್ಳೆಂದರೆ, ಉಪಾಧಿ ನಿಮಿತ್ತವಲ್ಲದ, ಹ್ರಾಸವಿಲ್ಲದ, ಕ್ಷಣ ಕ್ಷಣಕ್ಕೆ ಅಭಿವೃದ್ಧಿಯಾಗುವ ಭಕ್ತಿಯನ್ನು ಕೇಳಿಕೊಂಡನೆಂದು ಹೇಳುತ್ತದೆ.

**೬. ತತ್ರ ತತ್ರ ಪೃಥಕ್ ಪೃಥಕ್ ಭಗವತಃ ಅನಂತರೂಪೇಷು ಪೃಥಕ್ ಪೃಥಕ್ ವೇದೋಕ್ತ ತದನುಕ್ತಭಾರತೋಕ್ತ, ತದನುಕ್ತಸಂಪ್ರದಾಯಾಗತ-ಸ್ವೇತರಸ್ವಾಭಿನ್ನತಯಾಪಿ ಅಶೇಷಶಕ್ತಿವಿಶೇಷಾಭ್ಯಾಂ ಪೃಥಗ್ವ್ಯವಹಾರ ವಿಷಯ ಸರ್ವ ಸಾಮರ್ಥ್ಯೋಪೇತ-ನಿರವಧಿಕಾನಂತಾನವದ್ಯಕಲ್ಯಾಣಗುಣಪರಿಪೂರ್ಣ ಅನಂತಗುಣೋಪಸಂಹರ್ತ್ರೂಣಾಂ.....**

ಪ್ರತಿಪದಾರ್ಥ: ತತ್ರ ತತ್ರ—ಧ್ಯಾನಾರ್ಥನಾಗಿ ಸ್ವೀಕರಿಸಿದ ಭಗವಂತನ ರೂಪಗಳಲ್ಲಿ, ಪೃಥಕ್ ಪೃಥಕ್—ಪ್ರಪ್ರತ್ಯೇಕವಾಗಿ (ಒಂದೊಂದು ರೂಪದಲ್ಲಿಯೂ) ಇರುವ, ಭಗವತಃ—ಭಗವಂತನ, ಅನಂತರೂಪೇಷು—ಅನಂತರೂಪಗಳಲ್ಲಿ, ಪೃಥಕ್ ಪೃಥಕ್ ಒಂದೊಂದರಲ್ಲಿಯೂ, ವೇದೋಕ್ತ ತದನುಕ್ತ ಭಾರತೋಕ್ತ—ವೇದಗಳಲ್ಲಿ ಹೇಳಿರುವ ಮತ್ತು ವೇದಗಳಲ್ಲಿ ಹೇಳದೇ ಭಾರತದಲ್ಲಿ ಹೇಳಲ್ಪಟ್ಟಿರುವ, ತದನುಕ್ತ—ಭಾರತದಲ್ಲಿ ಸಹ ಹೇಳದಿರುವ, ಸಂಪ್ರದಾಯಗತ—ಜ್ಞಾನಿ ಸಂಪ್ರದಾಯ ಪ್ರಾಪ್ತವಾದ, ಸ್ವೇತರಸ್ವಾಭಿನ್ನತಯಾ—ತನ್ನಿಂದ ಭಿನ್ನವೂ ಅಭಿನ್ನವೂ ಇದ್ದಂತೆ, ಅಶೇಷ ಶಕ್ತಿವಿಶೇಷಾಭ್ಯಾಂ—(ಸರ್ವಶಕ್ತಿ) ಅಚಿಂತ್ಯಶಕ್ತಿ ಮತ್ತು 'ವಿಶೇಷ'ಗಳೆಂಬ ಎರಡರ ಪ್ರಭಾವದಿಂದ, ಪೃಥಗ್ವ್ಯವಹಾರ ವಿಷಯ—ಪ್ರತ್ಯೇಕ ವ್ಯವಹಾರಕ್ಕೆ ವಿಷಯವಾಗುವ (ಹೇಳಲವಕಾಶವಿರುವ), ಸರ್ವಸಾಮರ್ಥ್ಯೋಪೇತ—ಸರ್ವಶಕ್ತಿ ಸ್ತತವಾದ, ನಿರವಧಿಕಾನಂತಾನವದ್ಯ—ಅವಧಿರ್ರತವೂ ಅನಂತವೂ (ನಿತ್ಯವೂ, ಅಸಂಖ್ಯವೂ) ನಿರ್ದುಷ್ಟವೂ ಆದ, ಕಲ್ಯಾಣಗುಣಪರಿಪೂರ್ಣಾನಂತ ಗುಣೋಪಸಂಹರ್ತ್ರೂಣಾಂ—ಶುಭಗುಣ ಪರಿಪೂರ್ಣನಾದ ಶ್ರೀಹರಿಯ ಅನಂತಗುಣಗಳನ್ನು ಉಪಸಂಹಾರ ಮಾಡುವವರಾದ....

ತಾತ್ಪರ್ಯ: ಶ್ರೀಮದಾನಂದತೀರ್ಥರು ಚಿಂತಿಸುವ ಬಹು ಭಗವದ್ರೂಪಗಳಲ್ಲಿ ಒಂದೊಂದು ಅನಂತ ರೂಪಗಳುಳ್ಳದ್ದು; ಅವುಗಳಲ್ಲಿ ಒಂದೊಂದು ರೂಪವೂ, ವೇದದಲ್ಲಿ ಹೇಳಿರುವ, ಅಲ್ಲಿ ಹೇಳದೇ ಭಾರತದಲ್ಲಿ ಹೇಳಿರುವ, ಮತ್ತು ಅಲ್ಲಿಯೂ ಹೇಳಲ್ಪಡದಿರುವ ಅನಂತ ಕಲ್ಯಾಣಗುಣಗಳಿಂದ ಪೂರ್ಣವಾದುದು. ಅಲ್ಪತ್ವ, ಅಪೂರ್ಣತ್ವಾದಿ ಸರ್ವದೋಷಗಳಿಂದ ರಹಿತವಾದುದು. ಆ ಗುಣಗಳು ಒಂದೊಂದೂ ಭಗವಂತನಿಂದ ಅಭಿನ್ನವೇ—ಎಂದರೆ, ಆತನ ಸ್ವರೂಪವೇ ಆದುದು—ಪರಮಾತ್ಮನು ಸರ್ವಗುಣ ಸ್ವರೂಪನೇ ಆಗಿದ್ದಾನೆ; ಹೀಗಿದ್ದರೂ, ಆ ಗುಣಗಳು (ಜ್ಞಾನ-ಆನಂದಾದಿಗಳು) ಭಗವಂತನಿಂದ ಭಿನ್ನವಾಗಿದ್ದಂತೆ (ಭಗವಂತನ ಜ್ಞಾನ, ಭಗವಂತನ ಆನಂದ, ಭಗವಂತನ ಸ್ವಾತಂತ್ರ್ಯ ಇತ್ಯಾದಿ) ವ್ಯವಹರಿಸಲೂಬಹುದು. ಭಗವಂತನ ಸ್ವರೂಪದಿಂದ ಅಭಿನ್ನವೇ ಆದ 'ವಿಶೇಷ'ವೆಂಬ ಧರ್ಮವೂ, ಅಚಿಂತ್ಯಶಕ್ತಿಯೂ, ಅಭೇದವಿದ್ದರೂ ಭೇದ ವ್ಯವಹಾರಕ್ಕೆ ಅವಕಾಶವನ್ನು ಕೊಡುತ್ತವೆ. ಶ್ರೀವಾಯುದೇವರು, ಪ್ರತಿಯೊಂದು ಭಗವದ್ರೂಪವನ್ನು ಅದರ ಅನಂತ ಕಲ್ಯಾಣಗುಣಗಳ ಸಮೇತ ಏಕಕಾಲದಲ್ಲಿ ಚಿಂತಿಸಿ ಧ್ಯಾನಿಸುತ್ತಾರೆ. ಇದನ್ನೇ ಗುಣೋಪಸಂಹಾರ ಪೂರ್ವಕ ಧ್ಯಾನವೆನ್ನುವರು. ವಾಕ್ಯ (೧), ಪ್ರ.ವಿ.(೪)ನ್ನು ಇಲ್ಲಿ ನೋಡಬೇಕು.

ಪ್ರಮೇಯ ವಿವರಣೆ: (೧) ಭಗವಂತನು ಷಡ್ಗುಣೈಶ್ವರ್ಯಪೂರ್ಣನು. ಆದ್ದರಿಂದ 'ಭಗವಾನ್' ಎಂದು ಕರೆಯಲ್ಪಡುತ್ತಾನೆ. *'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ। ಜ್ಞಾನ ವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ॥'* ಪೂರ್ಣಗಳಾದ ಐಶ್ವರ್ಯ, ವೀರ್ಯ, ಯಶಸ್ಸು, ಕಾಂತಿ, ಜ್ಞಾನ, ವಿಜ್ಞಾನಗಳೆಂಬ ಆರು ಪ್ರಧಾನಗುಣಗಳು 'ಭಗ'ವೆಂದು ಹೇಳಲ್ಪಡುತ್ತವೆ. ಇವು ಆರು ಯಾರಲ್ಲಿವೆಯೋ ಅವನು 'ಭಗವಾನ್'.

(೨) ಭಗವಂತನ ಪ್ರತಿಯೊಂದು ರೂಪದಲ್ಲಿ ಅನಂತ ರೂಪಗಳಿವೆ. ಈ ಪ್ರಮೇಯವನ್ನು ಶ್ರೀಜಗನ್ನಾಥದಾಸರು ಹೀಗೆ ನಿರೂಪಿಸಿದ್ದಾರೆ:

*ಒಂದು ರೂಪದೊಳನಂತ ರೂಪಗಳು*
*ಪೊಂದಿಪ್ಪವು ಗುಣ ಗಣ ಸಹಿತ*
*ಹಿಂದೆ ಮುಂದೆ ಎಂದೆಂದಿಗೆ ಶ್ರೀಗೋ-*
*ವಿಂದಗೆ ಸರಿಮಿಗಿಲಿಲ್ಲೆಂತೆಂಬುದೆ ಫಲವಿದು ಬಾಳ್ದುದಕೆ.....*

ಈ ವಿಧ ಅದ್ಭುತ ಮಹಿಮನು ಶ್ರೀಹರಿ. ರಾಮರೂಪದಲ್ಲಿ ಕೃಷ್ಣಾದಿ ರೂಪಗಳೆಲ್ಲವೂ ಇವೆ. ಕೃಷ್ಣರೂಪದಲ್ಲಿ ರಾಮಾದಿ ರೂಪಗಳಿವೆ. ಸ್ವೇಚ್ಛಾನುಸಾರ ಒಂದು ರೂಪವನ್ನು ಜಗತ್ತಿಗೆ ತೋರಗೊಡುತ್ತಾನೆ. ಕೃಷ್ಣರೂಪದಲ್ಲಿ ರಾಮರೂಪವನ್ನು ಜಾಂಬವಂತನಿಗೆ ತೋರಿದ ಮುಂತಾದ ಪುರಾಣ ಪ್ರಸಿದ್ಧ ಶ್ರೀಹರಿಲೀಲೆಗಳು ಈ

ಪ್ರಮೇಯವನ್ನು ದೃಷ್ಟಾಂತೀಕರಿಸುತ್ತವೆ. ಒಂದೊಂದು ರೂಪವೂ ಅನಂತಗುಣ ಪೂರ್ಣವಾದುದು. *'ಪ್ರತ್ಯೇಕಂ ತು ಗುಣಾಃ ಸರ್ವೇಽಪ್ಯನಂತಾನಂತಧಾ ಮತಾಃ। ಪ್ರತ್ಯೇಕಂ ತು ಗುಣಾಃ ಸರ್ವೇ ಸದಾ ಸರ್ವಗುಣಾತ್ಮಕಾಃ। ಗುಣಾಂತರ ವಿಶೇಷಾಶ್ಚ ಯಥಾ ರೂಪಾಣಿ ತೇ ಗುಣಾಃ॥ ಸಮಸ್ತ ಗುಣಪೂರ್ಣಾಶ್ಚ ಕ್ರಿಯಾ ರೂಪಾದಿ-ಭಿರ್ಯುತಾಃ। ಗುಣಾನಾಂ ಯೇ ಗುಣಾಸ್ತೇಽಪಿ ಗುಣಪೂರ್ಣಾಃ ಪುನಸ್ತಥಾ। ಪರಸ್ಪರಮಭಿನ್ನಾಶ್ಚ ಧರ್ಮಾಃ ಸರ್ವೇಽಪಿ ತದ್ಗತಾಃ। ತದಭಿನ್ನಾ ಗುಣಾ ನಿತ್ಯಮಪಿ ಸರ್ವೇ ವಿಶೇಷತಃ॥'* (ಸ.ರ.ಮಾ) ಈ ಶ್ಲೋಕಗಳಲ್ಲಿ ಈ ಪ್ರಮೇಯದ ಸಂಗ್ರಹ-ವಿದೆ. ಇವುಗಳ ಭಾವಾರ್ಥವೇನೆಂದರೆ: ಶ್ರೀಹರಿಯ ಅನಂತ ರೂಪಗಳಲ್ಲಿ ಒಂದೊಂದೂ ಅನಂತಗುಣ ಪೂರ್ಣವಾದುದು; ಒಂದೊಂದು ಗುಣವೂ (ಪ್ರತ್ಯೇಕ-ವಾಗಿ) ಅನಂತವಾದುದು; ಒಂದೊಂದು ಗುಣವೂ ಸರ್ವಗುಣಾತ್ಮಕವೂ ಆದುದು— (ಜ್ಞಾನದಲ್ಲಿ ಆನಂದಾದಿಗಳೂ, ಆನಂದದಲ್ಲಿ ಜ್ಞಾನಾದಿಗಳೂ ಇರುತ್ತವೆಂದರ್ಥ); ರೂಪಗಳಂತೆ ಗುಣಗಳೂ ಅನಂತವೇ; ಎಲ್ಲ ರೂಪಗಳು, ಗುಣಾತ್ಮಕವೂ ಕ್ರಿಯಾತ್ಮಕವೂ ಆಗಿವೆ; ಗುಣ ವಿಶೇಷಗಳು (ನಾನಾ ಪ್ರಕಾರಗಳು) ಪುನಃ ಗುಣ-ಪೂರ್ಣಗಳೇ; ಅಲ್ಲದೇ, ರೂಪ-ಗುಣ-ಕ್ರಿಯೆಗಳು ಪರಸ್ಪರ ಅಭಿನ್ನಗಳಾದರೂ, 'ವಿಶೇಷ' ಬಲದಿಂದ ಭಿನ್ನ ವ್ಯವಹಾರಕ್ಕೆ ಒಳಪಡುತ್ತವೆ. ಇದನ್ನೇ 'ಎಲ್ಲಿ ಹರಿರೂಪ ಮತ್ತಲ್ಲಿ ಗುಣಕ್ರಿಯೆಗಳು। ಅಲ್ಲೆ ಗುಣರೂಪ ಕ್ರಿಯೆಗಳು। ಕ್ರಿಯೆಗಳು ಗುಣರೂಪ ಬಲ್ಲವನೆ ಜ್ಞಾನಿ ಜಗದೊಳು' (ತತ್ವಸುವ್ವಾಲಿ) ಈ ವಿಚಿತ್ರವನ್ನು ಬಲ್ಲವನೇ ಜ್ಞಾನಿಯು ಎಂದೂ ಹೇಳಲಾಗಿದೆ.

(೨) *'ವೇದೋಕ್ತ ತದನುಕ್ತ ಭಾರತೋಕ್ತ'* ಎಂಬಲ್ಲಿ ಅಡಗಿರುವ ಪ್ರಮೇಯವು ಬಹು ಪಂಡಿತ ವಿಮರ್ಶೆಗಳಿಗೊಳಪಟ್ಟ ಅಂಶಗಳುಳ್ಳದ್ದು. ಅವುಗಳ ಸಾರವನ್ನು ೀಗೆ ಸಂಗ್ರಸಬಹುದು: ವೇದಗಳು ಪರಮಾತ್ಮನ ಅನಂತಗುಣಗಳನ್ನು ನಿರೂಪಿಸಲು ಪ್ರವೃತ್ತವಾಗಿವೆ. ಅಲ್ಲಿಲ್ಲದ ಗುಣ ನಿರೂಪಣೆಯು ಭಾರತದಲ್ಲಿರಲು ಸಾಧ್ಯವೇ ಎಂಬುದು ಸಂಶಯ. ವೇದಾಭಿಮಾನಿಯು ಶ್ರೀಮಹಾಲಕ್ಷ್ಮೀದೇವಿಯು. ಆಕೆಯೂ ಪರಮಾತ್ಮನ ಮ್ಹಮೆಗಳನ್ನು (ಗುಣಗಳನ್ನು) ಪೂರ್ಣವಾಗಿ ತಿಳಿಯಳೆಂಬುದು ಅನೇಕ ಸ್ಪಷ್ಟ ಪ್ರಮಾಣಗಳಿಂದ ಸಿದ್ಧವಾಗಿದೆ. *'ಸರ್ವದೇವಗಣಾಚಿಂತ್ಯ ಗುಣ-ಪೂರ್ಣಾ ಸದಾ ರಮಾ'* ಬ್ರಹ್ಮಾದಿ ದೇವಗಣದಿಂದ ಅಚಿಂತ್ಯವಾದ ಗುಣಗಳಿಂದ ಪೂರ್ಣಳಾದ ರಮಾದೇವಿಯು *'ಕ್ಷಣೇಕ್ಷಣೇ ನವ ನವ ಸುವಿಶೇಷೋಪಲಂಭತಃ। ತತ್ತತ್ಕಾಲೇ ಗಾಹಮಾನಾ ಕೌತೂಹಲ ಮಹಾರ್ಣವೇ। ಪರಮಾನಂದ ಸಂದೋಹ-ಸಾಂದ್ರಾ ಧ್ಯಾಯತಿ ಸಾ ಪುನಃ। ಪುನರಾಶ್ಚರ್ಯ ಸಂಯುಕ್ತಾ ಪುನರದ್ಭುತದರ್ಶನಾತ್।*

*ವಿಷ್ಣೋರ್ಗುಣಾಂಶಲೇಶಂ ವಾ ನ ಜಾನಾತಿ ತಥಾಪಿ ತು।'* ಎಂದು (ಸ.ರ.ಮಾ.) ಹೇಳುವಂತೆ, 'ಬ್ರಹ್ಮಾದಿಗಳಿಂದ ಸಹ ಅಚಿಂತ್ಯವಾದ ಮಹಾಜ್ಞಾನವುಳ್ಳ ರಮಾ-ದೇವಿಯು ಪರಮಾತ್ಮನ ಗುಣಧ್ಯಾನದಲ್ಲಿ ತೊಡಗಿ ಪ್ರತಿಕ್ಷಣದಲ್ಲಿ ಹೊಸ ಹೊಸ ವಿಶೇಷಗಳನ್ನು ಕಾಣುತ್ತಾಳೆ; ಆಗ ಆಶ್ಚರ್ಯಸಾಗರದಲ್ಲಿ ಮುಳುಗಿ ಪರಮಾನಂದ-ಸಂದೋಹ ಸಾಂದ್ರಳಾಗಿ (ಆನಂದದ ಗಟ್ಟಿಯಂತೆ—ಆನಂದದ ಮೂರ್ತಿಯಂತೆ) ಇರುತ್ತ, ಪುನಃ ಧ್ಯಾನಿಸುತ್ತಾಳೆ; ಪುನಃ ಹೊಸ ಅದ್ಭುತಗಳನ್ನು ಕಂಡು ಆಶ್ಚರ್ಯಮಗ್ನ-ಳಾಗುತ್ತಾಳೆ; ರಮಾದೇವಿಯು ಗುಣಪೂರ್ಣನಾದ ಶ್ರೀಹರಿಯ ಗುಣಗಳ (ಮತ್ತು ಯಾವುದೊಂದು ಗುಣದ) ಅಂಶದ ಲೇಶವನ್ನು (ಅತ್ಯಲ್ಪ ಭಾಗವನ್ನು) ಸಹ ತಿಳಿಯುವುದಿಲ್ಲ.' ಇದರಿಂದ ಶ್ರೀಹರಿಯ ಗುಣಾನಂತ್ಯವು ರಮಾ ಬ್ರಹ್ಮಾದಿಗಳ ಕಲ್ಪನೆಗೆ ಸಹ ನಿಲುಕುವುದಲ್ಲವೆಂದು ಸಿದ್ಧವಾಗುತ್ತದೆ. ಭಾರತ ಕರ್ತೃಗಳಾದರೋ ಸಾಕ್ಷಾನ್ನಾರಾಯಣಾವತಾರರಾದ ಶ್ರೀವೇದವ್ಯಾಸರು. ಲಕ್ಷ್ಮೀಜ್ಞಾನದಿಂದ ಅನಂತ-ಮಡಿ ಅಧಿಕವಾದ ಜ್ಞಾನವುಳ್ಳ ಈ ಸರ್ವಜ್ಞರು, ವೇದಗಳಲ್ಲಿ ಪ್ರಸಕ್ತವಾಗದ ಕೇವಲ ಈಶ್ವರ ಜ್ಞಾನಕ್ಕೆ ವಿಷಯವಾದ ಅರ್ಥವಿಶೇಷಗಳನ್ನು ಹೇಳಿರುವರೆಂಬುದು ಅಸಂಗತವಲ್ಲ—ಅಸಂಭಾವ್ಯವೂ ಅಲ್ಲ. *'ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಂ'*—ವೇದಗಳಿಗಿಂತ ಅಧಿಕವಾದ ಅರ್ಥಗಳಿಂದ ವಿಷ್ಣುವನ್ನು ತಿಳಿಸುವ ಐದನೇ ವೇದವನ್ನು ಮಾಡಿದರೆಂದೂ, *'ಸರ್ವವೇದಾದ್ಯರ್ಥೋಪಬೃಂಹಿತಾಂ ತದನುಕ್ತ ಕೇವಲೇಶ್ವರ ಜ್ಞಾನದೃಷ್ಟಾರ್ಥಯುಕ್ತಾಂ ಮಹಾಭಾರತ ಸಂಹಿತಾಂ, ಅಚೀಕ್ಲೃಪತ್'*—ದಯಾಸಮುದ್ರರಾದ ಶ್ರೀವೇದವ್ಯಾಸರು, ಸರ್ವವೇದಾರ್ಥ-ಗಳಿಂದಲೂ, ವೇದಗಳಲ್ಲಿ ಹೇಳದಿರುವ ಕೇವಲ ಈಶ್ವರ ಜ್ಞಾನಕ್ಕೆ ಗೋಚರಿಸುವ ಅರ್ಥವಿಶೇಷಗಳಿಂದಲೂ ಕೂಡಿದ ಮಹಾಭಾರತವನ್ನು ರಚಿಸಿದರೆಂದೂ ಹೇಳ-ಲಾಗಿದೆ. ಪ್ರಮೇಯಗಳನ್ನು ನಿರೂಪಿಸುವ ಗ್ರಂಥಗಳಲ್ಲಿ—(ನಿರ್ಣೇಯ ಗ್ರಂಥಗಳಲ್ಲಿ) ೀಗೆ ಭಾರತವು ಸರ್ವೋತ್ಕೃಷ್ಟವಾದರೆ, ಪ್ರಮಾಣ ಗ್ರಂಥಗಳಲ್ಲಿ (ನಿರ್ಣಾಯಕ) ಬ್ರಹ್ಮಮೀಮಾಂಸಾ (ಬ್ರಹ್ಮಸೂತ್ರ) ಗ್ರಂಥವು ಶ್ರೇಷ್ಠವಾದುದು. ಆದ್ದರಿಂದ ಬ್ರಹ್ಮ-ಸೂತ್ರಗಳಿಗೆ ಶ್ರೇಷ್ಠತೆಯನ್ನು ಹೇಳುವ ವಾಕ್ಯಗಳಿಂದ, ಮಹಾಭಾರತದ ಶ್ರೇಷ್ಠತೆಗೆ ಯಾವ ವಿರೋಧವೂ ಇಲ್ಲ.

ಭಾರತವು ದರ್ಶನ-ಸಮಾಧಿ-ಗುಹ್ಯಗಳೆಂಬ ಭಾಷಾತ್ರಯಗಳುಳ್ಳದ್ದು ಮತ್ತು ಪ್ರತಿಶ್ಲೋಕವೂ ದಶಾರ್ಥಗಳುಳ್ಳದ್ದು. ಭಾರತದಲ್ಲಿ ಹೇಳದಿರುವ ವಿಷಯವೇ ಇಲ್ಲ. *'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್'* ಇಲ್ಲಿರುವುದೇ ಅನ್ಯತ್ರ, ಇಲ್ಲಿಲ್ಲದ್ದು ಅನ್ಯತ್ರ ಎಲ್ಲಿಯೂ ಇಲ್ಲ, ಎಂದು ಭಾರತದ ಪ್ರಸಿದ್ಧಿಯಿದೆ. ವ್ಯಾಖ್ಯೇಯವಾದ ಪ್ರಸಕ್ತವಾಕ್ಯದಲ್ಲಿರುವ ಎರಡನೆಯ 'ತದನುಕ್ತ' ಎಂಬುದಕ್ಕೆ ಭಾರತದಲ್ಲಿಯೂ ಹೇಳ-

ದಿರುವ ಅರ್ಥವಿಶೇಷಗಳನ್ನು ತಿಳಿದು ಉಪಾಸಿಸುವರೆಂಬಲ್ಲಿ, ಕಂಠತಃ ಹೇಳದೇ (ಸ್ಪಷ್ಟಾಕ್ಷರಗಳಿಂದ ಹೇಳದೇ) 'ಚ-ತು'ಗಳಿಂದ ಸೂಚಿತವಾಗಿ ಜ್ಞಾನಿ ಸಂಪ್ರದಾಯ-ಪ್ರಾಪ್ತಗಳಾದ ಅರ್ಥವಿಶೇಷಗಳನ್ನು ಚಿಂತಿಸುವರೆಂದು ತಿಳಿಯುವುದು ಯೋಗ್ಯ-ವೆನಿಸಬಹುದು. ಇಲ್ಲಿ ವಾಕ್ಯ (೧೦) ಪ್ರಮೇಯ ವಿವರಣೆಯಲ್ಲಿ, ವಾಣೀ ಉಪಾಸನೆಯ ವಿವರಣಾ ಭಾಗವನ್ನು ನೋಡುವುದು ಸಹಾಯಕವು.

(೩) *'ಅಶೇಷ ಶಕ್ತಿ ವಿಶೇಷಾಭ್ಯಾಂ'* ಎಂಬಲ್ಲಿ ಸೂಚಿತವಾದ ಪ್ರಮೇಯದ ವಿವರಣೆಯನ್ನು ಸಾವಧಾನಚಿತ್ತರಾಗಿ ಅನುಸರಿಸಬೇಕಾಗುತ್ತದೆ. ಭೇದವಿಲ್ಲದ ಸ್ಥಳ-ದಲ್ಲಿ ಕಾಣಬಹುದಾದ ಭೇದಕಾರ್ಯವನ್ನು ನಿರ್ವ್ಹಸುವುದಕ್ಕೆ, ಶ್ರುತಿಗಳು ಪರಮಾತ್ಮನ ಅಚಿಂತ್ಯ ಶಕ್ತಿಯನ್ನೂ ಕಾರಣವನ್ನಾಗಿ ಹೇಳುತ್ತವೆ—'ವಿಶೇಷ'ದೊಂದಿಗೆ. ಈ ವಿಶೇಷವೂ ವಸ್ತುಧರ್ಮವೇ ವಸ್ತುವಿನಿಂದ ಅಭಿನ್ನವೇ, ವಿಶೇಷವುಳ್ಳ ವಸ್ತುವಿಗೂ (ವಿಶಿಷ್ಟಕ್ಕೂ) ವಿಶೇಷಕ್ಕೂ ಅಭೇದವು ಹೇಗೆ ಕೂಡುತ್ತದೆ ಮತ್ತು ಅಭಿನ್ನವಾದ ವಿಶೇಷವು, ಭೇದವ್ಯವಹಾರಕ್ಕೆ ಹೇಗೆ ಎಡೆಗೂಡುತ್ತದೆ, ಎಂಬುದಕ್ಕೆ ಪರಮಾತ್ಮನ ಅಚಿಂತ್ಯ ಶಕ್ತಿಯಿಂದಲೇ ಸಾಧ್ಯವೆಂಬ ಪರಿಹಾರವನ್ನು ತಿಳಿಯಬೇಕೆಂದು ಹೇಳ-ಲಾಗಿದೆ. 'ವಿಶೇಷ'ವೆಂಬ ಭೇದನಿರ್ವಾಹಕ ವಸ್ತುಧರ್ಮವನ್ನು ಅಂಗೀಕರಿಸಲೇ-ಬೇಕೆಂದು ಶ್ರೀವಾದಿರಾಜರು, ತಮ್ಮ 'ಶ್ರುತಿತತ್ವಪ್ರಕಾಶಿಕಾ' ಗ್ರಂಥದಲ್ಲಿ..ೀಗೆ ಹೇಳಿರುತ್ತಾರೆ: *'ಏವಂ ಚ ಭೇದರಹಿತೇ ದೃಷ್ಟಂ ಭೇದಪ್ರಯೋಜನಮ್। ಉಪಪಾದಯಿತುಂ ಶಕ್ತಿ ವಿಶೇಷಂ ಚ ಮಹಾಪ್ರಭೋಃ। ಕಿಂ ನಾಹುರ್ನಹಿ ಕಾರ್ಯಂ ಸ್ಯಾತ್ಕಾರಣೇನ ವಿನಾ ಕ್ವಚಿತ್॥'* ಎಂದರೆ, ಕಾರಣವಿಲ್ಲದ ಕಾರ್ಯವಿಲ್ಲವೆಂಬುದು ಪ್ರಸಿದ್ಧ; ಆದ್ದರಿಂದ ಶ್ರುತಿ ಸ್ಮ ೃತಿಗಳು ಮಹಾಪ್ರಭುವಾದ ಶ್ರೀಹರಿಯ ಶಕ್ತಿ-ವಿಶೇಷವೇ ಭೇದ ನಿರ್ವಾಹಕವೆಂದು ಹೇಳುವುದಿಲ್ಲವೇ?—ಹೇಳಿಯೇ ತೀರು-ತ್ತವೆ. *'ವಿಶೇಷಸ್ಯ ವಿಶಿಷ್ಟಸ್ಯಾಪ್ಯಭೇದಸ್ತದ್ವದೇವ ತು। ಸರ್ವಂ ಚಾಚಿಂತ್ಯಶಕ್ತಿತ್ವಾತ್ ಯುಜ್ಯತೇ ಪರಮೇಶ್ವರೇ'* (ಭಾಗ-ತಾ) ಎಂದರೆ, ಅದರಂತೆಯೇ ವಿಶೇಷಕ್ಕೂ ವಿಶಿಷ್ಟಕ್ಕೂ ಅಭೇದವು; (ಯುಕ್ತಿಗೆ ವಿರುದ್ಧವೆಂದು ತೋರುವ) ಸರ್ವವೂ ಶ್ರೀಹರಿ-ಯಲ್ಲಿ ಆತನ ಅಚಿಂತ್ಯಶಕ್ತಿಯಿಂದ ಕೂಡುತ್ತದೆಂದೂ ಹೇಳಲಾಗಿದೆ. ಇಲ್ಲಿ ಸ್ವಲ್ಪ ಹೆಚ್ಚಿನ ವಿವರಣೆಯು ಅವಶ್ಯಕವೆಂದು ತೋರುತ್ತದೆ. 'ಕೆಂಪು ತಾವರೆ', ಎಂಬಲ್ಲಿ ಕೆಂಪು ಧರ್ಮ; ತಾವರೆಯು ಧರ್ಮಿ (ಎಂದರೆ ಧರ್ಮವುಳ್ಳ ವಸ್ತು); ಕೆಂಪು ವಿಶೇಷಣವೆಂದೂ, ತಾವರೆಯು ವಿಶಿಷ್ಟವೆಂದೂ ಕರೆಯಲಾಗುತ್ತವೆ. ವಸ್ತುವಿರುವ ವರೆಗೂ ಇರುವ ಅದರ ಧರ್ಮಕ್ಕೂ ವಸ್ತುವಿಗೂ ಅತ್ಯಂತ ಅಭೇದವೇ. ಆದರೂ 'ತಾವರೆಯ ಕೆಂಪು', ಎಂದು ಕೆಂಪು ಮತ್ತು ತಾವರೆ, ಎರಡೂ ಬೇರೆಯಾಗಿದ್ದರೆ

ಹೇಗೋ ಹಾಗೆ ವ್ಯವಹರಿಸಲಾಗುತ್ತದೆ. *'ಆನಂದಂ ಬ್ರಹ್ಮೇತಿ ವ್ಯಜಾನಾತ್'*— (ಭೃಗುವಲ್ಲೀ) ಎಂಬಲ್ಲಿ, 'ಆನಂದವನ್ನೇ ಬ್ರಹ್ಮನೆಂದು ತಿಳಿದನು' ಎಂದು ಶ್ರುತಿಯು ಹೇಳಿದರೆ, *'ಆನಂದಂ ಬ್ರಹ್ಮಣೋ ವಿದ್ವಾನ್'*—(ಬ್ರಹ್ಮವಲ್ಲೀ) ಎಂಬಲ್ಲಿ, 'ಬ್ರಹ್ಮನ ಆನಂದವನ್ನು ತಿಳಿದವನು' ಎಂದು ಬ್ರಹ್ಮ ಮತ್ತು ಆನಂದ, ಬೇರೆಯೆಂಬಂತೆ ಶ್ರುತಿಯು ನಿರೂಪಿಸುತ್ತದೆ. ಉಭಯ ವಾಕ್ಯಗಳು ಶ್ರುತಿಗಳೇ ಆದ್ದರಿಂದ ಪರಮ ಪ್ರಮಾಣಗಳೇ. ಅಭೇದವಿರುವಲ್ಲಿ, ಯಾವುದಿಲ್ಲದಿದ್ದರೆ ಭೇದ ಕಾರ್ಯವು ಕೂಡುವುದಿಲ್ಲವೋ, ಅದು ಪರಾರ್ಥದ (ಬ್ರಹ್ಮನ) ವಿಶೇಷವೆಂಬ ಶಕ್ತಿಯು, ಎಂದು ಒಪ್ಪಲೇಬೇಕಾಗುತ್ತದೆ. ಪ್ರತಿಪದಾರ್ಥದಲ್ಲಿ, ಅದರಿಂದ ಅಭಿನ್ನವಾದ ಅದರ ಸ್ವಭಾವವೇ ಆದ, ವಿಶೇಷವೆಂಬ ಧರ್ಮವಿರುತ್ತದೆ. ಇದರ ಬಲದಿಂದ ಪದಾರ್ಥ (ಧರ್ಮಿ) ಮತ್ತು ಅದರ ಅಭಿನ್ನ ಧರ್ಮಗಳಲ್ಲಿ ಭೇದವಿದ್ದಂತೆ ವ್ಯವಹರಿಸುವುದು ಕೂಡುತ್ತದೆ. 'ವಿಶೇಷ'ವೂ ವಸ್ತುವಿನ ಧರ್ಮವಿಶೇಷವಾದ ಮೇಲೆ, ಅದಕ್ಕೂ ವಸ್ತುವಿಗೂ (ವಿಶಿಷ್ಟಕ್ಕೂ) ಅಭೇದವು ಹೇಗೆ ಕೂಡುತ್ತದೆಂದು ಶಂಕಿಸಬಾರದು— ಈಶ್ವರಾಚಿಂತ್ಯಶಕ್ತಿಯಿಂದ ಸಾಧ್ಯವೆಂದು ತಿಳಿಯಬೇಕು. ಪರಮಾತ್ಮನ ಜ್ಞಾನ, ಆನಂದಾದಿ ಗುಣಗಳಿಗೂ, ಸೃಷ್ಟ್ಯಾದಿ ನಾನಾ ಕ್ರಿಯೆಗಳಿಗೂ ಮತ್ತು ಪರಮಾತ್ಮನಿಗೂ ಅತ್ಯಂತ ಅಭೇದವೇ. ಸೃಷ್ಟ್ಯಾದಿ ಕ್ರಿಯೆಗಳು ಕಾಲವಿಶೇಷಗಳಲ್ಲಿ ಮಾತ್ರ ತೋರಿ-ದರೂ (ವ್ಯಕ್ತವಾದರೂ), ಆ ಎಲ್ಲ ಕ್ರಿಯೆಗಳು ಶಕ್ತ್ಯಾತ್ಮನಾ ಪರಮಾತ್ಮನಲ್ಲಿ ನಿತ್ಯ-ವಾಗಿದ್ದು ಆತನಿಂದ ಅಭಿನ್ನಗಳೇ ಆಗಿವೆ. ಆತನ ಅಚಿಂತ್ಯಶಕ್ತಿಯಿಂದ ಎಲ್ಲವೂ ಯುಕ್ತವಾಗುತ್ತದೆ. ಈ 'ವಿಶೇಷ' ವಿಷಯಕ ಶಾಸ್ತ್ರಘಟ್ಟವನ್ನು ಗುರೂಪದೇಶದಿಂದ ಮಾತ್ರ ಸ್ಪಷ್ಟವಾಗಿ ಗ್ರಸಿ, ದಾಟಬಹುದು. ವಿಸ್ತಾರಭಯದಿಂದ ಮಾಡಿರುವ ಈ ಸಂಗ್ರಹ ನಿರೂಪಣೆಯು ಶಾಸ್ತ್ರಾಭ್ಯಾಸದಲ್ಲಿರುವ ಓದುಗರಿಗೆ ಸಹಾಯವಾದೀತೆಂದು ಭಾವಿಸಲಾಗಿದೆ.

(೪) ಗುಣೋಪಸಂಹಾರ ಪೂರ್ವಕ ಭಗವದುಪಾಸನೆಯ ವಿಷಯಕ್ಕೆ ವಾಕ್ಯ (೧) ಪ್ರಮೇಯ ವಿವರಣೆ (೪)ನ್ನು ಓದಿಕೊಂಡು ಮುಂದುವರಿಯಬೇಕು. ಭಗವದ್ಗುಣ-ಗಳನ್ನು ಮನಸಾ ಗ್ರಸಿ ಅವಿಭಾಗದಿಂದ, ಎಂದರೆ ಪ್ರತ್ಯೇಕವಾಗಿ ಅಲ್ಲದೇ ಏಕದಾ ಧ್ಯಾನಿಸುವುದು, ಗುಣೋಪಸಂಹಾರವೆನಿಸುತ್ತದೆ. *'ಓಂ ಉಪಸಂಹಾರೋಽರ್ಥಾ-ಭೇದಾದ್ವಿಧಿಶೇಷವತ್ಸಮಾನೇ ಚ ಓಂ'* ಎಂಬ ಸೂತ್ರವು ಈ ವಿಷಯಕ ನಿರ್ಣಯ-ವನ್ನು ಹೇಳುತ್ತದೆ. ಸೂತ್ರಾರ್ಥವೇನೆಂದರೆ—ವಿಧಿಶೇಷವತ್—ಸಂಧ್ಯಾದಿ ಕರ್ಮ-ಗಳು ಅವಶ್ಯ ಕರ್ತವ್ಯಗಳಾಗಿರುವಂತೆ, ಅರ್ಥಾಭೇದಾತ್—ವೇದಾರ್ಥಗಳನ್ನು (ಪ್ರತಿಪಾದ್ಯ ಭಗವದ್ಗುಣಗಳನ್ನೂ ದೋಷಾಭಾವಗಳನ್ನೂ ಅಭೇದದಿಂದ) ಅವಿ-

ಭಾಗದಿಂದ (ಏಕದಾ); ಉಪಸಂಹಾರಃ (ಕರ್ತವ್ಯಃ) ಮನಸಾ ಗ್ರಸಿ ಧ್ಯಾನಿಸತಕ್ಕದ್ದು; ಸಮಾನೇ ಚ—ಆ ಉಪಸಂಹಾರವಾದರೋ ಪರಮಾತ್ಮನ ಪೂರ್ಣತ್ವಕ್ಕೆ ಅವಿ-ರೋಧವಾದ ಗುಣವಿಷಯಕವಾಗಿರಬೇಕು (ಅಪೂರ್ಣತ್ವಕಲ್ಪನೆಯು ಸಹ ಅನರ್ಥಕ್ಕೆ ಕಾರಣವು).

ಗುಣೋಪಸಂಹಾರದಿಂದ ಮಾಡಲ್ಪಡುವ ಧ್ಯಾನವು ಗುಣಸ್ವರೂಪನೇ ಆದ ಪರಮಾತ್ಮನ ಸಾಕ್ಷಾತ್ಕಾರಕ್ಕೆ (ಗುಣಜ್ಞಾನ ಸ್ತತವಾದ ದರ್ಶನಕ್ಕೆ) ಕಾರಣವಾಗು ತ್ತದೆ. ಏಕದಾ ಗುಣಧ್ಯಾನವೆಂದರೆ, '*ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾ ಸಂತ್ಯುಪಾಸನೇ। ಯುಗಪತ್ ಸ್ವಭುಜೌ ಯದ್ವದ್ಧ್ಯಾಯೇತ್ತಾವತ ಏವ ಸಃ॥ ಯುಗಪದ್ಬ್ರಹ್ಮಣಃ ಸರ್ವೇ ಭಾಸಂತೇ ಹಿ ಗುಣಾ ಹರೇಃ। ತದನ್ಯೇಷಾಂ ಯಥಾ ಯೋಗ್ಯಂ ಸ್ವಮಹಾತ್ಮ್ಯಾನುಸಾರತಃ॥*' (ಶ್ರುತಿ) ಎಂಬಲ್ಲಿ ಹೇಳಿದಂತಿರುತ್ತದೆ. ಸರ್ವ-ವೇದಾರ್ಥ ಗುಣಜ್ಞಾನವುಳ್ಳವನ ಧ್ಯಾನದಲ್ಲಿ ಸಹ ಅಧಿಕಾರಿಯ ಯೋಗ್ಯತಾನು-ಸಾರವಾದ ಗುಣಗಳು ಮಾತ್ರ ಏಕದಾ ಗೋಚರಿಸುತ್ತವೆ. ಈ ಪ್ರಕಾರದ ಗುಣ-ಪ್ರತೀತಿಗೆ ಸ್ವಮಹಾತ್ಮ್ಯೆಯೇ (ಸ್ವರೂಪ ಯೋಗ್ಯತೆಯೇ) ಕಾರಣವು. ಎಲ್ಲ ಗುಣಗಳ ಜ್ಞಾನವಿದ್ದರೂ ಎಷ್ಟು ಗುಣಗಳು ಧ್ಯಾನಕಾಲದಲ್ಲಿ ಏಕದಾ ಸ್ವಭುಜಗಳಂತೆ (ಒಂದಾದ ನಂತರ ಒಂದಲ್ಲದೇ, ಎರಡೂ ಭುಜಗಳು ಒಂದೇ ಕಾಲಕ್ಕೆ ಕಾಣುವಂತೆ) ಕಾಣುವುವೋ, ಅವುಗಳನ್ನು ಏಕಾಗ್ರತೆಯಿಂದ ಧ್ಯಾನಿಸುವುದು ಗುಣೋಪ-ಸಂಹಾರವು. ಚತುರ್ಮುಖ ಬ್ರಹ್ಮನಿಗೆ ಸರ್ವ ಭಗವದ್ಗುಣಗಳೂ..ಗೆ (ಏಕದಾ) ಧ್ಯಾನದಲ್ಲಿ ಗೋಚರವಾಗುತ್ತವೆ—ಆತನೇ ಸರ್ವಗುಣೋಪಸಂಹಾರದಲ್ಲಿ ಅಧಿ-ಕಾರಿಯು. ತಾರತಮ್ಯಾನುಸಾರವಾಗಿ ಬ್ರಹ್ಮನಿಂದ ಕೆಳಗಿನ ರುದ್ರಾದಿ ದೇವತೆಗಳು ಬಹುಗುಣಗಳಿಂದಲೂ, ಮನುಷ್ಯರು ಕೆಲವೇ ಗುಣಗಳಿಂದಲೂ, ಧ್ಯಾನಿಸಬೇಕು. ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕು ಗುಣಗಳ ಉಪಾಸನೆಯಲ್ಲಿ ಸಾಮಾನ್ಯವಾಗಿ ಮನುಷ್ಯೋತ್ತಮ ಜೀವರು ಅಧಿಕಾರಿಗಳು. ಭಾವಿ ಬ್ರಹ್ಮರಾದ ಶ್ರೀವಾಯುದೇವರು ಸರ್ವಗುಣೋಪಸಂಹಾರದಿಂದ ಭಗವಂತನನ್ನು ಧ್ಯಾನಿಸತಕ್ಕವರು.

**೧೦. ತಥಾ ವೇದೋಕ್ತ ಸರ್ವ ಕ್ರಿಯೋಪಸಂಹರ್ತ್ರೂಣಾಂ, ಏವಂ ಅನಂತ-ರೂಪಾವಯವ ಗುಣಕ್ರಿಯಾಜಾತ್ಯವಸ್ಥಾ ವಿಶಿಷ್ಟಭಗವದುಪಾಸಕಾನಾಂ.....**

**ಪ್ರತಿಪದಾರ್ಥ:** ತಥಾ—ಮತ್ತು (ಸರ್ವಗುಣಗಳನ್ನು ಚಿಂತಿಸುವುದೂ ಅಲ್ಲದೇ), ವೇದೋಕ್ತ—ವೇದಗಳಲ್ಲಿ ಹೇಳಿರುವ, ಸರ್ವ ಕ್ರಿಯೋಪಸಂಹರ್ತ್ರೂಣಾಂ—ಸೃಷ್ಟಿ, ಸ್ಥಿತಿ, ಲಯಾದಿಗಳಿಂದ ಸ್ತತವಾದ ಭಗವಂತನ ಸಮಸ್ತ ಕ್ರಿಯೆಗಳನ್ನೂ ಚಿಂತಿಸಿ ಧ್ಯಾನಿಸುವವ-ರಾದ, ಏವಂ—..ಗೆ, ಅನಂತರೂಪಾವಯವಗುಣಕ್ರಿಯಾಜಾತ್ಯವಸ್ಥಾವಿಶಿಷ್ಟಭಗವ-

ದುಪಾಸಕಾನಾಂ—(ಪರಮಾತ್ಮನ) ಅನಂತರೂಪಗಳನ್ನೂ, ಕರಚರಣಾದಿ ಅವಯವ-ಗಳನ್ನೂ, ಜ್ಞಾನಾನಂದಾದಿ ಸಕಲ ಕಲ್ಯಾಣಗುಣಗಳನ್ನೂ ಮತ್ತು ಕ್ರಿಯೆಗಳನ್ನೂ, ಈ ಎಲ್ಲವುಗಳ ಜಾತಿ (ಸಜಾತೀಯ, ವಿಜಾತೀಯಗಳೆಂಬ ಉಭಯ ಜಾತಿ) ಮತ್ತು ಅವಸ್ಥೆ-ಗಳೊಂದಿಗೆ (ಪ್ರಳಯಾದ್ಯವಸ್ಥಾ ವಿಶೇಷಗಳೊಂದಿಗೆ) ಉಪಸಂಹಾರಮಾಡಿ ಧ್ಯಾನಿಸುವವ-ರಾದ...

ತಾತ್ಪರ್ಯ: ಶ್ರೀವಾಯುದೇವರು ಸರ್ವಗುಣಗಳನ್ನು ಧ್ಯಾನಿಸುವ ಅಧಿಕಾರಿಗಳು ಮಾತ್ರವಲ್ಲ; ಅವಯವ-ಆಭರಣ-ಆಯುಧಾದಿಗಳಿಂದ ಶೋಭಿಸುವ ಪರಮ ಮಂಗಳಕರಗಳಾದ ಅಸಂಖ್ಯ ಭಗವದ್ರೂಪಗಳನ್ನೂ, ಪ್ರತಿಯೊಂದು ರೂಪದ ಗುಣಕ್ರಿಯೆಗಳನ್ನು ಅವುಗಳ ಜಾತಿ, ಅವಸ್ಥಾವಿಶಿಷ್ಟ ವಿಶೇಷಗಳೊಂದಿಗೆ ಚಿಂತಿಸಿ ಧ್ಯಾನಿಸುವವರೂ ಆಗಿದ್ದಾರೆ.

ಪ್ರಮೇಯ ವಿವರಣೆ: (೧) ಕ್ರಿಯೋಪಸಂಹಾರ ಧ್ಯಾನವನ್ನು ಗುಣೋಪ-ಸಂಹಾರ ಧ್ಯಾನದಿಂದ ಪ್ರತ್ಯೇಕಿಸಿ ಹೇಳುವುದರಲ್ಲಿ ಸೂಕ್ಷ್ಮವಾದ ಪ್ರಮೇಯ ರಹಸ್ಯ-ವಿದೆ. ವಾಯು-ಬ್ರಹ್ಮರಂತೆ, ಭಾರತೀ-ಸರಸ್ವತಿಯರು ಸಹ ಪರಮಾತ್ಮನನ್ನು ಸರ್ವ-ಗುಣೋಪಸಂಹಾರದಿಂದ ಧ್ಯಾನಿಸುತ್ತಾರೆ. ..ೀಗಿದ್ದರೂ ಮುಕ್ತಿಯಲ್ಲಿ ಇವರಿಗೆ ದೊರೆಯುವ ಆನಂದವು, ತಮ್ಮ ಪತಿಗಳಿಗಿಂತ ಕಡಿಮೆ. ಇವರು ತಾರತಮ್ಯದಲ್ಲಿ ಅವರಿಗಿಂತ ಕೆಳಗಿರುವರು. ಉಪಾಸನೆಯಲ್ಲಿ ಸಾಮ್ಯವಿದ್ದರೆ, ತಲ್ಲಭ್ಯ ಫಲದಲ್ಲಿ (ಮೌಕ್ತಿಕಾನಂದದಲ್ಲಿ) ವ್ಯತ್ಯಾಸವಿರಲು ಕಾರಣವಿಲ್ಲ. ಆದ್ದರಿಂದ ಬ್ರಹ್ಮ-ವಾಣಿಯರ (ವಾಯು-ಭಾರತಿಯರ) ಉಪಾಸನೆಯಲ್ಲಿ ವ್ಯತ್ಯಾಸವಿರಬೇಕು. ಈ ವ್ಯತ್ಯಾಸವನ್ನು ನಿರೂಪಿಸಿ, ನಿರ್ಣಯವನ್ನು *'ಓಂ ಸಮಾನ ಏವಂ ಚಾಭೇದಾತ್ ಓಂ'* ಎಂಬ ಸೂತ್ರವು ಹೇಳುತ್ತದೆ. ಇದರ ಅರ್ಥ: ಏವಂ ಚ—..ೀಗಿದ್ದರೂ, ಸಮಾನೇ—ಸ್ವಯೋಗ್ಯ ಗುಣವಿಷಯದಲ್ಲಿ ಮಾತ್ರ (ಸರಸ್ವತೀ ದೇವಿಗೆ ಉಪಸಂಹಾರವು ಹೇಳಲ್ಪಟ್ಟಿದೆ. ಕ್ರಿಯಾವಿಶೇಷಗಳ ಉಪಸಂಹಾರವಲ್ಲ); ಅಭೇದಾತ್—ಭೇದ-ವಿಲ್ಲದ್ದರಿಂದ (ಕ್ರಿಯಾ ಸಾಮಾನ್ಯರಲ್ಲಿ ಕ್ರಿಯಾ ವಿಶೇಷಗಳು ಅಂತರ್ಭಾವ ಹೊಂದುವುದರಿಂದ, ಬ್ರಹ್ಮ-ವಾಣಿಯರ ಮುಕ್ತಿಯಲ್ಲಿ ಸಮಾನಸ್ಥಾನ ಲಾಭವೂ ಆನಂದ ತಾರತಮ್ಯವೂ ಸಹ ಉಪಪನ್ನವಾಗುತ್ತವೆ). ಕ್ರಿಯಾ ಸಾಮಾನ್ಯದಲ್ಲಿ, ಕ್ರಿಯಾ ವಿಶೇಷಗಳು ಅಂತರ್ಭಾವ ಹೊಂದುತ್ತವೆ. ಭಗವಂತನ ಗುಣ ಕ್ರಿಯೆ-ಗಳೆಲ್ಲವೂ ನಿತ್ಯಗಳು. ಸೃಷ್ಟಿ ಮೊದಲಾದ ಕ್ರಿಯೆಗಳು ನಿತ್ಯ ವ್ಯಕ್ತಗಳು. ಶಕ್ತ್ಯಾತ್ಮನಾ ಇದ್ದು ಕಾಲವಿಶೇಷಗಳಲ್ಲಿ ವ್ಯಕ್ತವಾಗತಕ್ಕವುಗಳು, ಕೆಲವು ಕ್ರಿಯೆಗಳು. ಉದಾ: ತ್ರಿವಿಕ್ರಮ ರೂಪದಿಂದ ಪಾದವನ್ನು ಎತ್ತಿದುದು; ಘಟ-ಪಟಾದಿಗಳ ಸೃಷ್ಟಿ—ಕೃಷ್ಣ

ರೂಪದಿಂದ ನವನೀತ ಭಕ್ಷಣೆ ಇತ್ಯಾದಿ. ಸೃಷ್ಟಿ ಸಾಮಾನ್ಯವೂ ನಿತ್ಯವ್ಯಕ್ತವೇ. ಪ್ರಳಯಕಾಲದಲ್ಲಿ ಸಹಾ ಕ್ಷಣ-ಲವಾದಿಕಾಲ ಸೃಷ್ಟಿಯೂ ಲಯವೂ ನಡೆದೇ ಇರುತ್ತದೆ. ಕಾಲವಿಶೇಷಗಳಲ್ಲಿ ಮಾತ್ರ ವ್ಯಕ್ತವಾಗುವ ಕಾದಾಚಿತ್ಕ ಕ್ರಿಯೆಗಳೂ ಶಕ್ತ್ಯಾತ್ಮನಾ ನಿತ್ಯವೇ. ಇವು ಜಾತಿ (ಗುಂಪು), ಅವಸ್ಥಾ (ಸೃಷ್ಟ್ಯಾದಿ) ಭೇದಗಳಿಂದ, ಕ್ರಿಯಾವಿಶೇಷಗಳೆನಿಸುತ್ತವೆ. ನಿತ್ಯವ್ಯಕ್ತ ಕ್ರಿಯೆಗಳು ಕ್ರಿಯಾ ಸಾಮಾನ್ಯಗಳು. ಕ್ರಿಯೋಪಸಂಹಾರ ಧ್ಯಾನದಲ್ಲಿ ಬ್ರಹ್ಮ-ವಾಣಿಯರಲ್ಲಿ ವ್ಯತ್ಯಾಸವಿದೆ. '*ಅನಂತ-ವೇದೋಕ್ತ ತದನುಕ್ತ ಭಾರತೋಕ್ತ ಪ್ರಕಾರೇಣ ಬ್ರಹ್ಮೋಪಾಸಿತಾನಂತಗುಣಾ-ನಂತರೂಪಾಯ। ಕ್ರಿಯಾಸಾಮಾನ್ಯೇನ ಸರಸ್ವತ್ಯುಪಾಸಿತ ಅನಂತಗುಣಾನಂತ-ರೂಪಾಯ...* (ವ್ಯಾಸಗದ್ಯ) ಎಂಬಲ್ಲಿ ಬ್ರಹ್ಮ-ವಾಣಿಯರ ಉಪಾಸನೆಯಲ್ಲಿರುವ ಸಮವಿಷಮ ಭಾವಗಳು ಸ್ಪಷ್ಟಗೊಳಿಸಲ್ಪಟ್ಟಿವೆ. ಬ್ರಹ್ಮದೇವನು, ಜಾತಿ—ಅವಸ್ಥಾ-ಭೇದಗಳಿಂದ ಸ್ವತವಾಗಿ ಸಕಲ ಕ್ರಿಯಾವಿಶೇಷಗಳನ್ನು ನಿತ್ಯದಲ್ಲಿ ಉಪಾಸಿಸುತ್ತಾನೆ. ವಾಣೀದೇವಿಯು ಈ ಕ್ರಿಯಾವಿಶೇಷಗಳು ಅಂತರ್ಭಾವ ಹೊಂದುವ ಕ್ರಿಯಾ ಸಾಮಾನ್ಯಗಳ ನಿತ್ಯೋಪಾಸನೆಯನ್ನು (ಸರ್ವಗುಣಗಳೊಂದಿಗೆ) ಮಾಡುತ್ತಾಳೆ—ವೇದೋಕ್ತ ತದನುಕ್ತ ಭಾರತೋಕ್ತ ಮಹಾಜ್ಞಾನಿ ಸಂಪ್ರದಾಯ ಪ್ರಾಪ್ತ ಸಮಸ್ತ-ಗುಣಗಳನ್ನು ವಾಣೀದೇವಿಯು ಉಪಸಂಹಾರ ಮಾಡಿದರೂ, ಬ್ರಹ್ಮನಂತೆ ಕ್ರಿಯಾ-ವಿಶೇಷಗಳನ್ನು ನಿತ್ಯೋಪಾಸನೆ ಮಾಡಲು ಶಕ್ತಳಲ್ಲ. ಕ್ರಿಯಾ ಸಾಮಾನ್ಯದಲ್ಲಿ ಇವು-ಗಳಲ್ಲಿ ಹಲವು ಕ್ರಿಯೆಗಳು ಅಂತರ್ಭಾವಗೊಳ್ಳುತ್ತವೆಯಾದರೂ, ವಿಜಾತೀಯ ಕ್ರಿಯೆಗಳು, ಕ್ರಿಯಾವಿಶೇಷಗಳೆಂದೇ ಧ್ಯಾನಿಸಲ್ಪಡಬೇಕಾಗುತ್ತವೆ. ಬ್ರಹ್ಮದೇವನು ಇವುಗಳ ನಿತ್ಯೋಪಾಸನೆಯನ್ನೂ ಮಾಡುತ್ತಾನೆ. ಚಲನರೂಪ ಕ್ರಿಯೆಯು ನಿತ್ಯ-ವಿಕ್ರಾಂತಿಯೆನಿಸುತ್ತದೆ—ಇದು ಕ್ರಿಯಾಸಾಮಾನ್ಯವು; ತ್ರಿವಿಕ್ರಮ ರೂಪದಿಂದಾದ ಪಾದಕ್ರಮಣವು ಕ್ರಿಯಾವಿಶೇಷವು. ಈ ಕ್ರಿಯಾವಿಶೇಷಗಳ ನಿತ್ಯೋಪಾಸನೆಯಲ್ಲಿ ಬ್ರಹ್ಮದೇವನೇ ಅಧಿಕಾರಿಯು. '*ವ್ಯಕ್ತಾನಾಂ ನಿತ್ಯದೈವಸ್ಯಾದುಪಾಸ್ತಿಃ ಕಂಜಜಾತ-ವತ್। ಕಾದಾಚಿತ್ಕ ಕ್ರಿಯಾಣಾಂತು ಪೃಥಕ್ ತ್ರೈವಿಕ್ರಮಾ ದಿನಾಂ। ನ ನಿತ್ಯದೋಪ-ಸಂಹಾರೋ ಹ್ಯಂತರ್ಭಾವಾತ್ ಕ್ವಚಿದ್ಭವೇತ್।*' ಇತ್ಯಾದಿ (ಸ.ರ.ಮಾ) ವಾಕ್ಯಗಳು ಉಕ್ತಪ್ರಮೇಯವನ್ನು ನಿರೂಪಿಸುತ್ತವೆ.

ಪರಮಾತ್ಮನ ಕ್ರಿಯಾವಿಶೇಷಗಳ ಪ್ರಭಾವವು ಅಲ್ಪವಲ್ಲ—ಫಲದಲ್ಲಿ ಮಹತ್ತರ-ವಾದ ತಾರತಮ್ಯಕ್ಕೆ ಕಾರಣವಾಗುತ್ತದೆ. ಕಾಲೆತ್ತಿದನು—ಬೆಣ್ಣೆ ತಿಂದನು—ವೇಣು-ಗಾನ ಮಾಡಿದನು—ಗೋವುಗಳನ್ನು ಕಾಯ್ದನು—ಇತ್ಯಾದಿ ಅಲ್ಪಗಳೆಂದು ತೋರುವ ಕ್ರಿಯೆಗಳೂ ಮಹಾಮ್ಯಮೋಪೇತವಾದವುಗಳು. ಸಂಚಾರ ಹೊರಟರು, ಕೂತರು,

ನಿಂತರು, ಮಾತನಾಡಿದರು ಇತ್ಯಾದಿ ಶ್ರೀಮಧ್ವಾಚಾರ್ಯರ ಕ್ರಿಯೆಗಳು ಸಹ ಮೋಕ್ಷ ಸಾಧಕ ಮಹಿಮೆಗಳುಳ್ಳವೆಂದು ಶ್ರೀಸುಮಧ್ವವಿಜಯದಲ್ಲಿ ವರ್ಣಿಸಿರುವುದನ್ನು ಇಲ್ಲಿ ಗಮನಿಸಬಹುದು. *'ಗಮನಾಸನ ಸಂಕಥಾದಿ ಲೀಲಾಃ ಸ್ಮೃತಿ ಮಾತ್ರೇಣ ಭವಾ-ಪವರ್ಗ ದಾತ್ರೀಃ। ಕಥಮಪ್ಯಮರಾಃ ಪ್ರಪಂಚಯೇಯುಃ ನನು ಮಧ್ವಸ್ಯ ನ ಮಾದೃಶೋಲ್ಪಬೋಧಾಃ॥'* ಎಂದು ಅಲ್ಪಗಳೆಂದು ತೋರುವ ಕ್ರಿಯಾವಿಶೇಷಗಳೂ, ಧ್ಯಾನದಿಂದ ಮಹಾ ಫಲಪ್ರದಗಳಾಗುವುವೆಂದು ಹೇಳಲಾಗಿದೆ. ಆದ್ದರಿಂದ ಸರ್ವ ಗುಣೋಪಾಸನಾ ಸಾಮ್ಯದಿಂದ, ಒಂದೇ ಸ್ಥಾನದಲ್ಲಿರುವಿಕೆಯೂ, ಕ್ರಿಯೋಪ-ಸಂಹಾರ ವೈಲಕ್ಷಣ್ಯದಿಂದ ಆನಂದ ತಾರತಮ್ಯವೂ, ಬ್ರಹ್ಮ-ವಾಣಿಯರಲ್ಲಿ ಉಪಪನ್ನ-ವಾಗುತ್ತದೆ.

**೧೧. ಪರಮದಯಾಲೂನಾಂ, ಕ್ಷಮಾಸಮುದ್ರಾಣಾಂ, ಭಕ್ತವತ್ಸಲಾನಾಂ, ಭಕ್ತಾಪರಾಧಸಹಿಷ್ಣೂನಾಂ, ಸ್ವಭಕ್ತಾನ್ ದುರ್ಮಾರ್ಗಾತ್ ಉದ್ಧೃತ್ಯ ಸನ್ಮಾರ್ಗ-ಸ್ಥಾಪಕಾನಾಂ, ಸ್ವಭಕ್ತಂ ಮಾಂ ಉದ್ದಿಶ್ಯ ಭಗವತಃ ಪುರಃ ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ ತ್ವದಧೀನಂ ದೀನಂ ದೂನಂ ಅನಾಥಂ ಶರಣಾಗತಂ ಏನಂ ಉದ್ಧರ ಇತಿ ವಿಜ್ಞಾಪನಕರ್ತ್ರೂಣಾಂ.....**

ಪ್ರತಿಪದಾರ್ಥ: ಪರಮ ದಯಾಳೂನಾಂ—ಅತಿಶಯ ದಯಾವಂತರೂ, ಕ್ಷಮಾ-ಸಮುದ್ರಾಣಾಂ—ಕ್ಷಮಾಗುಣ ಪೂರ್ಣರೂ, ಭಕ್ತವತ್ಸಲಾನಾಂ—ಭಗವದ್ಭಕ್ತರನ್ನು ಮಕ್ಕ-ಳಂತೆ ಪ್ರೀತಿಸುವವರೂ, ಭಕ್ತಾಪರಾದ ಸ್ಹಷ್ಣೂನಾಂ—ಭಕ್ತಾಪರಾಧಗಳನ್ನು ಸ್ಹಸುವ (ಕ್ಷಮಿಸುವ) ವಿಶಾಲ ಹೃದಯರೂ, ಸ್ವಭಕ್ತಾನ್—ತಮ್ಮ ಭಕ್ತರನ್ನು, ದುರ್ಮಾರ್ಗಾತ್—ದುರ್ಮಾರ್ಗದಿಂದ, ಉದ್ಧೃತ್ಯ—..ಡಿದೆತ್ತಿ (ಅವರನ್ನು ಕೈಡಿದೆತ್ತಿ), ಸನ್ಮಾರ್ಗ ಸ್ಥಾಪಕಾನಾಂ—ಸನ್ಮಾರ್ಗದಲ್ಲಿಟ್ಟು ರಕ್ಷಿಸುವವರೂ, ಸ್ವಭಕ್ತಂ ಮಾಮುದ್ದಿಶ್ಯ—ಸ್ವಭಕ್ತನಾದ ನನ್ನನ್ನು ತೋರಿ, ಭಗವತಃ ಪುರಃ—ಭಗವಂತನ ಎದುರಿನಲ್ಲಿ, "ಪರಮದಯಾಳೋ—ಹೇ ಕೃಪಾಳೋ, ಕ್ಷಮಾಸಮುದ್ರ—ಕ್ಷಮಾಗುಣ ಪೂರ್ಣನೇ! ಭಕ್ತವತ್ಸಲ—ಭಕ್ತರಲ್ಲಿ ನಿರ್ವ್ಯಾಜ ಪ್ರೇಮವುಳ್ಳವನೇ!, ಭಕ್ತಾಪಠಾಧ ಸ್ಹಷ್ಣೋ—ಭಕ್ತಾಪರಾಧ ಸಹನಶೀಲ! ತ್ವದಧೀನಂ—ನಿನ್ನ ದಾಸನೂ, ದೀನಂ—ಕರುಣಾವಿಷಯನೂ, ದೂನಂ—ದುಃಖ-ತಪ್ತನೂ, ಅನಾಥಂ—ರಕ್ಷಕ ರ್ರತನೂ, ಶರಣಾಗತಂ—ನಿನ್ನಾಶ್ರಯವನ್ನು ಪ್ರಾರ್ಥಿಸು-ವವನೂ, ಏನಂ—(ಆದ) ಈ ಜೀವನನ್ನು (ಇವನನ್ನು), ಉದ್ಧರ—ಉದ್ಧಾರಮಾಡು;" ಇತಿ..ಗೆ, ವಿಜ್ಞಾಪನ ಕರ್ತ್ರೂಣಾಂ—ವಿಜ್ಞಾಪನೆ ಮಾಡುವ (ಶ್ರೀಹರಿಯಲ್ಲಿ ವಿಜ್ಞಾಪಿಸಿ ಸುಜೀವರಿಗೆ ಭಗವದನುಗ್ರಹವನ್ನು ದೊರಕಿಸುವ) ವರೂ ಆದ....

ತಾತ್ಪರ್ಯ: ಪರಮದಯಾಳುಗಳೂ, ಕ್ಷಮಾಸಮುದ್ರರೂ, ಭಕ್ತವತ್ಸಲರೂ, ಭಕ್ತಾಪರಾಧ ಸಹನಶೀಲರೂ ಆದ ಶ್ರೀವಾಯುದೇವರು, ಸ್ವಭಕ್ತರನ್ನು ದುರ್ಮಾರ್ಗ-

ದಿಂದ ಕೈಹಿಡಿದೆತ್ತಿ, ಸನ್ಮಾರ್ಗದಲ್ಲಿಟ್ಟು, ಭಗವಂತನ ಸಮ್ಮುಖದಲ್ಲಿ, 'ಹೇ ದಯಾಳೋ! ಕ್ಷಮಾಸಮುದ್ರ! ಭಕ್ತವತ್ಸಲ! ಭಕ್ತಾಪರಾಧ ಸಹಿಷ್ಣೋ! ನಿನ್ನ ದಾಸನಾದ ಈ ಜೀವನು, ದೀನನೂ, ದೂನನೂ, ಅನಾಥನೂ ಆಗಿ ನಿನ್ನನ್ನೇ ಶರಣು ಹೊಂದಿರುವನು, ಇವನನ್ನು ಉದ್ಧಾರಮಾಡು, ಪ್ರಭೋ!' ಎಂಬುದಾಗಿ ಸುಜೀವರೆಲ್ಲರ ಪರವಾಗಿ ಶ್ರೀಹರಿಯಲ್ಲಿ ವಿಜ್ಞಾಪಿಸಿ, ಭಗವದನುಗ್ರಹವನ್ನು ದೊರಕಿಸುತ್ತಾರೆ.

**ಪ್ರಮೇಯ ವಿವರಣೆ:** ಶ್ರೀಹರಿಯೇ ಪರಮದಯಾಳು, ಕ್ಷಮಾಸಮುದ್ರ, ಭಕ್ತವತ್ಸಲ ಮತ್ತು ಭಕ್ತಾಪರಾಧಸಹಿಷ್ಣು. ಈ ಗುಣಗಳು ಶ್ರೀಹರಿಯ ಮುಖ್ಯ ಪ್ರತಿಬಿಂಬರಾದ ವಾಯುದೇವರಲ್ಲಿ ಸಹ ಇವೆ. ಶ್ರೀವಾಯುದೇವರನ್ನೂ ಶ್ರೀಹರಿಯನ್ನೂ ಈ ಗುಣಗಳನ್ನು ನಿರೂಪಿಸುವ (ಉಭಯ ಸಾಮಾನ್ಯ) ವಿಶೇಷಗಳಿಂದ ನಿರ್ದೇಶಿಸಲಾಗಿದ್ದರೂ, ತಾರತಮ್ಯಾನುಗುಣವಾದ ಗುಣಪೂರ್ತಿಯನ್ನು ತಿಳಿಯಬೇಕು. ಶ್ರೀಹರಿಯಲ್ಲಿ ಈ ಗುಣಗಳು, ಒಂದೊಂದೂ ಅನಂತವಾಗಿವೆ—ವಾಯುದೇವರಲ್ಲಿ, ರುದ್ರಾದಿ ಇತರ ಜೀವರಿಗಿಂತ ಅತ್ಯಂತ ಅತಿಶಯವಾಗಿರುವುದೆಂದು ತಿಳಿಯಬೇಕು.

ಪೂರ್ಣಾನಂದಸ್ವರೂಪನೂ, ಪೂರ್ಣಕಾಮನೂ, ಅತ ಏವ, ಸ್ವಪ್ರಯೋಜನಲೇಶವಿಲ್ಲದವನೂ ಆದ ಶ್ರೀಹರಿಯು, ಜೀವರಿಗೆ ಅವರವರ ಗತಿಗಳನ್ನು ಹೊಂದಿಸಲು, ಚೇತನಾಚೇತನಾತ್ಮಕ ವಿಶ್ವದ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬ ಅಷ್ಟಕರ್ತೃತ್ವಗಳನ್ನೂ ವಹಿಸುತ್ತಾನೆ. ಇದರಿಂದಲೇ ಆತನ ದಯಾಳುತ್ವವು ಸ್ಪಷ್ಟವಾಗುತ್ತದೆ. ಸ್ವಭಕ್ತರ ಅಪರಾಧಗಳನ್ನು ಕ್ಷಮಿಸುವುದರಲ್ಲಿ ಈತನ ಸದೃಶರಿಲ್ಲ. ಭಗವಂತನ ನಾನಾ ಅವತಾರ ಚರಿತ್ರೆಗಳು, ಆತನು ಕ್ಷಮಾಸಮುದ್ರನೆಂಬುದನ್ನು ಸಾಧಿಸುತ್ತವೆ. 'ಅಚ್ಯುತನೇ ನಿನ್ನಂಥ ಹುಚ್ಚು ದೊರೆಗಳ ಕಾಣೆ। ಕಚ್ಚಿ ಬೈದೊದ್ದ ಭಕತರಪರಾಧಗಳ ತುಚ್ಛಗೈದವರ ಸಲಹಿದಿ' ಮತ್ತು 'ಶ್ರೀನಿವಾಸನ ಪೋಲ್ವ ದೀನವತ್ಸಲರುಂಟೆ ದಾನಿಗಳುಂಟೆ ಜಗದೊಳು। ಜಗದೊಳು ಇಹರೆಂಬ ಜ್ಞಾನಿಗಳುಂಟೆ ಅನುಗಾಲ;' 'ಏನು ಕರುಣಾನಿಧಿಯೊ ಶ್ರೀನಿತಂಬನಿರಮಣ ತಾ ನಮ್ಮನ್ನಗಲಿ ಸೈರಿಸ। ಸೈರಿಸದ ಕರುಣಿಯ ನಾನೆಂತು ತುತಿಸಿ ಹಿಗ್ಗಲಿ' ಎಂಬುದಾಗಿ ಶ್ರೀಜಗನ್ನಾಥದಾಸರೂ, ಇದರಂತೆ ಇತರ ಜ್ಞಾನಿಶ್ರೇಷ್ಠರೂ ಈ ಭಗವದ್ಗುಣಗಳನ್ನು ಕೊಂಡಾಡಿದ್ದಾರೆ. ಭಾಗವತೋಕ್ತ ಕುಚೇಲನ ಚರಿತ್ರೆಯು ಶ್ರೀಹರಿಯ ಅಗಾಧ ಭಕ್ತವಾತ್ಸಲ್ಯವನ್ನು ದೃಷ್ಟಾಂತೀಕರಿಸುತ್ತದೆ. *'ಕ್ವಾಹಂ ದರಿದ್ರಃ ಪಾಪೀಯಾನ್ ಕ್ವ ಕೃಷ್ಣಃ ಶ್ರೀನಿಕೇತನಃ। ಬ್ರಹ್ಮಬಂಧುರಿತಿ ಸ್ಮಾಹಂ ಬಾಹುಭ್ಯಾಂ ಪರಿರಂಭಿತಃ। ಶುಶ್ರೂಷಯಾ ಪರಮಯಾ ಪಾದಸಂವಾಹನಾದಿಭಿಃ। ಪೂಜಿತೋ ದೇವದೇವೇನ ವಿಪ್ರದೇವೇನ*

*ದೇವವತ್॥'* (ಭಾಗವತ)— ದರಿದ್ರನಾದ ನಾನೆಲ್ಲಿ? ಲಕ್ಷ್ಮೀಪತಿಯಾದ ಶ್ರೀಕೃಷ್ಣನೆಲ್ಲಿ! (ಜೀವೇಶ್ವರರಲ್ಲಿ ಅದೆಷ್ಟು ಮಹದಂತರ!). ೯ಗಿದ್ದರೂ ಸ್ವಭಕ್ತನಾದ ಬ್ರಾಹ್ಮಣನೆಂಬ (ಜ್ಞಾನಿಯೆಂಬ) ಅಭಿಮಾನದಿಂದ, ನನ್ನನ್ನು ಬಾಹುಗಳಿಂದ ಆಲಂಗಿಸಿ, ಕಾಲುಗಳನ್ನು ಒತ್ತಿ ಸೇವಿಸಿ, ಉಪಚರಿಸಿದನು; ಎಂಥ ಭಕ್ತವತ್ಸಲನು ಶ್ರೀಕೃಷ್ಣ! ..೯ಗೆಯೇ ಭಕ್ತಾಪರಾಧಗಳನ್ನು ಸಹಿಸುವ ಮತ್ತು ಕ್ಷಮಿಸುವ ಮಹಾ ಉದಾರ ಗುಣಗಳಿಗೆ ಶ್ರೀಹರಿಯು ನಿಧಿಯೆಂದು ಸಾರುವ ನಾನಾ-ಚರಿತ್ರೆಗಳನ್ನು ರಾಮಕೃಷ್ಣಾದಿ ಅವತಾರ-ಗಳಲ್ಲಿ ಕಾಣುತ್ತೇವೆ. ಅಲ್ಲದೇ ಆತನ ವಿಭೂತಿಗಳ ವಿವಿಧ ವ್ಯಾಪಾರಗಳಿಂದಲೂ ತಿಳಿಯಬರುತ್ತದೆ.

ಶ್ರೀಹರಿಯ ಜಗತ್ಸಂಬಂಧವಾದ ಸಕಲ ವ್ಯಾಪಾರಗಳಲ್ಲಿ ಪ್ರಧಾನಾಂಗಭೂತರಾದ ಶ್ರೀವಾಯುದೇವರಲ್ಲಿ ಈ ಗುಣಗಳು ಯಥಾಯೋಗ್ಯವಾಗಿ ಪೂರ್ಣವಾಗಿವೆ. ಶ್ರೀವಾಯುದೇವರು ಸಾಂಸಾರಿಕ ಭಯದಿಂದ ಅಂಜಿದವರಿಗೆ ವಜ್ರಪಂಜರದಂತಿ-ದ್ದಾರೆ. ಕಲ್ಯಾದಿ ದೈತ್ಯರ ಉಪದ್ರವಗಳನ್ನೂ ಸಕಲ ಆಧಿವ್ಯಾಧಿಗಳನ್ನೂ ಪರಿಹರಿಸುವ ಕರುಣಾಸಿಂಧುಗಳಾಗಿದ್ದಾರೆ; ಜ್ಞಾನದಾತರಾದ ಜಗದ್ಗುರುಗಳಾಗಿದ್ದಾರೆ. ಇವರೊಲಿಮೆ-ಯೊಂದಿರಲು ಶ್ರೀಹರಿಯು ತಪ್ಪದೇ ಕಾಯುತ್ತಾನೆ; ಅಮೃತಕ್ಕಾಗಿ ಕ್ಷೀರಸಮುದ್ರವನ್ನು ದೇವದೈತ್ಯರು, ಮಂದರ ಪರ್ವತವನ್ನು ಕಡಗೋಲನ್ನಾಗಿ ಉಪಯೋಗಿಸಿ, ವಾಸುಕಿ-ಯನ್ನು ಹಗ್ಗವನ್ನಾಗಿ ಮಾಡಿಕೊಂಡು ಮಥನ ಮಾಡಿದಾಗ, ಮೊದಲಿಗೆ ಉದ್ಭವಿಸಿದ ಹಾಲಾಹಲ ವಿಷವನ್ನು, ಶ್ರೀವಾಯುದೇವರು ಪಾನ ಮಾಡಿ ರಕ್ಷಿಸಿದರು. ರುದ್ರ-ದೇವನು ಪಾನ ಮಾಡಿದನೆಂದು ಹೇಳುವಂತೆ ಆಪಾತತಃ ತೋರುವ ಭಾಗವತ ನಿರೂಪಣೆಯು, ರುದ್ರದೇವರಿಗೆ ಯಶಃಪ್ರದನಾಗಲು ಸಂಕಲ್ಪಿಸಿದ ಶ್ರೀಹರಿಯು, ವಾಯುದೇವರಿಂದ ವಿಷದ ತೀವ್ರತೆಯನ್ನು ಮರ್ದಿಸಿ, ಏಕಾಂಶವನ್ನು ರುದ್ರದೇವರಿಗೆ ಕೊಡಿಸಿ, ಅದೂ ಕಂಠದಲ್ಲಿ ನಿಲ್ಲಲು, ನೀಲಕಂಠನೆಂಬ ಪ್ರಸಿದ್ಧಿಯನ್ನಿತ್ತನೆಂಬ ಮುಂತಾದ ವೇದೋಕ್ತ ವಾಯುದೇವರ ಮ಼ಹಿಮೆಯನ್ನು ಸೂಚಿಸುತ್ತದೆ. *'ರುದ್ರಸ್ಯ ಯಶಸೋಽರ್ಥಾಯ ಸ್ವಯಂ ವಿಷ್ಣುರ್ವಿಷಂ ವಿಭುಃ। ನ ಸಂಜಹ್ರೇ ಸಮರ್ಥೋಽಪಿ ವಾಯುಂ ಚೋಚೇ ಪ್ರಶಾಂತಯೇ॥'* (ಭಾ.ತಾ.) ಸರ್ವಶಕ್ತನಾದ ತಾನೇ ವಿಷಯ-ವನ್ನು ಉಪಶಾಂತಿಗೊಳಿಸದೇ ವಾಯುದೇವನಿಗೆ ಆಜ್ಞಾಪಿಸಿದನು. (ವಿಷವನ್ನು ಪಾನಮಾಡಿ, ಮರ್ದಿಸಲ್ಪಟ್ಟ ಲೇಶಾಂಶವನ್ನು ರುದ್ರನಿಗೆ ಬಾಧಕವಾಗದಂತೆ ಮಾಡಿ-ಕೊಡೆಂದು ಆಜ್ಞಾಪಿಸಿದನು). ಶ್ರುತಿಯೂ ಈ ವಿಷಯವನ್ನು ೯ಗೆ ನಿರೂಪಿಸುತ್ತದೆ:

*'ವಾಯುರಸ್ಮಾ ಉಪಾಮಂಥತ್ಪಿನಷ್ಟಿಸ್ಮಾ ಕುನನ್ನಮಾ। ಕೇಶೀವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ॥'* ಕೇಶೀ-ಸುಖಸ್ವರೂಪನಾದ ನಾರಾಯಣನೊಬ್ಬನೇ

ನಿಯಾಮಕನಾಗಿವುಳ್ಳ ವಾಯುದೇವನು; ಕುನನ್ನಮಾ—ಕುತ್ಸಿತರಾದ ಕಲಿ ಮೊದಲಾದವರನ್ನು ಅಂಧತಮಸ್ಸಿನಲ್ಲಿ ಮುಳುಗಿಸುವುದರಿಂದ, ವಾಯುದೇವನು 'ಕುನನ್ನಮಾ' ಎನಿಸುವನು; ರುದ್ರನೂ ಸಹ ಪಾನಮಾಡಿದ ವಿಷವನ್ನು ಮೊದಲು, ಪಾತ್ರೇಣ—ಅಂಗೈಯಿಂದ, ಪಿನಷ್ಟಿ—ಮರ್ದನ ಮಾಡಿ, ಉಪಾಮಂಥತ್—ಪಾನಾರ್ಹವನ್ನಾಗಿ ಮಾಡಿದನು. 'ಹಾಲಾಹಲವನುಂಡು ಪಾಲಿಸಿದೆ ಜಗವ ಕರುಣಾಳು ಪವಮಾನ' ಎಂದು ದಾಸಶ್ರೇಷ್ಠರ ನುಡಿಗಳು, ಶ್ರೀವಾಯುದೇವರು ಕೃಪಾಸಮುದ್ರರೆಂದು ಸಾರುತ್ತವೆ.

ಶ್ರೀವಾಯುದೇವರ ಸ್ಮರಣೆಯಿಂದ, ಬುದ್ಧಿ, ಬಲ, ಯಶಸ್ಸು, ಧೈರ್ಯ, ನಿರ್ಭಯತ್ವ, ಆರೋಗ್ಯಭಾಗ್ಯ, ವಾಕ್ಪಟುತ್ವ, ಆಯುಷ್ಯ ಮೊದಲಾದ ಸಂಪತ್ತುಗಳು ಅವರ ಭಕ್ತರಿಗೆ ಲಭಿಸುತ್ತವೆ. ಸನ್ಮಾರ್ಗವನ್ನು ಕಂಡು, ಯಥಾಕಾಲದಲ್ಲಿ ಶ್ರೀಹರಿ ಪ್ರಸಾದಕ್ಕೆ ಪಾತ್ರರಾಗುವ ಸಕಲ ಸುಜೀವರೂ ಈ ಮಹಾನುಭಾವರ ಅನುಗ್ರಹ ಬಲದಿಂದಲೇ *'ಯೇನಾಹಮಿಹ ದುರ್ಮಾರ್ಗಾದುದ್ಧೃತ್ಯಾಭಿ ನಿವೇಶಿತಃ। ಸಮ್ಯಕ್ ಶ್ರೀವೈಷ್ಣವೇ ಮಾರ್ಗೇ ಪೂರ್ಣಪ್ರಜ್ಞಂ ನಮಾಮ್ಯಹಂ॥'* ಎಂದು ಪ್ರಾತಃ ನಿತ್ಯವೂ ಹೇಳಿಕೊಳ್ಳಬೇಕಾದ ಶ್ಲೋಕಾರ್ಥವೂ ಇದೇ ಆಗಿದೆ. ಹೆಚ್ಚೇನು! ಶ್ರೀಮುಖ್ಯಪ್ರಾಣನು ಈ ಶರೀರದಲ್ಲಿದ್ದರೆ ಮಾತ್ರ ಶ್ರೀಹರಿಯು ಇರುವನು; ಬಿಟ್ಟು ಹೊರಟರೆ ಒಂದಿಗೆ ತಾನೂ ಹೊರಡುವನು. *'ಕಸ್ಮಿನ್ನಹಮುತ್ಕ್ರಾಂತೇ ಭವಿಷ್ಯಾಮಿ । ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ'* ಎಂಬ ಶ್ರುತಿಯು ಶ್ರೀಮುಖ್ಯಪ್ರಾಣನ ಈ ಮಹಿಮೆಯನ್ನು ಹೇಳುತ್ತದೆ.

೧೨. ಸರ್ವಜ್ಞಶಿರೋಮಣೀನಾಂ, ಅಶೇಷಗುರ್ವಂತರ್ಯಾಮಿಣಾಂ, ಸದಾ ಭಗವತ್ಪರಾಣಾಂ, ಭಗವತೋಽನ್ಯತ್ರ ಸರ್ವವಸ್ತುಷು ಮನಃಸಂಗರಹಿತಾನಾಂ.....

ಪ್ರತಿಪದಾರ್ಥ: ಸರ್ವಜ್ಞ ಶಿರೋಮಣೀನಾಂ—ಸರ್ವಜ್ಞ ಶ್ರೇಷ್ಠರೂ; ಅಶೇಷ ಗುರ್ವಂತರ್ಯಾಮಿಣಾಂ—ಸಕಲ ಗುರುಗಳ ಅಂತರ್ಯಾಮಿಗಳೂ; ಸದಾ ಭಗವತ್ಪರಾಣಾಂ—ನಿರಂತರ ಭಗವಂತನ ಸ್ಮರಣೆಯುಳ್ಳವರೂ (ಶ್ರೀಹರಿಯೇ ಸರ್ವೋತ್ತಮನೆಂಬ ನಿತ್ಯನಿಶ್ಚಯವುಳ್ಳವರೂ); ಭಗವತೋಽನ್ಯತ್ರ ಸರ್ವವಸ್ತುಷು —ಭಗವದಿತರ ಸಕಲ ವಸ್ತುಗಳಲ್ಲಿ, ಮನಃಸಂಗರ್ರಹಿತಾನಾಂ—ಅನಾಸಕ್ತ ಮನಸ್ಸುಳ್ಳವರೂ, ಆದ.....

ತಾತ್ಪರ್ಯ: ಶ್ರೀವಾಯುದೇವರು (ಸ್ವಯೋಗ್ಯ) ಪೂರ್ಣಜ್ಞಾನವುಳ್ಳ ಸಕಲ ಜೀವರಿಗೆ ಶಿರೋರತ್ನದಂತಿದ್ದಾರೆ; ಸಕಲ ಗುರುಗಳ ಅಂತರ್ಯಾಮಿಗಳಾಗಿದ್ದಾರೆ; ಸದಾ ಭಗವತ್ಪರರು; ಇತರ ಸಮಸ್ತ ವಸ್ತುಗಳಲ್ಲಿ ಆಸಕ್ತಿರಹಿತರು.

ಪ್ರಮೇಯ ವಿವರಣೆ: (೧) ಪರಮ ಮುಖ್ಯಾರ್ಥದಲ್ಲಿ ಸರ್ವಜ್ಞನು ಶ್ರೀಹರಿಯೊಬ್ಬನೇ. ಲಕ್ಷ್ಮೀದೇವಿಯೂ, ಶ್ರೀಹರಿಯ ನಂತರ ಸರ್ವಜ್ಞಳೇ. ಆಕೆಯು ಪರಮಾತ್ಮನೊಬ್ಬನನ್ನು ಮಾತ್ರ ಬಿಟ್ಟು ಇತರ ಸರ್ವವನ್ನೂ ಅಶೇಷ ವಿಶೇಷಗಳೊಂದಿಗೆ ತಿಳಿಯುತ್ತಾಳೆ. ಲಕ್ಷ್ಮೀಜ್ಞಾನವು ಸರ್ವ ಜಗತ್ತನ್ನು ತನ್ನ ಅಂಗೈಲಿರುವ ವಸ್ತುವಿನಂತೆ ಪ್ರತ್ಯಕ್ಷಳಾಗಿ ತಿಳಿಯುತ್ತದೆ. ಆದರೆ ಲಕ್ಷ್ಮೀಜ್ಞಾನವು ಪರಮಾತ್ಮಾಧೀನವಾದುದು. ಸ್ವತಂತ್ರವಲ್ಲ. ಸರ್ವಜ್ಞತ್ವದ ಲಕ್ಷಣವನ್ನು ತಿಳಿಯಲು, ಜ್ಞಾನ ಮತ್ತು ಅದರ ವೈವಿಧ್ಯಗಳನ್ನು ಅರಿತಿರಬೇಕು. ವಸ್ತುವನ್ನು ಇದ್ದಂತೆ ಗ್ರಸುವುದು ಯಥಾರ್ಥವು. ಯಥಾರ್ಥ ಜ್ಞಾನವು ಕೇವಲ ಪ್ರಮಾಣವೆಂದು ಕರೆಯಲ್ಪಡುತ್ತದೆ. ಪ್ರತ್ಯಕ್ಷ, ಅನುಮಾನ, ಆಗಮಗಳು ಯಥಾರ್ಥಜ್ಞಾನ ಸಾಧನಗಳು; ಇವು 'ಅನುಪ್ರಮಾಣ'-ಗಳೆನಿಸುವುವು. ಕೇವಲ ಪ್ರಮಾಣವು ಅನುಪ್ರಮಾಣದಿಂದ ಹುಟ್ಟುವುದೆಂದು ಹೇಳಿದಂತಾಯಿತು. ಆದರೆ ಎಲ್ಲರ ಯಥಾರ್ಥಜ್ಞಾನವು ಅನುಪ್ರಮಾಣಜನ್ಯವಲ್ಲ. ಈಶ, ಲಕ್ಷ್ಮಿಯರ ಜ್ಞಾನವು ಅನಾದಿ ಮತ್ತು ನಿತ್ಯ ಅನುಪ್ರಮಾಣ ಜನ್ಯವಲ್ಲ. ಈಶ ಜ್ಞಾನವು ಸ್ವತಂತ್ರ; ಲಕ್ಷ್ಮೀಜ್ಞಾನವು ಪರತಂತ್ರ (ಈಶಾಧೀನ); ಈಶಜ್ಞಾನವು ಸ್ವ-ಪರ ಸಮಸ್ತ ವಿಶೇಷ ಯುಕ್ತವಾದುದು—ಲಕ್ಷ್ಮೀಜ್ಞಾನವು ಈಶಾದನ್ಯತ್ರ ಸರ್ವಾಧಿಕವಾದುದು. ಯೋಗಿಗಳು ಮೂರು ವಿಧರು—ಋಜುಗಳು (ವಾಯು ಬ್ರಹ್ಮ ಪದವಿಗಳಿಗೆ ಬರಲರ್ಹರಾದ ಜೀವರು), ತಾತ್ವಿಕರು (ತತ್ವಾಭಿಮಾನಿ ದೇವತೆಗಳು), ಅತಾತ್ವಿಕರು (ತತ್ವಾಭಿಮಾನಿಗಳಲ್ಲದ ಇತರ ದೇವತೆಗಳು). ಯೋಗಿಗಳಲ್ಲದ ಸರ್ವರೂ ಅಯೋಗಿಗಳು. ಈಶ-ಲಕ್ಷ್ಮಿಯರು ಸರ್ವದಾ ಸ್ವರೂಪೇಂದ್ರಿಯಗಳಿಂದಾದ ಪ್ರತ್ಯಕ್ಷವುಳ್ಳವರು; ಸ್ವರೂಪ ಭಿನ್ನವಾದ ಅನ್ಯಸಾಧನ (ಕರಣ)ಗಳಿಂದ ಉಂಟಾದ ಪ್ರತ್ಯಕ್ಷವಲ್ಲ. ಸ್ವರೂಪೇಂದ್ರಿಯ (ಸಾಕ್ಷೀ ಎಂದು ಸ್ವರೂಪವೇ ಕರೆಯಲ್ಪಡುತ್ತದೆ), ಮನಸ್ಸು ಮತ್ತು ಚಕ್ಷುರಾದಿ ಪಂಚ ಜ್ಞಾನೇಂದ್ರಿಯಗಳಿಂದ ತಿಳಿಯುವುದೆಂಬ ಭೇದದಿಂದ ಪ್ರತ್ಯಕ್ಷವು ಏಳು ವಿಧವಾದುದು; ಮನ ಆದಿ ಆರು ಪ್ರಾಕೃತೇಂದ್ರಿಯಗಳ ಸಂಪರ್ಕವೇ ಎಂದೂ ಇಲ್ಲದ, ಈಶ-ಲಕ್ಷ್ಮಿಯರ ಪ್ರತ್ಯಕ್ಷವು ನಿಯಮೇನ (ಸದಾ ತಪ್ಪದೇ) ಯಥಾರ್ಥವಾದುದು; ಋಜುಯೋಗಿಗಳ ಪ್ರತ್ಯಕ್ಷವು ಮುಕ್ತಿಯವರೆಗೆ ಸ್ವರೂಪ-ಅಸ್ವರೂಪ (ಪ್ರಾಕೃತ) ಉಭಯಾತ್ಮಕವಾಗಿರುವುದು; ಮುಕ್ತಿಯಲ್ಲಿ ಸ್ವರೂಪೇಂದ್ರಿಯ ಸನ್ನಿಕರ್ಷ ಮಾತ್ರದಿಂದ ಯಥಾರ್ಥ ಜ್ಞಾನವುಂಟಾಗುತ್ತದೆ.

ಋಜುಗಳು ಈಶ-ಲಕ್ಷ್ಮಿಯರನ್ನು ಬಿಟ್ಟು ಇತರ ಸರ್ವವನ್ನು ಆಲೋಚನೆ ಮಾತ್ರದಿಂದ ತಿಳಿಯಲು ಶಕ್ತರು. ಇವರ (ಮನೋ) ವೃತ್ತಿರೂಪ ಜ್ಞಾನವೂ ಸರ್ವದಾ

ಯಥಾರ್ಥವೇ ಆಗಿರುತ್ತದೆ—ಸ್ವರೂಪದಿಂದಾದ ಜ್ಞಾನವು ಯಥಾರ್ಥವೆಂದು ಹೇಳಲೇನು! ತಾತ್ವಿಕಯೋಗಿಗಳ ಜ್ಞಾನವೂ ಅನಾದಿ; ಆದರೂ ಈಶ-ಲಕ್ಷ್ಮೀಯರಿಂದ ಭಿನ್ನವಾದ ಇತರ ಸರ್ವವನ್ನೂ ಆಲೋಚಿಸಿದರೂ ತಿಳಿಯಲು ಶಕ್ತರಲ್ಲ; ಇವರ ಸ್ವರೂಪ ಮತ್ತು ವೃತ್ತಿಜ್ಞಾನಗಳು ಯಥಾರ್ಥವಾಗಿದ್ದು, ಬಾಹ್ಯ (ವೃತ್ತಿಜ್ಞಾನವು) ಒಮ್ಮೊಮ್ಮೆ ಅಯಥಾರ್ಥವೂ ಆಗಿರಬಹುದು. ಅತಾತ್ವಿಕಯೋಗಿಗಳ (ತತ್ವಾಭಿ-ಮಾನಿಗಳಲ್ಲದ ಇತರ ದೇವತೆಗಳ) ಜ್ಞಾನವು ಅಲ್ಪ ವಿಷಯಕವಾದುದು; ಸ್ವರೂಪೇಂದ್ರಿಯದಿಂದಾದುದು ಯಥಾರ್ಥ—ಬಾಹ್ಯ ಜ್ಞಾನವು (ವೃತ್ತಿಜ್ಞಾನವು) ಅನೇಕ ವೇಳೆ ಅಯಥಾರ್ಥವಾಗಿರುತ್ತದೆ. ಅಯೋಗಿಗಳ ಜ್ಞಾನವು, ಈಶ, ಲಕ್ಷ್ಮೀ ಮೊದಲಾದ ಸಕಲ ಸ್ವೋತ್ತಮರ ವಿಷಯದಲ್ಲಿ ಅತಿ ಸಂಕೋಚವಾಗಿರುವುದು—ಹೆಚ್ಚಾಗಿ ಅಜ್ಞಾನಮಿಶ್ರವಾಗಿರುವುದು. ಇವರ ಸ್ವರೂಪೇಂದ್ರಿಯ ಜನ್ಯ ಜ್ಞಾನವೂ ಯಥಾರ್ಥವೇ. ಅಯೋಗಿಗಳು ತ್ರಿವಿಧವಾಗಿದ್ದಾರೆ—ಮುಕ್ತಿಯೋಗ್ಯರು, ನಿತ್ಯ-ಸಂಸಾರಿಗಳು ಮತ್ತು ತಮೋ ಯೋಗ್ಯರೆಂದು. ಇವರುಗಳ ಜ್ಞಾನದ ಯಥಾರ್ಥ-ಅಯಥಾರ್ಥತೆ ಮುಂತಾದ ವಿವರಗಳನ್ನು 'ಪ್ರಮಾಣ ಲಕ್ಷಣ' ಮೊದಲಾದ ಗ್ರಂಥಗಳನ್ನು ಗುರುಮುಖೇನ ಅಭ್ಯಸಿಸಿ ತಿಳಿಯಬೇಕು. ಜ್ಞಾನಯೋಗ್ಯ ಜೀವರು ಮಾತ್ರ ವಿಷ್ಣು ಸರ್ವೋತ್ತಮತ್ವ ಜಗತ್ಸತ್ಯತ್ವಾದಿ ನಿಶ್ಚಯಜ್ಞಾನವನ್ನು ಹೊಂದಿ ಮುಕ್ತರಾಗುತ್ತಾರೆ. ಪ್ರಕೃತ, ಈ ಜ್ಞಾನಾಧಿಕಾರಿಗಳು ಸ್ವಯೋಗ್ಯತೆಗೆ ಪೂರ್ಣವಾದ ಜ್ಞಾನವನ್ನು ಸಂಪಾದಿಸಿದರೆ, ಒಂದು ವಿವಕ್ಷೆಯಿಂದ ಅವರನ್ನು ಸರ್ವಜ್ಞರೆನ್ನಬಹುದು. ಈಶ-ಲಕ್ಷ್ಮೀಯರನ್ನುಳಿದು, ಬ್ರಹ್ಮಾದಿ ಅನಂತ ಮುಕ್ತಿಯೋಗ್ಯ ಜೀವರಲ್ಲಿ, ತಾರತಮ್ಯ-ದಲ್ಲಿ ಮೇಲಿನವರು ಕೆಳಗಿನವರಿಗಿಂತ ಹೆಚ್ಚು ಸರ್ವಜ್ಞರು. ತಾತ್ವಿಕ ಯೋಗಿಗಳ ಸರ್ವಜ್ಞತೆಯು ಸಹ ಕೆಳಗಿನ ಮುಕ್ತಿಯೋಗ್ಯರಿಗೆ (ಅತಾತ್ವಿಕರು ಮತ್ತು ಅಯೋಗಿ-ಗಳಿಗೆ) ಕಲ್ಪನಾತೀತವಾದುದು. ..ೀಗಿರಲು, ಶ್ರೀವಾಯುದೇವರ ಸರ್ವಜ್ಞತೆಯನ್ನು ಅನ್ಯರು ಗ್ರಸುವುದೆಂತು? ಸರ್ವಜ್ಞ ಶಿರೋಮಣಿಗಳೆಂದು ಮಾತ್ರ ಹೇಳಿ ಸಮಾಧಾನಪಟ್ಟುಕೊಳ್ಳಬೇಕು. ತಾತ್ವಿಕರ ಸರ್ವಜ್ಞತ್ವಾದಿ ಗುಣಗಳು ..ೀಗೆ ವರ್ಣಿ-ಸಲ್ಪಟ್ಟಿವೆ: *'ಪೂರ್ವೇ ಪೂರ್ವೇ ಯತೋ ವಿಷ್ಣೋಃ ಸನ್ನಿಧಾನಂ ಕ್ರಮಾಧಿಕಂ। ಸಾಮರ್ಥ್ಯಾಧಿಕ್ಯಮೇತೇಷಾಂ ಪಶ್ಚಾದೇವ ಲಯಸ್ತಥಾ॥ ವ್ಯಾಪ್ತಿಶ್ಚಾಭ್ಯಧಿಕಾ ತೇಷಾಮತ ಏವ ನ ಸಂಶಯಃ। ಅಚಿಂತ್ಯ ಶಕ್ತಯಃ ಸರ್ವೇ ಸರ್ವಜ್ಞಾಃ ಪ್ರಥಿತೌಜಸಃ॥ ಈಶ್ವರಾಚಿಂತ್ಯಶಕ್ತ್ಯೈವ ವಿಭಕ್ತಾಂಶೈರನಂತಕೈಃ। ಪ್ರೇರಕಾಃ ಸರ್ವಜೀವಾನಾಂ ಸ್ವೋತ್ತಮ್ಯೈಃ ಪ್ರೇರಿತಾಃ ಸದಾ॥ ಸರ್ವಾತ್ತಾರಶ್ಚ ತೇ ದೇವಾಃ ಸ್ವಭೋಕ್ತಾರಸ್ತಥೈವ ಚ। ಅಕ್ಷೀಣ ಪೂರ್ಣ ವಿಜ್ಞಾನಾಃ ಸತ್ಯಕಾಮಾಶ್ಚ ಸರ್ವದಾ॥ ನಿಸ್ಸೀಮಾಷ್ಟ ಮಹಾಸಿದ್ಧಿ ಸಂಪೂರ್ಣಾಃ*

*ಸರ್ವದೈವ ತು। ಅತಃ ಪೂರ್ಣ ಗುಣಾಃ ಸರ್ವೇ ನಿಸ್ಸೀಮಾನಂದ ಭೋಜಿನಃ॥* ಈ ಶ್ಲೋಕಗಳ ಭಾವಾರ್ಥ: ತಾರತಮ್ಯದಲ್ಲಿ ಮೇಲೆ ಮೇಲಿನವರು ಕ್ರಮವಾಗಿ ಅಧಿಕವಾದ ವಿಷ್ಣು ಸನ್ನಿಧಾನವುಳ್ಳವರಾಗಿರುತ್ತಾರೆ; ಇವರ ಸಾಮರ್ಥ್ಯವೂ ಇದೇ ಕ್ರಮದಿಂದ ಹೆಚ್ಚು ಹೆಚ್ಚಾಗಿರುತ್ತದೆ—ಆದಕಾರಣ ಸ್ವಾವರರು (ಕೆಳಗಿನವರು) ಲಯ ಹೊಂದಿದ ನಂತರವೇ ಲಯ ಹೊಂದುತ್ತಾರೆ. ಎಂದರೆ ಲಯವು ವ್ಯತ್ಕ್ರಮದಿಂದ ನಡೆಯುತ್ತದೆ; (ಮೊದಲು ಸೃಷ್ಟರಾದವರು ನಂತರ ಲಯ ಹೊಂದುವುದೂ ನಂತರ ಸೃಷ್ಟರಾದವರು ಮೊದಲು ಲಯ ಹೊಂದುವುದೂ ವ್ಯತ್ಕ್ರಮವು); ತಾತ್ತ್ವಿಕ ದೇವತೆಗಳು ತಮ್ಮಿಂದ ಅಭಿಮನ್ಯವಾದ ತತ್ತ್ವಗಳ ನಿಯಮನಕ್ಕಾಗಿ ಆ ತತ್ತ್ವಗಳಂತೆ ಅಧಿಕವಾದ ವ್ಯಾಪ್ತಿಯುಳ್ಳವರಾಗಿರುತ್ತಾರೆ; ಇವರೆಲ್ಲರೂ ಅಚಿಂತ್ಯ (ಕೆಳಗಿನವರಿಂದ ಭಾವಿಸಲಾಗದ) ಶಕ್ತಿಯುತರು, ಸರ್ವಜ್ಞರು, (ವೇದಾದಿಗಳಲ್ಲಿ) ಪ್ರಸಿದ್ಧವಾದ ಓಜಸ್ಸುಳ್ಳವರು; ಈಶ್ವರಾಚಿಂತ್ಯ ಶಕ್ತಿಯ ಬಲದಿಂದ ಇವರು ಅನಂತಾಂಶಗಳುಳ್ಳವ-ರಾಗಿ ವಿಭಕ್ತರಾಗಿ, ಸ್ವೋತ್ತಮರಿಂದ ಪ್ರೇರಿತರಾಗಿ ತಾವು ಪ್ರೇರಕರಾಗಿರುತ್ತಾರೆ; ಇವರೆಲ್ಲರೂ ಸರ್ವಭಕ್ಷಕರು, ಕ್ಷೀಣವಾಗದ ಪೂರ್ಣ ವಿಜ್ಞಾನವುಳ್ಳವರು, ಸ್ವಭೋಕ್ತಾರರು (ಗಂಧಮಾಲ್ಯಾದಿ ಭೋಗ್ಯ ವಸ್ತುಗಳಲ್ಲಿ ನಿಯಾಮಕರಾಗಿರುವ ತಾವು ಸ್ವೋತ್ತಮರಿಗೂ ತಮಗೂ ಭೋಗ್ಯರಾಗಿರುವುದರಿಂದ, ಸ್ವಭೋಕ್ತಾರರು); ಸರ್ವದಾ ಸತ್ಯಕಾಮರು; ಅಪರಿಮಿತ ಅಣಿಮಾದಿ ಅಷ್ಟ ಸಿದ್ಧಿಗಳುಳ್ಳವರು: ಅತ ಏವ ಗುಣಪೂರ್ಣರು; ಅಪಾರವಾದ ಆನಂದ ಭೋಗವುಳ್ಳವರು.

ಈ ವಿಧವಾದ ಅದ್ಭುತ ಶಕ್ತಿ ಸಂಪನ್ನರಾದ ಮಹಾತ್ಮರಿಗೂ ಶ್ರೀಮುಖ್ಯ-ಪ್ರಾಣನು ಅಂತರ್ಯಾಮಿಯಾಗಿದ್ದು, ಅವರೆಲ್ಲರಿಗೆ ಕಾಲಕಾಲಕ್ಕೆ ಯೋಗ್ಯ ಪ್ರೇರಕ-ನಾಗಿರುವನು. ಈ ವಿಧವಾದ ಅಚಿಂತ್ಯವಾದ ಸರ್ವಜ್ಞತ್ವವಿಲ್ಲದಿದ್ದರೆ, ಅನಂತ ಜೀವರಲ್ಲಿದ್ದು, ಅವರವರ ಪೂರ್ವಕರ್ಮಾದಿಗಳಿಗೆ ಅನುಗುಣವಾಗಿ ಪ್ರೇರಣೆ ಮಾಡುವುದೆಂತು?

(೨) ಯಾರೊಬ್ಬರಿಗೂ ಒಬ್ಬ ಗುರುವಿನಿಂದ ಸ್ವಯೋಗ್ಯಪೂರ್ಣ ಜ್ಞಾನವು ದೊರೆಯುವುದಿಲ್ಲ. ಆದರೆ ಬ್ರಹ್ಮದೇವನಿಗೆ ಮಾತ್ರ ಹಾಗಲ್ಲ. ಶ್ರೀವಿಷ್ಣುವು ಒಬ್ಬನೇ, ಯಾವ ಕಾಲಕ್ಕೂ ಆತನ ಗುರುವು. '*ಏಕಸ್ಮಾತ್ತು ಗುರೋರ್ಜ್ಞಾನಂ ಜಾಯತೇ ನೈವ ಕಸ್ಯಚಿತ್*'—ಒಬ್ಬ ಗುರುವಿನಿಂದ ಯಾರಿಗೂ ಜ್ಞಾನವು ಪೂರ್ಣವಾಗಿ ದೊರೆಯ ದೆಂದು ಹೇಳಿ '*ಏಕಸ್ಮಾದೇವ ಜಾಯೇತ ಯೋಗ್ಯಾದ್ಬ್ರಹ್ಮಪದಸ್ಯ ತು। ಸ್ವಯಂ ಚೋಪದಿಶೇತ್ ಜ್ಞಾನಂ ವೈರಿಂಚಿಪದಯೋಗಿನಿ। ಅನುಗ್ರಹಾತ್ತೇನ ಚಾಪಿ ಜ್ಞಾನಂ ದತ್ವಾ ವಿಮುಕ್ತಿದಃ। ಜ್ಞಾನಂ ಪ್ರಾಪ್ಯ ಬಹುಭ್ಯೋಽಪಿ ಸರ್ವೇ ಮುಕ್ತಿಶ್ಚತುರ್ಮುಖಾತ್*।

*ಜ್ಞಾನಮಪ್ರಾಪ್ಯ ತೇಷಾಂ ತು ಜ್ಞಾನದೋ ವಿಷ್ಣುರೇವ ಹಿ॥'* (ಗುರುವಿವೇಕ) ಎಂದರೆ, ಆದರೆ, ಬ್ರಹ್ಮಪದವಿಗೆ ಯೋಗ್ಯನಾದ ಒಬ್ಬ ಗುರುವಿನಿಂದ ಶ್ರೀಹರಿಯ ಅಪರೋಕ್ಷ ಜ್ಞಾನವುಂಟಾಗಲು ಶಕ್ಯವಿದೆ; ಆ ಬ್ರಹ್ಮಪದಯೋಗ್ಯ ಜೀವನಿಗೆ ಶ್ರೀಹರಿಯು ಸ್ವಯಂ ಉಪದೇಶಕನಾಗಿರುತ್ತಾನೆ; ಶ್ರೀಹರಿಯು ಬ್ರಹ್ಮದೇವನಲ್ಲಿ ವಿಶೇಷಾನುಗ್ರಹ ಮಾಡಿ, ಆತನಲ್ಲಿದ್ದು ಭಕ್ತರಿಗೆ ಜ್ಞಾನೋಪದೇಶ ಮಾಡುತ್ತಾನೆ; ಮೋಕ್ಷವನ್ನೂ ಕರುಣಿಸು-ತ್ತಾನೆ; ಬಹುಗುರುಗಳಿಂದ ಜ್ಞಾನವನ್ನು ಹೊಂದಿದರೂ, ಬ್ರಹ್ಮನಿಂದ ಉಪದೇಶ ಹೊಂದದೇ ಮೋಕ್ಷವಿಲ್ಲ; ಎಂದು ಹೇಳಲಾಗಿದೆ. ಇದರಿಂದ, ಶ್ರೀಹರಿಯು, ಋಜುಗಣದ ಜೀವರಿಗೆ (ಬ್ರಹ್ಮಪದ ಯೋಗ್ಯರಿಗೆ) ಏಕಮಾತ್ರ ಗುರುವೆಂದೂ, ಬ್ರಹ್ಮದೇವನೇ (ಬ್ರಹ್ಮಾಂತಸ್ಥ ಶ್ರೀಹರಿಯೇ) ಸಕಲ ಸಜ್ಜನರ ಮುಖ್ಯ ಗುರುವೆಂದೂ ಸಿದ್ಧವಾಗುತ್ತದೆ. ಬ್ರಹ್ಮನು ಚಿತ್ತಾಭಿಮಾನಿಯಾದ್ದರಿಂದ ಸರ್ವರ ಚಿತ್ತನಿಯಾಮಕ-ನಾಗಿದ್ದಾನೆ. ನಾನಾ ಜನ್ಮಗಳಲ್ಲಿ ನಾನಾ ಅವಸ್ಥೆಗಳಲ್ಲಿ ನಾನಾ ಗುರುಗಳಿಂದ ಜ್ಞಾನವನ್ನು ಸಂಪಾದಿಸುತ್ತ, ಸ್ವಯೋಗ್ಯ ಜ್ಞಾನಪೂರ್ಣನಾಗುವ, ಯಾವನೊಬ್ಬ ಜೀವನಿಗೆ, ಬಹುಗುರುಗಳಿರುವರಷ್ಟೆ. ಎಲ್ಲ ಗುರುಗಳ ಚಿತ್ತಾಭಿಮಾನಿಯಾದ ಬ್ರಹ್ಮದೇವನು, ಅವರ ಬುದ್ಧಿ ಪ್ರೇರಕನಾಗಿ ಅದರಿಂದ ಆಯಾ ಶಿಷ್ಯ ಜೀವಯೋಗ್ಯ ಜ್ಞಾನವನ್ನು ಉಪದೇಶ ಮಾಡಿಸುತ್ತಾನೆ. ಈ ಪ್ರಮೇಯವು, *'ಆಚಾರ್ಯ ಚೈತ್ಯವಪುಷಾ ಸ್ವಗತಿಂ ವ್ಯನಂಕ್ಷಿ'* (ಭಾಗವತ)—ಗುರು ಚಿತ್ತಾಭಿಮಾನಿಯಾದ ಬ್ರಹ್ಮಾಂತರ್ಯಾಮಿ ಶ್ರೀವಾಸುದೇವನೇ ಮೋಕ್ಷಪ್ರದ ಜ್ಞಾನೋಪದೇಶಕನೆಂದು ಹೇಳಿ, ಸಾಧಿಸಲ್ಪಟ್ಟಿದೆ. ಸರ್ವಗುರುಗಳ ಚಿತ್ತದಲ್ಲಿದ್ದು ಎಲ್ಲ ಜೀವರಿಗೆ ಎಲ್ಲ ಜ್ಞಾನೋಪದೇಶಕನಾದ್ದರಿಂದ, ಬ್ರಹ್ಮದೇವನೇ ಜಗದ್ಗುರುವು; ಈತನೇ ಶ್ರೀವಾಯುದೇವರು; ಭಾವಿ ಬ್ರಹ್ಮ-ನಾದ ಶ್ರೀವಾಯುದೇವರು ಬ್ರಹ್ಮನೆಂದೇ ಆಗಮಗಳಲ್ಲಿ ಬಹು ಸಂದರ್ಭಗಳಲ್ಲಿ ಕರೆಯಲ್ಪಡುತ್ತಾರೆ. ಆದ್ದರಿಂದ ಬ್ರಹ್ಮ ಶಬ್ದದಿಂದ ವಾಯುವನ್ನೂ ಗ್ರಹಿಸಬೇಕು.

ಎಲ್ಲರಿಗೂ ಜ್ಞಾನೋಪದೇಶಕನಾದ್ದರಿಂದ ಬ್ರಹ್ಮನು (ಶ್ರೀವಾಯುದೇವನು) 'ಸಾಧಾರಣ' ಗುರುವೆನಿಸುವನು. ಪ್ರತಿ ಜೀವನು, ಪರೋಕ್ಷಜ್ಞಾನ ಪರಿಪಕ್ವತೆಯನ್ನು ಹೊಂದಿ, ಭಗವದಪರೋಕ್ಷಕ್ಕೆ ಆವಶ್ಯಕವಾದ ಧ್ಯಾನ ಸಾಮರ್ಥ್ಯವನ್ನು ಪಡೆದ ನಂತರ, ಆತನ 'ಅಸಾಧಾರಣ' ಗುರುವೆಂದು ಕರೆಯಲ್ಪಡುವ, ನಿಯತ ಗುರುವು ಪ್ರಾಪ್ತನಾಗಿ ರಹಸ್ಯದಲ್ಲಿ ಸ್ವಬಿಂಬವನ್ನು ಉಪದೇಶಿಸಿ, ಬಿಂಬೋಪಾಸನೆಯ ಕ್ರಮವನ್ನು ಅನುಗ್ರಸುತ್ತಾನೆ. ನಿಯತ ಗುರುವಿನಲ್ಲಿಯೂ ಇದ್ದು ಬಿಂಬೋಪದೇಶ ಮಾಡುವವರು ಶ್ರೀವಾಯುದೇವರೇ; ಆದ್ದರಿಂದ ಸಕಲ ಗುರುಗಳ ಅಂತರ್ಯಾ-ಮಿಗಳು.

(೩) ಭಗವದನ್ಯತ್ರ ಅಸಂಗವೆಂದರೆ, ಭಗವಂತನಿಂದ ಬೇರೆಯಾದ ಯಾವ ವಸ್ತು ಅಥವಾ ವ್ಯಕ್ತಿಯಲ್ಲಿ ರಾಗ ದ್ವೇಷಗಳಲ್ಲಿ ಅವಕಾಶವೀಯುವ ಪ್ರಿಯಾಪ್ರಿಯಾದಿ ಭಾವನೆಗಳನ್ನು ಹೊಂದದಿರುವುದು. ಎಲ್ಲವೂ ಭಗವದಧೀನವೆಂದು ತಿಳಿದು, ಅವು-ಗಳೊಂದಿಗೆ ಅತ್ಯವಶ್ಯಕವಾದಷ್ಟು ಮಾತ್ರ ವ್ಯವಹರಿಸುವುದು. ಈ ಮನೋಭಾವವು, ಮೋಕ್ಷ ಕಾರಣಗಳಲ್ಲಿ ಹರಿಭಕ್ತಿಯೊಂದಿಗೆ ಪ್ರಧಾನ ಕಾರಣವೆಂಬುದು ಸರ್ವಶಾಸ್ತ್ರಗಳ ಮಥಿತಾರ್ಥವಾಗಿದೆ. '*ಶಾಸ್ತ್ರೇಷ್ವಿಯಾನೇವ ಸುನಿಶ್ಚಿತೋ ನೃಣಾಂ ಕ್ಷೇಮಸ್ಯ ಸಮ್ಯಗ್ವಿಮೃಶೇಷು ಹೇತುಃ। ಅಸಂಗ ಆತ್ಮವ್ಯತಿರಿಕ್ತವಸ್ತುನಿ ದೃಢಾ ರತಿರ್ಬ್ರಹ್ಮಣಿ ನಿರ್ಗುಣೇ ಚ ಯಾ॥*' (ಭಾಗವತ) ಎಂದರೆ—'ಪರಮಾತ್ಮಭಿನ್ನವಾದ ಸಕಲ ವಸ್ತುಗಳಲ್ಲಿ ಅಸಂಗವೂ, ಪ್ರಾಕೃತ ಗುಣರ್ರತನಾದ (ಶಾಸ್ತ್ರನಿರ್ಣೀತ ಅನಂತ ಕಲ್ಯಾಣಗುಣ ಪೂರ್ಣನಾದ-ನಿರ್ಗುಣನಾದ) ಬ್ರಹ್ಮನಲ್ಲಿ ದೃಢ ಭಕ್ತಿಯೂ, ಮೋಕ್ಷ-ಹೇತುಗಳೆಂಬುದು ಸರ್ವಶಾಸ್ತ್ರಗಳ ವಿಮರ್ಶೆಯಿಂದ ಸಿದ್ಧವಾಗುವ ನಿರ್ಣಯವು.' ೀಗೆಂಬ ಭಾಗವತೋಕ್ತಿಯು ಉಕ್ತ ಪ್ರಮೇಯವನ್ನೇ ನಿರೂಪಿಸುತ್ತದೆ. ಶ್ರೀವಾಯು-ದೇವರು ನಿರಂತರ ಹರಿಸ್ಮರಣೆಯುಕ್ತರು; ಅವರ ಸಕಲ ಕ್ರಿಯೆಗಳೂ ಹರಿಸ್ಮರಣ ಪೂರ್ವಕವೇ ನಡೆಯುತ್ತವೆ. ಅವರು, ಭಗವದಿತರ ಸರ್ವಸಂಗ ಪರಿತ್ಯಾಗ ಮಾಡಿದ ಮಹಾವಿರಕ್ತರು—ರುದ್ರಾದಿ ಅಶೇಷ ಜಗತ್ತಿಗೆ ವೈರಾಗ್ಯಪ್ರದರು—ಸಕಲ ಕರ್ಮಗಳ ಫಲಾಶೆಯನ್ನೂ, ಸ್ವತಂತ್ರ ಕರ್ತೃತ್ವಾಭಿಮಾನವನ್ನೂ, ಸಂಪೂರ್ಣವಾಗಿ ತೊರೆದ ಏಕಾಂತ ಭಕ್ತರಲ್ಲಿ ಶ್ರೇಷ್ಠರು.

**೧೩. ಸರ್ವತ್ರ ಸರ್ವದಾ ಸರ್ವಾಕಾರ ಸರ್ವಾಧಾರ ಸರ್ವಾಶ್ರಯ ಸರ್ವೋ-ತ್ಪಾದಕ ಸರ್ವಪಾಲಕ ಸರ್ವಸಂಹಾರಕ ಸರ್ವನಿಯಾಮಕ ಸರ್ವಪ್ರೇರಕ ಸರ್ವ-ಪ್ರವರ್ತಕ ಸರ್ವನಿವರ್ತಕ ಯಥಾಯೋಗ್ಯಂ ಸರ್ವಜ್ಞಾನಾಜ್ಞಾನಬಂಧಮೋಕ್ಷಪ್ರದ ಸರ್ವಸತ್ತಾಪ್ರದ ಸರ್ವಶಬ್ದವಾಚ್ಯ ಸರ್ವಶಬ್ದಪ್ರವೃತ್ತಿನಿಮಿತ್ತ ಸರ್ವಗುಣಾತಿ-ಪರಿಪೂರ್ಣತಮ ಸರ್ವದೋಷಾತಿದೂರ ಸರ್ವಾಚಿಂತ್ಯ ಸರ್ವೋತ್ತಮ ಸರ್ವೇಶ್ವರ ಸರ್ವಾತ್ಯಂತವಿಲಕ್ಷಣ ಸ್ವಗತಭೇದವಿವರ್ಜಿತತ್ವಾದಿನಾ ಭಗವದ್ದ್ರಷ್ಟೄಣಾಂ.....**

ಪ್ರತಿಪದಾರ್ಥ: ಸರ್ವತ್ರ—ಎಲ್ಲ ದೇಶದಲ್ಲಿರುವವನೂ, ಸರ್ವದಾ—ಎಲ್ಲ ಕಾಲ-ದಲ್ಲಿರುವವನೂ, ಸರ್ವಾಕಾರ—ಸರ್ವವಸ್ತು ಸದೃಶ ಅನಂತಾಕಾರಗಳುಳ್ಳವನೂ, ಸರ್ವಾ-ಧಾರ—ಸರ್ವವಸ್ತು ಸತ್ತಾಪ್ರದನೂ (ವಸ್ತುಗಳ ಅಸ್ತಿತ್ವಕ್ಕೆ ಸಹ ಕಾರಣನಾಗಿ ಸರ್ವವನ್ನೂ ಧರಿಸಿರುವವನೂ), ಸರ್ವಾಶ್ರಯ—ಸಕಲ ಜಗತ್ತಿಗೆ ರಕ್ಷಕತ್ವಾದಿ ಸರ್ವಪ್ರಕಾರದಿಂದ ಆಶ್ರಯನೂ, ಸರ್ವೋತ್ಪಾದಕ—ಸರ್ವಸೃಷ್ಟಿಕರ್ತನೂ, ಸರ್ವಪಾಲಕ—ಸರ್ವಪಾಲಕನೂ, ಸರ್ವಸಂಹಾರಕ—ಸರ್ವಲಯಕರ್ತನೂ, ಸರ್ವನಿಯಾಮಕ—ಸರ್ವವನ್ನೂ ವಶದಲ್ಲಿಟ್ಟು-

ಕೊಂಡು ನಿಯಮನ ಮಾಡುವವನೂ, ಸರ್ವಪ್ರೇರಕ—ಸರ್ವರ ಸರ್ವಪ್ರವೃತ್ತಿ ಪ್ರೇರಕನೂ, ಸರ್ವಪ್ರವರ್ತಕ—ಸರ್ವರ ಸರ್ವಕ್ರಿಯೆಗಳನ್ನು ಮಾಡಿ ಮಾಡಿಸುವವನೂ, ಸರ್ವ-ನಿವರ್ತಕ—ಸರ್ವರ ಸರ್ವಪ್ರವೃತ್ತಿಗಳಿಂದ ಂದಿರುಗಿಸುವವನೂ (ಪ್ರವೃತ್ತಿಗಳನ್ನು ಬಿಡಿಸು-ವವನೂ), ಯಥಾ ಯೋಗ್ಯಂ—ವಸ್ತು ಸ್ವಭಾವಗಳ ಯೋಗ್ಯತೆಗನುಗುಣವಾಗಿ, ಸರ್ವ-ಜ್ಞಾನಾಜ್ಞಾನ ಬಂಧಮೋಕ್ಷಪ್ರದ—ಸರ್ವರಿಗೆ ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳನ್ನು ಹೊಂದಿಸುವವನೂ, ಸರ್ವಸತ್ತಾಪ್ರದ-ಸರ್ವವಸ್ತುಗಳ ಸರ್ವಶಕ್ತಿಪ್ರದನೂ (ಅಥವಾ ಅಸ್ತಿತ್ವ-ಪ್ರದನೂ), ಸರ್ವಶಬ್ದವಾಚ್ಯ—ಸರ್ವಶಬ್ದ ಮುಖ್ಯವಾಚ್ಯನೂ, ಸರ್ವಶಬ್ದ ಪ್ರವೃತ್ತಿ ನಿಮಿತ್ತ (ತಮ್ಮಿಂದ ಬೋಧ್ಯವಾದ ಅರ್ಥಗಳನ್ನು ನಿರೂಪಿಸುವ) ಶಬ್ದಗಳ ಪ್ರವೃತ್ತಿಗೆ ಕಾರಣನೂ, ಸರ್ವಗುಣಾತಿ ಪರಿಪೂರ್ಣತಮ—ಸಕಲ ಸದ್ಗುಣಗಳಿಂದ ಅತ್ಯಂತ ಪರಿಪೂರ್ಣನೂ, ಸರ್ವದೋಷಾತಿದೂರ—ಸಕಲ ದೋಷರಹಿತನೂ, (ದೋಷಗಳಿಂದ ಅತ್ಯಂತ ದೂರನೂ —ದೋಷಗಂಧ ವಿಧುರನೂ), ಸರ್ವಾಚಿಂತ್ಯ—ರಮಾಬ್ರಹ್ಮಾದಿಗಳಿಂದ (ಪ್ರತ್ಯೇಕ ಅಥವಾ ಮಿಳಿತರಾಗಿ) ಚಿಂತಿಸಿ ಪೂರ್ಣಗೊಳಿಸಲಾಗದ ಅನಂತ ಮಹಿಮೆಗಳುಳ್ಳವನೂ, ಸರ್ವೋತ್ತಮ—ಸರ್ವಶ್ರೇಷ್ಠನೂ, ಸರ್ವೇಶ್ವರ—ಸರ್ವಸ್ವಾಮಿಯೂ, ಸರ್ವಾತ್ಯಂತ-ವಿಲಕ್ಷಣ—ಸರ್ವವಸ್ತುಗಳಿಂದ ಅತ್ಯಂತ ವಿಲಕ್ಷಣಗಳಾದ ಧರ್ಮಗಳ ಸ್ವರೂಪನೂ, ಸ್ವಗತ-ಭೇದವಿವರ್ಜಿತತ್ವಾದಿನಾ—ತನ್ನ ಅನಂತರೂಪಗಳಲ್ಲಿ ಪರಸ್ಪರವಾಗಿಯೂ, ಒಂದೊಂದು ರೂಪದ ಅವಯವ, ಗುಣ, ಕ್ರಿಯಾದಿಗಳಿಂದ ಸಹ ಅತ್ಯಂತ ಅಭಿನ್ನನೂ ಎಂಬೀ ಮುಂತಾದ ಪೂರ್ಣ ಭಾವನೆಗಳಿಂದ, ಭಗವದ್ದ್ರಷ್ಟೄಣಾಂ—ಭಗವಂತನ ಸ್ವರೂಪವನ್ನು ನಿತ್ಯ ನೋಡುತ್ತಿರುವವರಾದ (ನಿತ್ಯಾಪರೋಕ್ಷ ದರ್ಶನವುಳ್ಳವರಾದ)....

ತಾತ್ಪರ್ಯ: ಶ್ರೀಹರಿಯು ದೇಶಕಾಲಗಳಲ್ಲಿ ವ್ಯಾಪ್ತನು, ಎಂದರೆ ಎಲ್ಲ ದೇಶ ಕಾಲಗಳಲ್ಲಿರುವವನು (ಅವನಿಲ್ಲದ ಪ್ರದೇಶವಿಲ್ಲ ಮತ್ತು ಕಾಲವಿಲ್ಲ); ಚೇತನಾ ಚೇತನಾತ್ಮಕ ಸಕಲ ವಸ್ತು ಸದೃಶವಾದ ಅನಂತರೂಪಗಳುಳ್ಳವನು; ತತ್ತದ್ವಸ್ತುಗಳಲ್ಲಿ ತದಾಕಾರನಾಗಿದ್ದು, ಅವೆಲ್ಲವುಗಳ ಆಕಾರಗಳನ್ನೇ ನಿಯಂತ್ರಿಸುತ್ತಾನೆ; ಸಕಲ ಜಗತ್ತಿನ ಮೂಲಾಧಾರನು; ಮುಖ್ಯ ರಕ್ಷಕನಾಗಿ ಸರ್ವವಸ್ತುಗಳ ಸರ್ವ ಪ್ರಕಾರದ ಆಶ್ರಯ-ನಾಗಿದ್ದಾನೆ; ಸಕಲ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಯಥಾ ಯೋಗ್ಯವಾಗಿ ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳನ್ನು ಹೊಂದಿಸುವುದೆಂಬ ಎಂಟು ಪ್ರಕಾರದ ಕರ್ತೃತ್ವಗಳನ್ನು, ಸ್ವತಂತ್ರನಾಗಿ ಲೀಲೆಯಿಂದ ನಿರ್ವಹಿಸುತ್ತಾನೆ; ಸರ್ವ-ವಸ್ತುಗಳ ಸತ್ತಾಪ್ರದನಾಗಿದ್ದಾನೆ (ವಸ್ತುಗಳ ಅಸ್ತಿತ್ವ—ಇರುವಿಕೆ ಆತನ ಅಧೀನ; ಆತನು ಉಪೇಕ್ಷಿಸಿದರೆ ಯಾವ ವಸ್ತುವೂ ಇರುವುದೇ ಇಲ್ಲ); ಶ್ರೀಹರಿಯೇ ಸರ್ವ ಶಬ್ದವಾಚ್ಯನು; ಸಕಲ ಶಬ್ದಗಳ ಪ್ರವೃತ್ತಿಗೆ ಕಾರಣವಾದ ಸಕಲ ಸದ್ಧರ್ಮಗಳಿಂದ (ಕಲ್ಯಾಣ ಗುಣಗಳಿಂದ) ಪರಿಪೂರ್ಣನಾಗಿದ್ದಾನೆ; ಆತನ ಸಮೀಪಕ್ಕೆ ದೋಷ-ಗಳಾವುವೂ ಸುಳಿಯವು; ಅಚಿಂತ್ಯವಾದ ಅದ್ಭುತ ಜ್ಞಾನಸಾಮರ್ಥ್ಯವುಳ್ಳ ರಮಾ

ಬ್ರಹ್ಮಾದಿಗಳಿಂದ ಸಹ ಅಚಿಂತ್ಯವಾದ ಮಹಾಮ್ನುಮೆಗಳುಳ್ಳವನು; ತನ್ನ ರೂಪ, ಗುಣ, ಕ್ರಿಯಾದಿಗಳಿಂದ ಅತ್ಯಂತ ಅಭಿನ್ನನು; ಈ ಮೊದಲಾದ ಮ್ನುಮೆಗಳಿಂದ ಪೂರ್ಣನೆಂಬ ಜ್ಞಾನಸ್ಗತ(ಪ್ರತೀತಿಯುಕ್ತ)ವಾದ, ಶ್ರೀಹರಿಯ ನಿರಂತರ ಸಾಕ್ಷಾದ್ದರ್ಶನವುಳ್ಳವರು, ಶ್ರೀಮದಾಚಾರ್ಯರು.

ಪ್ರಮೇಯ ವಿವರಣೆ: (೧) *'ಚಿಚ್ಚೇತ್ಯಮೇತದಖಿಲಂ ಅಂಶಾಂಶ ಪ್ರತಿಬಿಂಬಿತಂ',* ಎಂದು ಚೇತನ-ಅಚೇತನಗಳೆಲ್ಲಕ್ಕೂ ಶ್ರೀಹರಿಯ ಪ್ರತಿಬಿಂಬತ್ವವೂ ಹೇಳಲಾಗಿದೆ. *'ತದಧೀನಸ್ತತ್ಸದೃಶೋ ಹರೇರ್ಜೀವೋ ನ ಸಂಶಯಃ। ಪ್ರತಿಬಿಂಬಸ್ಯ ಶಬ್ದಾರ್ಥೋ ಹ್ಯಯಮೇವ ಉದಾಹೃತಃ॥'* ಎಂದು ಬ್ರಹ್ಮಕಾಂಡ ಪುರಾಣದಲ್ಲಿ ಪ್ರತಿಬಿಂಬ ಶಬ್ದದ ಅರ್ಥವು ವಿವರಿಸಲ್ಪಟ್ಟಿದೆ; ಎಂದರೆ, ಬಿಂಬಾಧೀನವೂ ಬಿಂಬ ಸದೃಶವೂ (ಅತ ಏವ ಬಿಂಬ ಭಿನ್ನವೂ) ಆದುದೇ ಪ್ರತಿಬಿಂಬವು. ಪ್ರತಿಬಿಂಬರಾದ ಜೀವರಿಗೆ, ಬಿಂಬನಾದ ಶ್ರೀಹರಿಯಿಂದ ಸಾದೃಶ್ಯವು, ಜ್ಞಾನ-ಇಚ್ಛೆ-ಪ್ರಯತ್ನ (ಕ್ರಿಯಾಶಕ್ತಿ)ಗಳೇ ಸ್ವರೂಪವಾಗಿವುಳ್ಳವರೆಂಬ ಕಾರಣದಿಂದ ಮಾತ್ರ. ಬಿಂಬ ಪ್ರತಿಬಿಂಬರಾದ ಶ್ರೀಹರಿ ಮತ್ತು ಜೀವ ಚೇತನರಲ್ಲಿರುವ ಈ ಪ್ರಕಾರದ ಸಂಬಂಧವನ್ನು ತಿಳಿಸಲಿಕ್ಕೆ ಮಾತ್ರ, ಕನ್ನಡಿ-ಜಲ ಮೊದಲಾದವುಗಳಲ್ಲಿ ತೋರುವ ಪ್ರತಿಬಿಂಬಗಳ ದೃಷ್ಟಾಂತವನ್ನು ಕೊಡುವುದು—ಅಲ್ಲಿ ಕಂಡುಬರುವ ಜಲಾದಿ ಉಪಾಧಿಗಳ ಅಧೀನವಾದ ಉತ್ಪತ್ತಿಯುಳ್ಳವರೆಂದು ತಿಳಿಸಲಿಕ್ಕಲ್ಲ. ತಮೋಯೋಗ್ಯ ಜೀವರಲ್ಲಿ ಬಿಂಬ ಸಾದೃಶ್ಯವು ಅತ್ಯಲ್ಪ—ಚೇತನತ್ವ ಸತ್ತಾದಿಗಳ ವಿಷಯಕ್ಕೆ ಮಾತ್ರ. ಮುಕ್ತಿಯೋಗ್ಯ ಜೀವರಲ್ಲಿ ಬಿಂಬಸಾದೃಶ್ಯವು ಕಿಂಚಿದಧಿಕ—ಆನಂದಾದಿಗಳಿಂದ ಸಹ ಸಾದೃಶ್ಯವಿರುತ್ತದೆ. *'ಆನಂದೋ ನೇದೃಶಾನಂದಃ'* ಇತ್ಯಾದಿ ಶ್ರುತಿವಾಕ್ಯಗಳು ಈ ಸಾದೃಶ್ಯವನ್ನೂ ಹೇಗೆ ಗ್ರಸಬೇಕೆಂಬುದನ್ನು ಸೂಚಿಸುತ್ತವೆ. ಅವು ಶ್ರೀಹರಿಯ ಆನಂದವು (ಉಪಲಕ್ಷಣದಿಂದ ಜ್ಞಾನಾದಿ ಎಲ್ಲ ಗುಣಗಳೂ) ಅತ್ಯಂತ ವಿಲಕ್ಷಣವೆಂದು ಹೇಳುತ್ತವೆ. ಜೀವಾನುಭವಗೋಚರವಾದ (ಇಲ್ಲಿ ಅಥವಾ ಮುಕ್ತಿಯಲ್ಲಿನ) ಆನಂದದಿಂದ ವಿಜಾತೀಯವಾದುದು. ಜೀವಾನುಭವ ಗೋಚರವಾದ ಸುಖವನ್ನು 'ಆನಂದ'ವೆಂದು ಕರೆಯುವ ಮಾತ್ರದಿಂದ ಶ್ರೀಹರಿಯ ಸಜಾತೀಯ ಆನಂದವೆಂದು ಭ್ರಮಿಸಕೂಡದು. ಚೇತನಾಚೇತನ ಜಗತ್ತೆಲ್ಲವೂ ಶ್ರೀಹರಿಯ ಪ್ರತಿಬಿಂಬವಾದುದರಿಂದ, ಸರ್ವವಸ್ತುಗಳಲ್ಲಿ ತದಾಕಾರ (ತತ್ಸದೃಶ)ನಾಗಿ ಬಿಂಬನಾದ ಶ್ರೀಹರಿಯು ಇರುತ್ತಾನೆ. ಜೀವರಲ್ಲಿ ಪಶು, ಪಕ್ಷಿ, ವೃಕ್ಷ, ತೃಣಾದಿ ಸ್ವರೂಪವುಳ್ಳವರೂ ಇದ್ದಾರೆ; ಅವರುಗಳ ಬಿಂಬನಾದ ಶ್ರೀಹರಿಯು ತತ್ಸದೃಶರೂಪಗಳುಳ್ಳವನೇ ಆದರೂ, ಆತನ ರೂಪಗಳೆಲ್ಲವೂ ಸರ್ವಸಲ್ಲಕ್ಷಣಯುಕ್ತ ಸೌಂದರ್ಯರಾಶಿಗಳೇ—ಕುರೂಪದ ಆಕೃತಿ-

ಗಳು ಯಾವುವೂ ಎಂದೂ ಶ್ರೀಹರಿಗಿಲ್ಲ. ಜೀವದೇಹಗಳಲ್ಲಿರುವ ಊನ್ಯ-ೀನತೆಗಳು ಶ್ರೀಹರಿಯ ಅಧೀನಗಳು—ದುಃಖಾದಿಗಳಂತೆ—ಅತ ಏವ ಪ್ರತಿಬಿಂಬತ್ವವೂ ಉಂಟು. ಜಡವಸ್ತುಗಳೂ ಶ್ರೀಹರಿಯ ಪ್ರತಿಬಿಂಬಗಳೇ; ಅವುಗಳಲ್ಲಿ ಶ್ರೀಹರಿಯ ಅಧೀನತ್ವ, ಆಕಾರ, ಗುಣಗಳ ಅತ್ಯಲ್ಪ ಸಾದೃಶ್ಯಗಳನ್ನು ತಿಳಿಯಬೇಕು. '*ಭಗವತಿ ಸರ್ವಾಕಾರಾಣಾಂ ನಿತ್ಯಸಿದ್ಧತ್ವಾತ್*' (ಸ.ರ.ಮಾ) ಭಗವಂತನಲ್ಲಿ ಸರ್ವಾಕಾರಗಳು ನಿತ್ಯಸಿದ್ಧವಾದುದರಿಂದ ಚೇತನ-ಅಚೇತನ ಉಭಯಕ್ಕೂ ಪ್ರತಿಬಿಂಬತ್ವವು ಕೂಡುತ್ತದೆ.

(೨) ಜಗತ್ಸಂಬಂಧವಾದ ಸೃಷ್ಟ್ಯಾದಿ ಅಷ್ಟ ಕರ್ತೃತ್ವಗಳಲ್ಲಿ, ಸ್ವಭಾವದಿಂದಲೇ ಜ್ಞಾನೇಚ್ಛಾಕ್ರಿಯಾ ಶಕ್ತಿ ಶೂನ್ಯವಾದ ಅಚೇತನ ಜಗತ್ತಿಗೆ (ಜಡಕ್ಕೆ), ಜ್ಞಾನಾಜ್ಞಾನ ಬಂಧ-ಮೋಕ್ಷಗಳು ಕೂಡುವುದಿಲ್ಲ. ಚೇತನ ಜಗತ್ತಿಗೆ ಎಂಟೂ ಉಂಟು. ಈ ಕಾರಣದಿಂದಲೇ ಸೃಷ್ಟ್ಯಾದಿ ಮೊದಲಿನ ನಾಲ್ಕು ಕರ್ತೃತ್ವಗಳನ್ನು ಹೇಳುವುದರಲ್ಲಿ 'ಯಥಾಯೋಗ್ಯಂ' ಎಂದು ಹೇಳಲಿಲ್ಲ. ಅಚೇತನ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಮತ್ತು ನಿಯಮನಗಳನ್ನು ನಡೆಸುವ ಶ್ರೀಹರಿಯೇ ಗ್ರಹ-ನಕ್ಷತ್ರಾದಿಗಳ ಸಂಚಾರ ಮೊದಲಾದ ಜಡ ಕ್ರಿಯೆಗಳ ನಿಯಾಮಕನು; '*ಭೀಷೋದೇತಿ ಸೂರ್ಯಃ...*' ಇತ್ಯಾದಿ ಶ್ರುತಿಗಳು, ಶ್ರೀಹರಿಯ ಆಜ್ಞಾಭಂಗ ಭಯದಿಂದ ಸೂರ್ಯನು ಸಕಾಲದಲ್ಲಿ ಉದಯಾಸ್ತಗಳನ್ನು ಹೊಂದುವನೆಂದು ಮುಂತಾಗಿ ಹೇಳುವುದು ಅರ್ಥಪೂರ್ಣ-ವಾಗಿದೆ. ಪ್ರವರ್ತಕ, ನಿವರ್ತಕ ಶಬ್ದಗಳು, ಸರ್ವನಿಯಾಮಕತ್ವದ ವಿವರಣ ಪರಶಬ್ದಗಳೆಂದೂ ಭಾವಿಸಬಹುದಾಗಿದೆ.

ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಜೀವರಿಗೆ ಯಥಾಯೋಗ್ಯವಾಗಿ ಸಂಭ-ವಿಸುತ್ತವೆ. ಜೀವಸ್ವರೂಪ ಯೋಗ್ಯತೆ, ಅನಾದಿಕರ್ಮ, ಪುರುಷ ಪ್ರಯತ್ನಗಳೆಂಬ ಮೂರಂಶಗಳನ್ನು ಲಕ್ಷಿಸಿ, ಕಾಲಕಾಲಕ್ಕೆ ಯೋಗ್ಯವಾಗುವಂತೆ, ಶ್ರೀಹರಿಯು, ಜೀವ-ರನ್ನು ಪ್ರೇರಿಸಿ, ಅವರಿಗೆ ಜ್ಞಾನಾದಿಗಳನ್ನು ಕೊಡುತ್ತಾನೆ. '*ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ ಯಾऽನಾದಿಸಿದ್ಧಾ ಸರ್ವ ಜೀವೇಷು ನಿತ್ಯಾ। ಸಾ ಕಾರಣಾ ಪ್ರಥಮಂ ತು ದ್ವಿತೀಯಮನಾದಿಕರ್ಮೈವ ತಥಾ ತೃತೀಯಃ। ಜೀವ ಪ್ರಯತ್ನಃ ಪೌರುಷಾಖ್ಯಸ್ತದೇತತ್ ತ್ರಯಂ ವಿಷ್ಣೋರ್ವಶಗಂ ಸದೈವ। ಸ ಕಸ್ಯಚಿನ್ನ ವಶೇ ವಾಸುದೇವಃ ಪರಾತ್ಪರಃ ಪರಮೋಽಸೌ ಸ್ವತಂತ್ರಃ॥*' (ಭಾ.ತಾ.)—ಎಂದರೆ, ಜೀವಸ್ವಭಾವವೆಂಬುದೇ ಯೋಗ್ಯತೆಯು; ಅದು 'ಹಠ' ಎಂದೂ ಕರೆಯಲ್ಪಡುತ್ತದೆ ಮತ್ತು ಸರ್ವ ಜೀವರಲ್ಲಿ ಅನಾದಿ ಸಿದ್ಧವಾದುದು—ನಿತ್ಯವೂ ಆದುದು. ಜೀವರ ನಾನಾವಿಧ ಪ್ರವೃತ್ತಿಗೆ ಇದು ಮೊದಲನೆಯ ಕಾರಣವು. ಅನಾದಿ ಕರ್ಮವು ಎರಡನೆಯ ಕಾರಣ. ಪೌರುಷವೆಂದು ಕರೆಯಲ್ಪಡುವ ಜೀವ ಪ್ರಯತ್ನವು ಮೂರನೆಯ ಕಾರಣ.

ಇವು ಮೂರೂ ಸರ್ವದಾ ಶ್ರೀವಿಷ್ಣುವಶಗಳು—ವಿಷ್ಣು ಮಾತ್ರ ಯಾರ ವಶನೂ ಅಲ್ಲ. ಪರಾತ್ಪರನು ಸರ್ವೋತ್ತಮನು—ಸ್ವತಂತ್ರನು. 'ಯಥಾಯೋಗ್ಯಂ' ಎಂಬುದು ಜೀವ ತ್ರೈವಿಧ್ಯವನ್ನೂ ಸೂಚಿಸುತ್ತದೆ. ಜೀವ ಸ್ವರೂಪ ತ್ರೈವಿಧ್ಯ ವಿಷಯಕ್ಕೆ ವಾಕ್ಯ ೩, ಪ್ರಮೇಯ ವಿವರಣೆ (೧)ನ್ನು ನೋಡಬೇಕು. ಶ್ರೀಹರಿಯು, ಮುಕ್ತಿಯೋಗ್ಯರಿಗೆ ನಿತ್ಯಾನಂದ ಸ್ಥಿತಿಯನ್ನೂ, ನಿತ್ಯ ಸಂಸಾರಿಗಳಿಗೆ ಸುಖದುಃಖ ಮಿಶ್ರಗತಿಗಳನ್ನೂ, ತಮೋ ಯೋಗ್ಯರಿಗೆ ನಿತ್ಯದುಃಖಸ್ಥಾನಗಳನ್ನೂ ಹೊಂದಿಸುವುದಕ್ಕಾಗಿ, 'ಯಥಾಯೋಗ್ಯ' ಜ್ಞಾನಾಜ್ಞಾನ ಬಂಧಮೋಕ್ಷಗಳನ್ನು ಕೊಡುವನೆಂದೂ ತಿಳಿಯಬೇಕು.

(೩) ಉತ್ಪತ್ತಿ ವಿನಾಶಗಳುಳ್ಳ ಅನಿತ್ಯ ವಸ್ತುಗಳಿಗೆ ಮಾತ್ರ ಸೃಷ್ಟಿಕರ್ತನನ್ನು 'ಸತ್ತಾಪ್ರದ'ನೆಂದು ಕರೆಯಬಹುದೆನಿಸುತ್ತದೆ. ವಿನಾಶಪರ್ಯಂತ ಅವುಗಳನ್ನು ರಕ್ಷಿಸಿ-ಕೊಂಡು ಬರುವ ಸ್ಥಿತಿಕರ್ತನನ್ನೂ ಸತ್ತಾಪ್ರದನೆನ್ನಬಹುದು. ಆದರೆ ಅನಾದಿ ನಿತ್ಯವಾದ ಜೀವ ಸ್ವರೂಪಗಳು ಯಾರಿಂದಲೂ ಸ್ಪಷ್ಟವಲ್ಲ ಅವುಗಳಿಗೆ ನಾಶವೂ ಇಲ್ಲ. ಮೂಲ-ಪ್ರಕೃತಿ, ನಿತ್ಯಾಕಾಶ, ವೇದ ಮೊದಲಾದ ಇತರ ನಿತ್ಯಪದಾರ್ಥಗಳೂ ಇವೆ. ಇವೆಲ್ಲಕ್ಕೆ ಶ್ರೀಹರಿಯು ಹೇಗೆ ಸತ್ತಾಪ್ರದನೆಂಬುದನ್ನು ಗ್ರಸಬೇಕಾದುದು ಆವಶ್ಯಕ. '*ನಿತ್ಯೋ ನಿತ್ಯಾನಾಂ....*' ಎಂಬ ಶ್ರುತಿಯು, ಶ್ರೀಹರಿಯನ್ನು, ನಿತ್ಯವಸ್ತುಗಳಿಗೂ ನಿತ್ಯತ್ವ-ಪ್ರದನಾದ ಪರಮ ನಿತ್ಯಸ್ವರೂಪನೆಂದು ಹೇಳುತ್ತದೆ. ಇದರಿಂದ ನಿತ್ಯವಸ್ತುಗಳ ನಿತ್ಯತ್ವವೂ ಶ್ರೀಹರಿಯ ಅಧೀನವೆಂದು ಹೇಳಿದಂತಾಯಿತು. ಇತರ ಶ್ರುತಿಗಳು ಇದನ್ನೇ ದೃಢಪಡಿಸುತ್ತವೆ. '*ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವಚ। ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ॥*' (ಶ್ರುತಿ)—ಎಂದರೆ ದ್ರವ್ಯ, ಕರ್ಮ, ಕಾಲ, ಮೂಲ ಪ್ರಕೃತಿ, ಜೀವ ಇವೆಲ್ಲವೂ ಶ್ರೀಹರಿಯ ಅನುಗ್ರಹದಿಂದ ಇರುತ್ತವೆ; ಶ್ರೀಹರಿಯು ಉಪೇಕ್ಷಿಸಿದರೆ ಇವು ಯಾವುವೂ ಇರುವುದಿಲ್ಲ. ಈ ಶ್ರುತಿಯೂ, ಶ್ರೀಹರಿಯು ಇವೆಲ್ಲಕ್ಕೆ ಸತ್ತಾಪ್ರದನೆಂದು ಹೇಳುತ್ತದೆ. ನಿತ್ಯವಸ್ತುಗಳ ನಿತ್ಯತ್ವವನ್ನು ರಕ್ಷಿಸುತ್ತೇನೆಂಬುದು ಶ್ರೀಹರಿಯ ಸಂಕಲ್ಪ—ಅವನು ಸತ್ಯಸಂಕಲ್ಪನು. ಅನಾದಿ ನಿತ್ಯನಾದ ಜೀವನನ್ನು ನಿತ್ಯನಾಗಿಯೇ ಇಡುವೆನೆಂಬ ಸಂಕಲ್ಪವನ್ನು ಶ್ರೀಹರಿಯು ತ್ಯಜಿಸಿದರೆ (ಉಪೇಕ್ಷೆ ಮಾಡಿದರೆ—ನಿತ್ಯತ್ವ ರಕ್ಷಣೆಯಲ್ಲಿ ಉದಾಸೀನ-ನಾದರೆ), ಜೀವ ಸ್ವರೂಪವೂ ನಾಶಹೊಂದುತ್ತದೆ. .ಗೆ ನಿತ್ಯವಸ್ತುಗಳ ವಿನಾಶವೂ ಶ್ರೀಹರಿಯ ಅಧೀನವಾದುದರಿಂದ, ಆತನು ಸರ್ವಸತ್ತಾಪ್ರದನು. ಸ್ಥಿತಿ ಕಾಲದಲ್ಲಿ ಸ್ವತಂತ್ರ ಕರ್ತನಾದ ತಾನು ಜೀವರಿಂದ, ಅವರ ಸ್ವಗತಿಯನ್ನು ಹೊಂದಿಸಲು ಕಾಲಕಾಲಕ್ಕೆ ಮಾಡಿಸಬೇಕಾದ ಕ್ರಿಯೆಗಳನ್ನು ಮಾಡಿ ಮಾಡಿಸಿ ರಕ್ಷಿಸುವುದರಿಂದ ಸಹ ಶ್ರೀಹರಿಯು ಸರ್ವಸತ್ತಾಪ್ರದನು.

(೪) ಶ್ರೀಹರಿಯು ಸರ್ವಶಬ್ದವಾಚ್ಯನೆಂಬ ಪ್ರಮೇಯ ವಿವರಣೆಯನ್ನು ವಾಕ್ಯ ೧, ಪ್ರಮೇಯ ವಿವರಣೆ (೧-೨)ನ್ನು ನೋಡಬಹುದು. ಶ್ರೀಹರಿಯು ಸರ್ವಶಬ್ದ ಪ್ರವೃತ್ತಿ ನಿಮಿತ್ತನೆಂದರೆ, ಸರ್ವಶಬ್ದ ವಾಚ್ಯನೆಂದೇ ಪರ್ಯವಸಿತವಾಗುವ ಅರ್ಥ. ತಮ್ಮಿಂದ ಹೇಳಲಾಗುವ ಅರ್ಥಗಳನ್ನು (ವಸ್ತು ಅಥವಾ ವಿಷಯಗಳನ್ನು) ತಿಳಿಸಲು ಶಬ್ದಗಳು ನಿರ್ವಹಿಸುವ ವ್ಯಾಪಾರವನ್ನು (ಅರ್ಥ ಪ್ರತಿಪಾದಕ ವ್ಯವಹಾರವನ್ನು) ಶಬ್ದಪ್ರವೃತ್ತಿ-ಯೆನ್ನಬಹುದು. ಶಬ್ದಪ್ರವೃತ್ತಿಗೆ ಕಾರಣ (ನಿಮಿತ್ತ)ನೆಂದರೆ, ಅವು ತನ್ನನ್ನೇ ತಮ್ಮ ಅರ್ಥನೆಂದು ಹೇಳಲು ಹೊರಟಿವೆಯೆಂದರ್ಥ. ಸರ್ವ ಶಬ್ದಗಳೂ ಹೀಗೆ ಶ್ರೀಹರಿ-ವಾಚಕಗಳಾದರೆ, ಶಬ್ದಗಳು ಅನ್ಯವಸ್ತುಗಳನ್ನು ತಿಳಿಸುವುದು ಹೇಗೆಂಬ ಸಂಶಯವು ಪರಿಹಾರವಾಗಬೇಕಷ್ಟೆ. ಇದಕ್ಕೆ ಶಬ್ದಪ್ರವೃತ್ತಿ ಪ್ರಕಾರ ವಿಶೇಷಗಳನ್ನು ತಿಳಿಯಬೇಕಾ-ದುದು ಅವಶ್ಯಕ. ಶಬ್ದಪ್ರವೃತ್ತಿಗಳು, ಪರಮಮುಖ್ಯವೃತ್ತಿ, ಮುಖ್ಯವೃತ್ತಿ, ಲಕ್ಷಣಾ, ಗೌಣೀ, ಉಪಚಾರ, ರೂಢೋಪಚಾರ, ರೂಢಲಕ್ಷಣಗಳೆಂದು ಬಹು ಪ್ರಕಾರ ವಾಗಿವೆ. ಈ ವಿಷಯಕ ವಿವರಗಳನ್ನು ಗುರುಮುಖದಿಂದ ಶಾಸ್ತ್ರಾಭ್ಯಾಸಮಾಡಿ ತಿಳಿಯಬೇಕು. ಪರಮ ಮುಖ್ಯವೃತ್ತಿಯಿಂದ ಎಲ್ಲ ಶಬ್ದಗಳು ಪರಮಾತ್ಮನನ್ನೇ (ಆತನ ಮಹಿಮೆಗಳನ್ನು—ಧರ್ಮಗಳನ್ನು—ಗುಣಗಳನ್ನು) ಹೇಳುತ್ತವೆ. ಈ ವೃತ್ತಿಯು, ಮಹಾ-ಯೋಗ—ಮಹಾರೂಢಿಗಳೆಂದು ದ್ವಿವಿಧವಾಗಿದೆ. ಇಂದ್ರಶಬ್ದವು ಯೋಗವೃತ್ತಿ-ಯಿಂದ (ಅವಯವಾರ್ಥದಿಂದ) ಐಶ್ವರ್ಯವುಳ್ಳ ಇಂದ್ರನಾಮಕ ಸ್ವರ್ಗಾಧಿಪತಿ-ಯನ್ನು ಹೇಳಿದರೆ, ಮಹಾಯೋಗ ವೃತ್ತಿಯಿಂದ ಪರಮಾತ್ಮನನ್ನೇ ಹೇಳುತ್ತದೆ. ಯೋಗವೃತ್ತಿಯೆಂಬುದು ಮುಖ್ಯವೃತ್ತಿಯ ಪ್ರಭೇದಗಳಲ್ಲಿ ಒಂದು; ಮುಖ್ಯವೃತ್ತಿಯು, ಯೋಗ-ರೂಢಿಯೋಗ-ರೂಢಿ ಎಂದು ಮೂರು ವಿಧ. ಐಶ್ವರ್ಯಾದಿಗಳು ಪರಮಾತ್ಮನಲ್ಲಿ ನಿರವಧಿಕವಾಗಿವೆ ಮತ್ತು ಸ್ವರ್ಗಾಧಿಪತಿ ಇಂದ್ರನ ಐಶ್ವರ್ಯಾದಿಗಳು ಆತನ ಅಧೀನಗಳಾಗಿವೆ. ನಾರಾಯಣ, ವಿಷ್ಣು ಮೊದಲಾದ ಕೆಲವು ಶಬ್ದಗಳು ವೇದಾದಿಗಳಲ್ಲಿ ಪರಮಾತ್ಮವಾಚಕವೆಂಬ ರೂಢಿಯುಳ್ಳವಾಗಿವೆ. ಅನ್ಯತ್ರ ಉಪ-ಯೋಗಿಸಲ್ಪಡದೇ ಪರಮಾತ್ಮನಲ್ಲಿ ಮಾತ್ರ ಉಪಯೋಗಿಸಲ್ಪಡುವುದೆಂಬ, ಮಹಾ-ಯೋಗರೂಢಿನಾಮಕ ಪರಮ ಮುಖ್ಯ ಪ್ರವೃತ್ತಿಯುಳ್ಳವುಳ್ಳವುಗಳೆಂದು ಹೇಳಲ್ಪಡು-ತ್ತದೆ. ಇವು ತಮ್ಮ ಅವಯವಾರ್ಥದಿಂದ ಸಹ (ಮಹಾರೂಢಿ ಮಾತ್ರವಲ್ಲದೇ—ಯೋಗದಿಂದ ಸಹ) ಗುಣಪೂರ್ಣತ್ವ, ಸರ್ವತ್ರ ವ್ಯಾಪ್ತತ್ವ, ಮೊದಲಾದ ಪರಮಾತ್ಮನ ಧರ್ಮಗಳನ್ನು ಹೇಳುತ್ತವೆ.

(೫) 'ನೇತಿ ನೇತಿ' ಎಂಬ ಶ್ರುತಿಯು, ಪರಮಾತ್ಮನಿಗೆ ಸ್ತ್ರೀಯಲ್ಲ, ಪುರುಷನಲ್ಲ ಇತ್ಯಾದಿಯಾಗಿ ಜಗದ್ವಿಲಕ್ಷಣತ್ವವನ್ನು ಹೇಳುತ್ತದೆ. ಶ್ರೀಹರಿಗೆ ಪ್ರಾಕೃತ ಸ್ತ್ರೀತ್ವ

ಪುರುಷತ್ವಗಳಿಲ್ಲ; ಪರಂತು ಅಪ್ರಾಕೃತ ಜ್ಞಾನಾನಂದಾತ್ಮಕ ಸ್ತ್ರೀ ಪುರುಷ ಉಭಯ ರೂಪಗಳೂ ಪರಮಾತ್ಮನಿಗೆ ಅನಂತವಾಗಿವೆ. ..ಗೆ ಇದಲ್ಲ—ಅದೂ ಅಲ್ಲವೆಂಬ ಕ್ರಮದಿಂದ, ಎಲ್ಲವನ್ನೂ ನಿಷೇಧಿಸಿ ಪರಿಶೇಷದಿಂದ ಉಳಿಯುವ ವಸ್ತುವೆಂದು ಪರಮಾತ್ಮನನ್ನು ನಿರೂಪಿಸುವ ವಾಕ್ಯಗಳು ಸರ್ವಭಿನ್ನ ಮತ್ತು ವಿಲಕ್ಷಣನೆಂದು ಹೇಳುತ್ತವೆ. ಈ ಪ್ರಮೇಯವು ಈ ವಾಕ್ಯದಲ್ಲಿರುವ 'ಸರ್ವಾತ್ಯಂತ ವಿಲಕ್ಷಣ'ನೆಂಬ ಶಬ್ದದಿಂದ ಸೂಚಿತವಾಗಿದೆ.

(೬) ಶ್ರೀಹರಿಯು ಸ್ವಗತಭೇದವಿವರ್ಜಿತನೆಂದರೆ, ಆತನ ಅನಂತ ರೂಪಗಳಲ್ಲಿ ಪರಸ್ಪರ (ಒಂದಕ್ಕೊಂದು) ಭೇದವಿಲ್ಲವೆಂದೂ, ಒಂದೊಂದು ರೂಪಕ್ಕೂ ಅದರ ಅವಯವ, ಗುಣ, ಕ್ರಿಯಾದಿಗಳಿಗೂ ಯಾವ ಭೇದವಿಲ್ಲೆಂದೂ ಪ್ರತಿರೂಪದ ಗುಣ ಕ್ರಿಯಾದಿಗಳಿಗೆ ಸಹ ಪರಸ್ಪರ ಭೇದವಿಲ್ಲೆಂದೂ ಅರ್ಥ. '*ನೇಹ ನಾನಾಸ್ತಿ ಕಿಂಚನ*' ಮುಂತಾದ ಶ್ರುತಿಗಳು, ಪರಮಾತ್ಮನ ರೂಪ, ಗುಣ, ಕ್ರಿಯಾದಿಗಳಲ್ಲಿ ಯಾವ ಭೇದವಿಲ್ಲೆಂದೂ, ಭೇದಾಭೇದವೂ ಇಲ್ಲೆಂದೂ ಹೇಳುತ್ತವೆ. ಪರಮಾತ್ಮನ ಜ್ಞಾನ, ಆನಂದಾದಿ ಗುಣಗಳೂ ಪರಸ್ಪರ ಅಭಿನ್ನಗಳೇ. ..ಗೆ ಅತ್ಯಂತ ಅಭೇದವಿದ್ದರೂ ಭೇದವಿದ್ದಂತೆ ಹೇಳುವುದು ಮತ್ತು ವ್ಯವಹರಿಸುವುದು, 'ವಿಶೇಷ' ಬಲದಿಂದ. ಈ ಪ್ರಮೇಯದ ವಿವರಣೆಯ ಬಗ್ಗೆ ವಾಕ್ಯ ೯, ಪ್ರ.ವಿ. (೩) ನ್ನು ನೋಡಬಹುದು.

೧೪. ಅಭಿಮಾನಾದಿ ಸರ್ವದೋಷದೂರಾಣಾಂ, ಅಸೂಯೇರ್ಷ್ಯಾದ್ಯಶೇಷ ಮನೋದೋಷ ನಿವರ್ತಕಾನಾಂ.....

ಪ್ರತಿಪದಾರ್ಥ: ಅಭಿಮಾನಾದಿ—ಅಭಿಮಾನವೇ ಮೊದಲಾದ, ಸರ್ವದೋಷ ದೂರಾಣಾಂ—ಸಮಸ್ತ ದೋಷ ರ‍ಹಿತರಾದ, ಅಸೂಯೇರ್ಷ್ಯಾದಿ—ಅಸೂಯೆ, ಈರ್ಷ್ಯಾ ಮೊದಲಾದ, ಅಶೇಷ ಮನೋದೋಷ ನಿವರ್ತಕಾನಾಂ—ಸಮಸ್ತ ಮನೋದೋಷಗಳನ್ನು ಪರಿಹರಿಸುವವರಾದ;

ತಾತ್ಪರ್ಯ: ಶ್ರೀವಾಯುದೇವರು ಅಭಿಮಾನವಿಲ್ಲದವರು—ಪರಮಾತ್ಮನನ್ನು ಪ್ರತಿಕ್ಷಣದಲ್ಲಿ ಅನನ್ಯರಾಗಿ ಶರಣುಹೊಂದಿರುವ ಶುದ್ಧಾಂತಃಕರಣರು; ಅತ ಏವ ಸ್ವಭಕ್ತರ ಮನೋಗತವಾದ ಅಸೂಯೆ ಮೊದಲಾದ ದೋಷಗಳನ್ನು ಪರಿಹರಿಸಿ, ಶುದ್ಧಮನಸ್ಕರನ್ನಾಗಿ ಮಾಡುವ ಸಾಮರ್ಥ್ಯವುಳ್ಳವರು;

ಪ್ರಮೇಯ ವಿವರಣೆ: 'ಬ್ರಹ್ಮಾ ನಿರಭಿಮಾನಿತ್ವಾತ್ ಶಾರೀರೋಪ್ಯಶರೀರ-ವಾನ್'—ಬ್ರಹ್ಮವಾಯುಗಳು ಪ್ರಾಕೃತ ಶರೀರವುಳ್ಳವರಾದರೂ, ಅಭಿಮಾನ ರಹಿತ-ರಾದ್ದರಿಂದ, ಅಶರೀರಿಗಳೆಂದೇ ಹೇಳಲ್ಪಡುತ್ತಾರೆಂದೂ, 'ಸತ್‌ಜ್ಞಾನಾಯಾನಂದ ವಿಜ್ಞಾನ ಮೂರ್ತೀ'—ಜ್ಞಾನಾನಂದ ರೂಪರಾದ ಶ್ರೀವೇದವ್ಯಾಸರೂ ಮತ್ತು

ಆನಂದತೀರ್ಥರೂ ಬದರಿಕಾಶ್ರಮದಲ್ಲಿ ವಿರಾಜಮಾನರಾದರೆಂದೂ, ಹೇಳುವ ಈ ಪ್ರಮಾಣವಾಕ್ಯಗಳು ಮತ್ತು ಇತರ ಬಹು ಪ್ರಮಾಣವಾಕ್ಯಗಳೂ ಬ್ರಹ್ಮವಾಯುಗಳನ್ನು ದೇಹವಿದ್ದರೂ ಇಲ್ಲದವರೆಂದು ಸ್ಪಷ್ಟವಾಗಿ ನಿರೂಪಿಸಿ, ಅಭಿಮಾನ ರ್ಾತ್ಯವನ್ನೇ ಹೇತುವನ್ನಾಗಿ ಹೇಳುತ್ತವೆ. ಅಭಿಮಾನವೆಂದರೆ, ರಾಗ ದ್ವೇಷಗಳಿಂದ ಹುಟ್ಟುವ ಸುಖದುಃಖ, ಜಯಾಪಜಯಾದಿ ದ್ವಂದ್ವಗಳಲ್ಲಿ ಅಹಂ-ಮಮಕಾರಗಳುಳ್ಳವ-ರಾಗುವುದು. ಎಂದರೆ, ಈ ದ್ವಂದ್ವ ಭಾವಗಳಿಗೆ ತಾನೇ ಸ್ವತಂತ್ರ ಕಾರಣನೆಂದು ತಿಳಿಯುವುದು ಮತ್ತು ಸ್ವೇತರ ವಸ್ತುಗಳಲ್ಲಿ—ಸ್ವದೇಹೇಂದ್ರಿಯಾದಿಗಳಲ್ಲಿ ಸಹ ತನ್ನ ಅಧೀನಗಳೆಂಬ ಸ್ವಾಮಿತ್ವ ಬುದ್ಧಿಯನ್ನುಳ್ಳವನಾಗುವುದು. ಈ ಅಹಂ ಮಮಕಾರಗಳೇ ಜೀವನನ್ನು ಸಂಸಾರದಲ್ಲಿ ಸುತ್ತಿಸುವ ಮೂಲಕಾರಣಗಳು. ಶ್ರೀವಿಷ್ಣುವೊಬ್ಬನೇ ಸ್ವತಂತ್ರನು—ಅನ್ಯರಾರೂ ಅಲ್ಲವೇ ಅಲ್ಲ; ಜಗತ್ತೆಲ್ಲವೂ ಆತನ ವಶದಲ್ಲಿದೆ. ..ೀಗಿ-ದ್ದರೂ ತನಗೂ ಕಿಂಚಿತ್ ಸ್ವಾತಂತ್ರ್ಯವುಂಟೆಂದು ತಿಳಿಯುವುದು ಅಹಂಕಾರ-ವೆನಿಸುತ್ತದೆ—ನಾಹಂ ಕರ್ತಾ ಹರಿಃ ಕರ್ತಾ ಎಂದು ತಿಳಿಯದೇ ಅಹಂಕರ್ತಾ ಎಂದು ತಿಳಿಯುವುದು. ರಮಾ ಬ್ರಹ್ಮಾದಿ ಸಕಲ ಜಗತ್ತು ಶ್ರೀಹರಿಯ ಅಧೀನವಾಗಿ ಆತನ ಸ್ವಾಮ್ಯಕ್ಕೆ ಒಳಪಟ್ಟಿರಲು, ತನ್ನ ವ್ಯವಹಾರಕ್ಕೊಳಪಟ್ಟ ದಾರಾಪುತ್ರ ಪಶು ಗೃಹಾದಿ-ಗಳನ್ನು ತನ್ನ ದೇಹೇಂದ್ರಿಯಗಳನ್ನು ಸಹ ತನ್ನವೆಂದು ಭ್ರಮಿಸುವುದು ಮಮತ್ವ-ವೆನಿಸುತ್ತದೆ. ಅಹಂಮಮಕಾರ ರೂಪದ ಈ ಅಭಿಮಾನ, ರಾಗ ದ್ವೇಷಗಳಿಂದ ಹುಟ್ಟುತ್ತದೆ. ಅಭಿಮಾನವೇ ರಾಗ ದ್ವೇಷಾತ್ಮಕವೆಂದು ಹೇಳುವುದೂ ಉಂಟು. ಇದು ನನಗೆ ಪ್ರಿಯ—ಇದು ಅಪ್ರಿಯವೆಂಬ ಭಾವನೆಗಳನ್ನು ಭಗವದಿತರ ಜಗದ್ವಸ್ತುಗಳಲ್ಲಿ ಹೊಂದುವುದು ರಾಗ ದ್ವೇಷಗಳೆನಿಸುತ್ತವೆ. ಈ ಮನೋಭಾವವು ಸ್ಥೂಲದೇಹ-ಸ್ಥತನಾಗಿ ಸೃಷ್ಟಿಯಲ್ಲಿ ಬರುವಾಗಲೇ ಉಂಟಾಗುತ್ತವೆ. ಈ ರಾಗ ದ್ವೇಷಗಳು ಮತ್ತು ಅದರಿಂದ ಉಂಟಾಗುವ ಮೋಹವು, ಸೃಷ್ಟಿ ಕಾಲದಲ್ಲಿ ಸರ್ವಜೀವರಿಗೂ, ಪ್ರಾಕೃತ ದೇಹ ಸಂಬಂಧದಿಂದ, ತಪ್ಪದೇ ಉಂಟಾಗುತ್ತದೆ. ಮುಕ್ತಿಯೋಗ್ಯ ಜೀವರಿಗೆ, ಸಾಧನ ಮಾರ್ಗದಲ್ಲಿ ಮುಂದರಿದಂತೆ ಈ ಮೋಹವು ಕಡಿಮೆಯಾಗುತ್ತಾ ಹೋಗಿ, ಕಡೆಗೆ ಶ್ರೀಹರಿ ಪ್ರಸಾದದಿಂದ ಪೂರ್ಣವಾಗಿ ತೊಲಗಿಹೋಗುತ್ತದೆ. ಈ ರಹಸ್ಯ ಪ್ರಮೇಯವು ಗೀತೆಯಲ್ಲಿ..ೀಗೆ ನಿರೂಪಿಸಲ್ಪಟ್ಟಿದೆ: '*ಇಚ್ಛಾದ್ವೇಷ ಸಮುತ್ಥೇನ ದ್ವಂದ್ವಮೋಹೇನ ಭಾರತ। ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ॥*' ಎಂದರೆ, ಸರ್ವರಿಗೂ ಸೃಷ್ಟಿ ಕಾಲದಲ್ಲಿ (ಜೀವನು ಸಾಧನ ದೇಹಕ್ಕೆ ಪ್ರವೇಶಗೊಳಿಸಲ್ಪಟ್ಟ ಕಾಲದಿಂದ) ಇಚ್ಛಾ (ರಾಗ) ದ್ವೇಷಗಳೂ ಅವುಗಳಿಂದ ದ್ವಂದ್ವಮೋಹವೂ ಉಂಟಾಗುತ್ತವೆ. ದ್ವಂದ್ವಮೋಹದಿಂದ ಸಕಲಜೀವರೂ ಅಧಿಕ-ವಾಗಿ ಮೋಹಗೊಳ್ಳುತ್ತಾರೆ. ದ್ವಂದ್ವಮೋಹವೇ ಅಹಂ-ಮಮಕಾರರೂಪವಾದುದು.

ದ್ವಂದ್ವಮೋಹ ಶಬ್ದಾರ್ಥವು ಗೀತಾತಾತ್ಪರ್ಯದಲ್ಲಿ ..ೀಗೆ ನಿರೂಪಿಸಲ್ಪಟ್ಟಿದೆ: *'ಜೀವಧರ್ಮಾನ್ ಈಶ್ವರೇ ತು ಯೋ ಜೀವೇಷ್ವೈಶ್ವರಾನಪಿ। ವೇತ್ತಿಜೀವೇಶ್ವರೈಕ್ಯಂ ವಾ ದ್ವಂದ್ವಮೋಹೀ ಸ ಉಚ್ಯತೇ॥'* ಎಂದರೆ, (ಅಲ್ಪಜ್ಞತ್ವ-ಅಸ್ವಾತಂತ್ರ್ಯ ಮುಂತಾದ) ಜೀವನಿಷ್ಠ ಧರ್ಮಗಳನ್ನು, ಶ್ರೀಹರಿಯಲ್ಲಿಯೂ, ಶ್ರೀಹರಿಯ ಧರ್ಮಗಳನ್ನು (ಸರ್ವಜ್ಞತ್ವ-ಸ್ವಾತಂತ್ರ್ಯಾದಿಗಳನ್ನು) ಜೀವರಲ್ಲಿಯೂ, ಅಥವಾ ಜೀವೇಶ್ವರೈಕ್ಯವನ್ನಾಗಲಿ ತಿಳಿಯುವವನು 'ದ್ವಂದ್ವಮೋ..ೀ' ಎನಿಸುತ್ತಾನೆ. ..ೀಗೆ ಇಲ್ಲದ ಸ್ವಾತಂತ್ರ್ಯವನ್ನು ತಿಳಿಯುವುದು ಅಹಂಕಾರ, ಇಲ್ಲದ ಸ್ವಾಮಿತ್ವವನ್ನು ಆರೋಪಿಸಿಕೊಳ್ಳುವುದು ಮಮಕಾರವು— ಈ ಉಭಯಗಳೇ ಜೀವನು ಸಂಸಾರದಲ್ಲಿ ಸುತ್ತಲು ಮುಖ್ಯ ಕಾರಣ. 'ತನುವೆ ತಾನೆಂಬುವನು ಸತಿ ಸುತಾದಿಗಳೆನ್ನವೆಂಬುವ...' ಇತ್ಯಾದಿ (ಹರಿಕಥಾಮೃತಸಾರ, ಮತ್ತು *'ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ ಸ್ವಧೀಃ ಕಲತ್ರಾದಿಷು...'* ಇತ್ಯಾದಿ (ಭಾಗವತ) ಪ್ರಮಾಣವಾಕ್ಯಗಳು ಹೇಳುವಂತೆ, ದೇಹವೇ ತಾನೆಂದೂ ಪತ್ನೀಪುತ್ರಾದಿಗಳು ತನ್ನವರೆಂದೂ ತಿಳಿಯುವುದೂ ಅಹಂ-ಮಮಕಾರಗಳೇ. ಈ ಪ್ರಕಾರದ ದುರಭಿಮಾನವುಳ್ಳವರು ಪ್ರಸಿದ್ಧ ಚಾರ್ವಾಕರು.

ರಾಗ ದ್ವೇಷಗಳಿಂದ (ಅಭಿಮಾನದಿಂದ) ಹುಟ್ಟುವವು, ಅಸೂಯಾದಿ ದೋಷ-ಗಳು. ಅಸೂಯೆಯೆಂದರೆ, ಅನ್ಯರಲ್ಲಿರುವ ಸದ್ಗುಣಗಳನ್ನು ಗಣನೆಗೆ ತರದೇ, ಇಲ್ಲದ ದೋಷಗಳನ್ನಾರೋಪಿಸುವುದು. ಪರೋತ್ಕರ್ಷವನ್ನು (ಜಯ ಸಂಪದಾದಿಗಳನ್ನು) ಕಂಡು ಸ್ಸಸದೇ ತಳಮಳಗೊಳ್ಳುವುದು ಈರ್ಷ್ಯೆ. ಈ ಮುಂತಾದ ದೋಷಗಳು ಕಾಮ, ಕ್ರೋಧಾದಿ ಅರಿಷಡ್ವರ್ಗಗಳಿಂದ ಎಂದರೆ, ತದಭಿಮಾನಿಗಳಾದ ಕಾಲನೇಮಿ ಮೊದಲಾದ ದೈತ್ಯರಿಂದ ಉಂಟಾಗುತ್ತವೆ. ಯಾವ ದೈತ್ಯನೂ ಎಂದೂ ಸಮೀಪಿಸ-ಲಾಗದವರೂ (ಶರೀರಾದಿಗಳ ಅಭಿಮಾನವನ್ನು ಪೂರ್ಣ ಪರಿತ್ಯಾಗ ಮಾಡಿದವರೂ ಆದ ಶ್ರೀವಾಯುದೇವರಲ್ಲಿ) ಅಸೂಯಾದಿ ದೋಷಗಳು ಸರ್ವಥಾ ಇರಲು ಅವಕಾಶವೇ ಇಲ್ಲ. ಈ ವಿಧ ಮಹಾತ್ಮರಲ್ಲದೇ ಬೇರಾರು ಅಜ್ಞಾನಿಗಳ ಅಸೂಯಾದಿ ದೋಷಗಳನ್ನು ಕಳೆದು ಶುದ್ಧಾಂತಃಕರಣರನ್ನಾಗಿ ಮಾಡಲು ಶಕ್ತ-ರಾದಾರು!

೧೫. ನಿತ್ಯಾಪರೋಕ್ಷೀಕೃತ ರಮಾಯುಕ್ತಾ ಅಶೇಷ ಭಗವದ್ರೂಪಾಣಾಂ, ಅತ ಏವ ವಿಲೀನಾಶೇಷಪ್ರಕೃತಿಬಂಧಾನಾಂ, ಅತ ಏವ ದೂರೋತ್ಸಾರಿತ ಅಶೇಷಾ-ನಿಷ್ಟಾನಾಂ, ಅತ ಏವ ಅಶೇಷಭಕ್ತಾಶೇಷ ಅನಿಷ್ಟನಿವರ್ತಕಾನಾಂ.....

ಪ್ರತಿಪದಾರ್ಥ: ನಿತ್ಯಾಪರೋಕ್ಷೀಕೃತ— ನಿರಂತರ ಸಾಕ್ಷಾತ್ಕಾರವುಳ್ಳ, ರಮಾಯುಕ್ತಾಶೇಷ ಭಗವದ್ರೂಪಾಣಾಂ— ರಮಾಸ್ಸತ ಸಮಸ್ತ ಭಗವದ್ರೂಪಗಳುಳ್ಳವರಾದ; ಅತ ಏವ—

ನಿತ್ಯಾಪರೋಕ್ಷಿಗಳಾದ್ದರಿಂದಲೇ, ವಿಲೀನಾಶೇಷ ಪ್ರಕೃತಿಬಂಧಾನಾಂ—ನಷ್ಟ ಹೊಂದಿದ ಸಕಲ ಪ್ರಕೃತಿ ಬಂಧಗಳುಳ್ಳವರಾದ; ಅತ ಏವ—ಆಗ ಪ್ರಕೃತಿಬಂಧರಹಿತರಾದ್ದರಿಂದಲೇ, ದೂರೋತ್ಸಾರಿತ—ದೂರಕ್ಕೆ ದೂಡಲ್ಪಟ್ಟ, ಅಶೇಷ ಅನಿಷ್ಟಾನಾಂ—ಸಕಲ ಅನಿಷ್ಟಗಳುಳ್ಳ-ವರೋ, ಅತ ಏವ—ಆಗ (ದುಃಖಾಜ್ಞಾನಾದಿ) ಸರ್ವಾನಿಷ್ಟರಹಿತರಾದ್ದರಿಂದ, ಅಶೇಷ ಭಕ್ತಾಶೇಷಾನಿಷ್ಟ ನಿವರ್ತಕಾನಾಂ ಸಕಲ ಭಕ್ತರ ಸಮಸ್ತ ಅನಿಷ್ಟಗಳನ್ನು ಪರಿಹರಿಸುವವ ರಾದ...

ತಾತ್ಪರ್ಯ: ಶ್ರೀವಾಯುದೇವರು ಸರ್ವತ್ರ ಲಕ್ಷ್ಮೀಸಮೇತನಾದ ನಾರಾಯಣನ ಸಮಸ್ತರೂಪಗಳ ನಿರಂತರ ಸಾಕ್ಷಾತ್ಕಾರವುಳ್ಳವರು; ನಿತ್ಯಾಪರೋಕ್ಷಿಗಳಾದ ಇವರಿಗೆ, ಯಾವ ಕಾಲದಲ್ಲಿಯೂ ಪ್ರಕೃತಿ ಬಂಧವೆಂಬುದಿಲ್ಲ; ಬಂಧರಹಿತರಾದ್ದರಿಂದ ಅನಿಷ್ಟ-ಪ್ರಾಪ್ತಿಯಿಲ್ಲ; ತಾವು ಸ್ವಯಂ ಸರ್ವಾನಿಷ್ಟರಹಿತರಾದ್ದರಿಂದ ಇತರರ ಅನಿಷ್ಟಗಳನ್ನು ಪರಿಹರಿಸಲು ಸಮರ್ಥರಾಗಿದ್ದು, ತಮ್ಮನ್ನು ಸೇವಿಸುವ ಜನರ (ವಿಷ್ಣುಭಕ್ತರ) ಸರ್ವಾನಿಷ್ಟಗಳನ್ನು ಪರಿಹರಿಸಿ ರಕ್ಷಿಸುತ್ತಾರೆ;

ಪ್ರಮೇಯ ವಿವರಣೆ: (೧) ಋಜ್ವಾದಿ ಸಕಲ ತಾತ್ವಿಕ ದೇವತೆಗಳು ಅನಾದಿ-ಕಾಲದಿಂದ ಅಪರೋಕ್ಷ ಜ್ಞಾನವುಳ್ಳವರು. ಈ ಪ್ರಮೇಯದ ವಿವರಣೆಯನ್ನು ವಾಕ್ಯ ೨, ಪ್ರ.ವಿ. (೧) ರಲ್ಲಿ ನೋಡಬೇಕು. ಬ್ರಹ್ಮವಾಯುಗಳಿಗೆ ದುಃಖ, ಅಜ್ಞಾನಾದಿಗಳ ಸ್ಪರ್ಶವು ಎಂದಿಗೂ ಇಲ್ಲ; ಇವರಿಗಿರುವ ಲಿಂಗದೇಹಾದಿಗಳು ದಗ್ಧವಸ್ತ್ರದಂತೆ ಬಂಧಕಶಕ್ತಿರಹಿತವಾಗಿರುತ್ತವೆ; ಸತ್ವ ಸತ್ವ ಮಹಾಸತ್ವವೆಂದು ವರ್ಣಿಸಲಾಗುವ ಸತ್ವ-ಗುಣ ಪ್ರಾಚುರ್ಯವುಳ್ಳ ಸೂಕ್ಷ್ಮ ಮಹತ್ತತ್ವದಿಂದಾದುದು ಇವರ ದೇಹ. ಬ್ರಹ್ಮ-ವಾಯುಗಳಿಂದ ನಿಯಮ್ಯರಾದ ತಾತ್ವಿಕ ದೇವತೆಗಳು ಸಹ ಅಚಿಂತ್ಯ ಮಹಿಮೋ-ಪೇತರು. *'ಸಮಸ್ತ ಲಕ್ಷಣೈಃ ಪೂರ್ಣಾಃ ಸಮಸ್ತ ಜಗದೀಶ್ವರಾಃ। ಮುಕ್ತ ಪ್ರಾಯಾಃ ಸದಾ ಸರ್ವೇ....'* ಎಂದರೆ, ಭಕ್ತಿ ವೈರಾಗ್ಯಾದಿ ಸಲ್ಲಕ್ಷಣಗಳಿಂದ ಯಥಾಯೋಗ್ಯ ಪೂರ್ಣರಾದವರು—ಸಮಸ್ತ ಜಗತ್ತನ್ನು ತಮ್ಮಿಂದ ಅಭಿಮನ್ಯಗಳಾದ ತತ್ವಗಳ ದ್ವಾರಾ ನಿಯಮಿಸುತ್ತಾ ಮುಕ್ತ ಸದೃಶರಾಗಿರುತ್ತಾರೆ. ತಮ್ಮ ಮೂಲರೂಪದಿಂದ, ಅನಂತಾಂಶಗಳಿಂದ ವಿಭಕ್ತರಾಗಿ, ಜಗತ್ತಿನಲ್ಲಿರುವ ತತ್ವನಿಯಾಮಕರಾಗಿರುತ್ತಾರೆ.

(೨) ಭಗವಂತನನ್ನು ರಮಾಸಹಿತನನ್ನಾಗಿಯೇ ಉಪಾಸಿಸಬೇಕು. ರಮಾಯುಕ್ತ ರೂಪವನ್ನೇ ಧ್ಯಾನಿಸಬೇಕು. ಇಷ್ಟು ಮಾತ್ರವಲ್ಲ—ಭಗವಂತನ ಮುಖ್ಯ ಪ್ರತಿಮೆಯೆ-ನಿಸುವ, ಭಗವತ್ಪರಿವಾರದಲ್ಲಿ ಪ್ರಧಾನನೆನಿಸಿದ ಶ್ರೀಮುಖ್ಯಪ್ರಾಣನನ್ನೂ ಜೊತೆ-ಯಲ್ಲಿಯೇ ಧ್ಯಾನಿಸಬೇಕು. *'ದೇವ್ಯಾ ಸಹಾಸೌ ಪ್ರಾಣೇನ ಚೋಪಾಸ್ಯಃ...'* ಎಂದೂ, *'ವಾಯೋರ್ಮುಖ್ಯಪರಿವಾರತ್ವೇನ ಹರಿಣಾ ಸಹೋಪಾಸ್ಯತ್ವೋಕ್ತೇಃ ಸೋಽಪಿ ನಿಯಮೇನ ಸರ್ವೈರುಪಾಸ್ಯಃ*□(ಸ.ರ.ಮಾ) ಎಂದೂ ಉಪಾಸನಾವಿಧಿಯು ಉಕ್ತ-

ವಾಗಿದೆ. ಭಗವಂತನ ಅಪರೋಕ್ಷದರ್ಶನವು ಉಪಾಸನಾನುಸಾರವಾಗಿಯೇ ಇರುತ್ತದೆ. ಧ್ಯಾನಿಸಿದ ರೂಪವು ಪ್ರತ್ಯಕ್ಷವಾಗುವುದಲ್ಲದೇ ಬೇರೆಯಲ್ಲ. ಮನುಷ್ಯನ ಹೃದಯಕಮಲದಲ್ಲಿ ಸ್ಥಿತವಾದ ಮೂಲೇಶನಾಮಕ ಬಿಂಬರೂಪೀ ಶ್ರೀಹರಿಯ ಅಡಿದಾವರೆಯಲ್ಲಿ ಶ್ರೀಮುಖ್ಯಪ್ರಾಣನು ಒಂದು ರೂಪದಿಂದ ಸದಾ ಸ್ಥಿತನಾಗಿರುವನು. ಆ ರೂಪದ ದರ್ಶನವೂ ಭಗವದಪರೋಕ್ಷದೊಡನೆಯೇ ಲಭಿಸುತ್ತದೆ.

(೩) ಸಕಲ ಅನಿಷ್ಟಪ್ರಾಪ್ತಿಗೆ ಪೂರ್ವಕೃತ ಪಾಪಗಳೇ ಕಾರಣ. ಪಾಪಗಳು ಪರಿಹೃತ□ವಾದರೆ, ಅನಿಷ್ಟ ಪ್ರಾಪ್ತಿಯು ಸರ್ವಥಾ ನಿಂತುಹೋಗುತ್ತದೆ. ಆದ್ದರಿಂದ ಸರ್ವಾನಿಷ್ಟ ಪರಿಹಾರಕರೆಂದರೆ ಪಾಪ ಪರಿಹಾರಕರೆಂದೇ ಅರ್ಥ. '*ಜನ್ಮಾಧಿ-'ವ್ಯಾಧ್ಯುಪಾದಿ ಪ್ರತಿಹತಿವಿರಹ ಪ್ರಾಪಕಾಣಾಂ...*' ಎಂದೂ, '*ಸಂಸಾರೋತ್ತಾಪನಿತ್ಯೋಪಶಮದ ಸದಯಸ್ನೇಹ ಹಾಸಾಂಬುಪೂರ...*□ಎಂದೂ ಭಕ್ತರ ಆಧಿವ್ಯಾಧಿಗಳನ್ನೂ ಜನನ ಮರಣಾದಿ ಸಂಸಾರ ತಾಪಗಳನ್ನೂ ಪರಿಹರಿಸಲು ಸಮರ್ಥವಾದ ಮಂದಹಾಸಪೂರಿತ ಮುಖವುಳ್ಳವರೆಂದು ಮುಂತಾಗಿ ಶ್ರೀವಾಯುದೇವರನ್ನು ಶ್ರೀವಾಯುಸ್ತುತಿಯಲ್ಲಿ ವರ್ಣಿಸಲಾಗಿದೆ. '**ನಮ್ಮ ಗುರುಗಳ ಪಾದ ಒಮ್ಮೆ ನೆನೆಯಲು ಜನ್ಮ। ಜನ್ಮಕೃತ ಪಾಪ ಪರಿಹಾರ। ಪರಿಹಾರವಾಗಿ ಸದ್ಬ್ರಹ್ಮಪದದಲ್ಲಿ ಸುಖಿಸೋರು॥**'□ಎಂದು ಶ್ರೀಜಗನ್ನಾಥದಾಸರೂ, ಶ್ರೀವಾಯುದೇವರ ಈ ಮ಼ಮೆಯನ್ನು ಕೊಂಡಾಡಿರುವರು.

೧೬. ಪ್ರಣವೋಪಾಸಕಾನಾಂ, ಅಸ್ಮದಾದಿಗುರೂಣಾಂ, ಶ್ರೀಮದಾನಂದತೀರ್ಥ ಶ್ರೀಮಚ್ಚರಣಾನಾಂ (ಅಂತರ್ಯಾಮಿನ್.....)

**ಪ್ರತಿಪದಾರ್ಥ:** ಪ್ರಣವೋಪಾಸಕಾನಾಂ—ಪ್ರಣವ ಮಂತ್ರದ ಉಪಾಸಕರೂ, ಅಸ್ಮದಾದಿಗುರೂಣಾಂ—ನಾವೇ (ಶ್ರೀರಾಘವೇಂದ್ರತೀರ್ಥರೇ) ಮೊದಲಾದ ಸಕಲ ದೇವಾದಿ ಸುಜನರಿಗೆ ಗುರುಗಳೂ (ಆದಿಗುರುಗಳಾದ—ಗುರು ಪರಂಪರೆಯ ಮೂಲಗುರುಗಳಾದ), ಶ್ರೀಮದಾನಂದತೀರ್ಥ ಶ್ರೀಮಚ್ಚರಣಾನಾಂ—(ಆದ) ಶ್ರೀಮದಾನಂದತೀರ್ಥ ಭಗವತ್ಪಾದರವರ, ಅಂತರ್ಯಾಮಿನ್—ಅಂತರ್ಯಾಮಿಯಾದ ಹೇ ನಾರಾಯಣ!.....

**ತಾತ್ಪರ್ಯ:** ಪ್ರಣವೋಪಾಸಕರಲ್ಲಿ ಶ್ರೇಷ್ಠರೂ, ದೇವಾದಿ ಸಕಲ ಮುಕ್ತಿಯೋಗ್ಯ ಜೀವರಿಗೆ ಮೂಲ ಗುರುಗಳೂ ಆದ ಶ್ರೀಮದಾನಂದತೀರ್ಥ ಭಗವತ್ಪಾದರ ಅಂತರ್ಯಾಮಿಯ (ನಿಯಾಮಕನು-ಸ್ವಾಮಿಯು) ಶ್ರೀನಾರಾಯಣನೇ; ..ಗೆ ಮಹಾಮ಼ಮರೂ ಜೀವೋತ್ತಮರೂ ಆದ ಶ್ರೀವಾಯುದೇವರ ಅಂತರ್ಯಾಮಿಯಾದ ಹೇ ನಾರಾಯಣ! ನೀನು (ಮುಂದಿನ ವಾಕ್ಯಗಳಿಂದ ನಿರೂಪಿಸಲಾಗುವ) ಅಚಿಂತ್ಯ ಮ಼ಮನು.

ಪ್ರಮೇಯ ವಿವರಣೆ: ೧. ಪ್ರಣವದ ವಿಷಯಕ್ಕೆ ವಾಕ್ಯ (೧), ಪ್ರ.ವಿ. (೩)ನ್ನು ನೋಡಬಹುದು. ಅಕಾರವು ಉಕಾರ ಮಕಾರಗಳುಳ್ಳದ್ದೆಂದು ಸಾಮಾನ್ಯವಾಗಿ ಹೇಳಲಾಗುವ ಓಂಕಾರವು, ಅನಂತಾಂಶಗಳುಳ್ಳದ್ದು—ನಾದ, ಬಿಂದು, ಘೋಷಾದಿ ಅಷ್ಟಾಕ್ಷರ ಮಾತ್ರವೂ ಅಲ್ಲ. ಈ ಅನಂತಾಂಶಗಳು ಶ್ರೀಹರಿಯ ಅನಂತಗುಣಗಳನ್ನು ಪ್ರತಿಪಾದಿಸುತ್ತವೆ. ಅನಂತ ಗುಣೋಪಸಂಹಾರದಿಂದ ಧ್ಯಾನಿಸಲು ಸಮರ್ಥರಾದ ಬ್ರಹ್ಮಪದಯೋಗ್ಯಜೀವರೇ ಪ್ರಣವೋಪಾಸನೆಯಲ್ಲಿ ಮುಖ್ಯಾಧಿಕಾರಿಗಳು. ಅನ್ಯರು ಯಥಾ ಯೋಗ್ಯ ಗುಣಗಳನ್ನು ಮಾತ್ರ ಓಂಕಾರದಲ್ಲಿ ಚಿಂತಿಸಬಲ್ಲರು. *'ಅನಂತ-ಮಾತ್ರಾಂತಮುದಾಹರಂತಿ ಯಂ ತ್ರಿಮಾತ್ರ ಪೂರ್ವಂ ಪ್ರಣವೋಚಯಂ ಬುಧಾಃ। ತದಾಭವದ್ಭಾವಿ ಚತುರ್ಮುಖಾಕೃತಿಃ ಜಪಾಧಿಕಾರೀ ಯತಿರಸ್ಯ ಸೂಚಿತಃ॥'* (ಸುಮಧ್ವವಿಜಯ)—ಎಂದು, ಸಂನ್ಯಾಸವನ್ನು ಸ್ವೀಕರಿಸಿ ಪ್ರಣವ ಮಂತ್ರ ಜಪೋ-ಪದೇಶವನ್ನು, ಶ್ರೀಪೂರ್ಣಪ್ರಜ್ಞಾಚಾರ್ಯರು (ಲೋಕ ಶಿಕ್ಷಣಾರ್ಥವಾಗಿ) ಅಚ್ಯುತ ಪ್ರೇಕ್ಷರೆಂಬ ತಮ್ಮ ಗುರುಗಳಿಂದ ಪಡೆದರೆಂದು ಹೇಳುತ್ತ, ಪ್ರಣವ ಜಪದ ಮುಖ್ಯಾಧಿಕಾರಿಗಳೇ ಯತಿಗಳಾದರೆಂದು ಹೇಳಲಾಗಿದೆ.

(೨) *'ಅಸ್ಮದಾದಿ ಗುರೂಣಾಂ'* ಎಂಬಲ್ಲಿ ಪ್ರಸಕ್ತವಾಗಿರುವ ಪ್ರಮೇಯದ ವಿವರಣೆಯ ಬಗ್ಗೆ ವಾಕ್ಯ ೬, ಪ್ರ.ವಿ. (೧) (೨) ನ್ನು ಓದಿಕೊಳ್ಳಬೇಕು.

(೩) 'ಪಾದ' ಶಬ್ದವು ಉತ್ತಮರ ಸ್ವರೂಪವನ್ನು ಹೇಳುತ್ತದೆ, ಶ್ರೀಮಚ್ಚರಣ-ರೆಂದರೆ ಶ್ರೀಪಾದರು; ಶ್ರೀಪಾದರೆಂದರೆ ಜ್ಞಾನಾದಿ ಸ್ವರೂಪ ಸಂಪತ್ತುಳ್ಳವರೆಂದರ್ಥ. ಭಗವಚ್ಛಬ್ದವು ಶ್ರೀ ಶಬ್ದಾರ್ಥವನ್ನೇ ಹೇಳುತ್ತದೆ.

**೧೭. ಅಂತರ್ಯಾಮಿ-ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ-ವಾಸುದೇವಾತ್ಮಕ ಶ್ರೀಮಧ್ವವಲ್ಲಭ ಶ್ರೀಲಕ್ಷ್ಮೀವೇದವ್ಯಾಸಾತ್ಮಕ, ಅಂಡಸ್ಥಿತ-ಅನಂತರೂಪಾವಯವ-ಗುಣ-ಕ್ರಿಯಾ-ಜಾತ್ಯವಸ್ಥಾವಿಶಿಷ್ಟ ರಮಾಯುಕ್ತ ಕ್ಷೀರಾಬ್ಧಿ ಶೇಷಶಾಯಿ ಶ್ರೀ-ಪದ್ಮನಾಭಾತ್ಮಕ....**

ಪ್ರತಿಪದಾರ್ಥ: ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವಾತ್ಮಕ (ಇಲ್ಲಿಂದ ಮುಂದೆ ವಾಕ್ಯ ೨೫—ಶ್ರೀಮದ್ಧನುಮದುಪಾಸಿತ ಚರಣ ಸೀತಾಪತೇ ಶ್ರೀರಾಮಚಂದ್ರ! ಎಂಬ-ವರೆಗಿನ ವಿಶೇಷಣಗಳು ಶ್ರೀಮದಾನಂದತೀರ್ಥ ಭಗವತ್ಪಾದರ ಅಂತರ್ಯಾಮಿಯಾದ ಶ್ರೀಹರಿಯ ಮ್ಮಮೆಗಳನ್ನು ನಿರೂಪಿಸುತ್ತವೆ.) ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವಗಳೆಂಬ ನಾಲ್ಕು ರೂಪಗಳುಳ್ಳವನೂ; ಶ್ರೀಮಧ್ವವಲ್ಲಭ—ಶ್ರೀಮಧ್ವಾಚಾರ್ಯರಿಗೆ ಪ್ರಿಯತಮ ಸ್ವಾಮಿಯೂ, ಶ್ರೀಲಕ್ಷ್ಮೀ ವೇದವ್ಯಾಸಾತ್ಮಕ—ಶ್ರೀಲಕ್ಷ್ಮೀಯುತ ಬಾದರಾಯಣ ಸ್ವರೂಪನೂ; ಅಂಡಸ್ಥಿತಾನಂತರೂಪಾವಯವ ಗುಣ ಕ್ರಿಯಾಜಾತ್ಯವಸ್ಥಾವಿಶಿಷ್ಟ—

ಬ್ರಹ್ಮಾಂಡದಲ್ಲಿರುವ ಅನಂತ ರೂಪಗಳ ಕರಚರಣಾದ್ಯವಯವಗಳು, ಜ್ಞಾನಾನಂದಾದಿ ಗುಣಗಳು, ಸೃಷ್ಟಿ ನಿಯಮನಾದಿ ಕ್ರಿಯೆಗಳು, ಈ ಗುಣ ಕ್ರಿಯೆಗಳ ಜಾತಿ ಅವಸ್ಥೆಗಳು (ಸಜಾತೀಯ ವಿಜಾತೀಯಗಳೆಂಬ ಉಭಯ ವಿಧ ಜಾತಿ ಮತ್ತು ಸ್ಥಿತಿಲಯಾದಿ ನಾನಾ ಅವಸ್ಥೆಗಳು) ಇವುಗಳುಳ್ಳವನೂ; ರಮಾಯುಕ್ತ ಕ್ಷೀರಾಬ್ಧಿಶೇಷಶಾಯಿ ಶ್ರೀಪದ್ಮನಾಭಾತ್ಮಕ— ರಮಾಸಮೇತನಾಗಿ ಕ್ಷೀರಸಮುದ್ರ ಮಧ್ಯದಲ್ಲಿ, ಶೇಷದೇಹದಲ್ಲಿ, ಮಲಗಿರುವ ಶ್ರೀಪದ್ಮನಾಭರೂಪದಿಂದ ಅಭಿನ್ನನೂ;

ತಾತ್ಪರ್ಯ: ಶ್ರೀಮದಾನಂದತೀರ್ಥ ಶ್ರೀಮಚ್ಚರಣರ ಅಂತರ್ಯಾಮಿಯಾದ ಶ್ರೀನಾರಾಯಣನು, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವಗಳೆಂಬ (ಸರ್ವಜಗತ್ಕಾರ್ಯ ನಿರ್ವಾಹಕ) ನಾಲ್ಕು ರೂಪಗಳನ್ನು ಧರಿಸಿರುವನು; ಆತನೇ (ನಾರಾಯಣನೇ) ಶ್ರೀಮದ್ವರ ಪ್ರಿಯತಮನಾದ ಲಕ್ಷ್ಮೀಪತಿ ವೇದವ್ಯಾಸನು; ಬ್ರಹ್ಮಾಂಡದಲ್ಲಿ ಈತನ ಅನಂತ ರೂಪಗಳಿವೆ; ಈ ಎಲ್ಲ ರೂಪಗಳೂ ಪರಸ್ಪರ ಅಭಿನ್ನವಾದವುಗಳು; ಒಂದೊಂದು ರೂಪದ ಕರಚರಣಾದ್ಯವಯವಗಳಿಗೂ, ಗುಣ ಕ್ರಿಯೆಗಳು ಮತ್ತು ಅವುಗಳ ಜಾತಿ ಮತ್ತು ಅವಸ್ಥಾ ವಿಶೇಷಗಳಿಗೂ ಯಾವ ಪ್ರಕಾರದ ಭೇದವೂ ಇಲ್ಲ; ಎಲ್ಲ ರೂಪಗಳು ರಮಾ ಸ್ಗತವಾದವುಗಳೇ; ಕ್ಷೀರಸಮುದ್ರ ಮಧ್ಯದಲ್ಲಿರುವ, ಶ್ವೇತದ್ವೀಪದಲ್ಲಿರುವ ಶೇಷಶಾಯಿಯಾದ ರಮಾ- ಸ್ಗತ ಶ್ರೀಪದ್ಮನಾಭರೂಪವೂ ಇತರ ಸರ್ವರೂಪಗಳಿಂದ ಅಭಿನ್ನವಾದುದೇ ಆಗಿದೆ.

ಪ್ರಮೇಯ ವಿವರಣೆ: ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ನಿರ್ವಹಿಸಲಿ- ಕ್ಕಾಗಿಯೇ ಮೂಲರೂಪದಿಂದ ಅಭಿವ್ಯಕ್ತಗೊಳಿಸಲ್ಪಟ್ಟ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸುದೇವ ರೂಪಗಳು ಶ್ರೀಮದಾಚಾರ್ಯರಿಗೆ ಅತಿಪ್ರಿಯ- ವಾದವುಗಳು. ಇವುಗಳೂ, ಶ್ರೀಹರಿಯ ಬ್ರಹ್ಮಾಂಡಸ್ಥಿತ ಅನಂತರೂಪಗಳೂ ಮೂಲ ರೂಪೀ ನಾರಾಯಣನಿಂದ ಅತ್ಯಂತ ಅಭಿನ್ನವಾದವುಗಳೇ; ನಾನಾ ಅವತಾರಗಳಿಗೆ ಮೂಲವೆನಿಸುವ ಶ್ವೇತದ್ವೀಪದಲ್ಲಿರುವ ಶ್ರೀಹರಿಯ, ರಮಾ ಸ್ಗತ ಶ್ರೀಪದ್ಮನಾಭ ರೂಪವೂ ನಾರಾಯಣನಿಂದ ಅಭಿನ್ನವೇ. ಜಾತಿ ಮತ್ತು ಅವಸ್ಥಾ- ವಿಶಿಷ್ಟ ಗುಣಗಳುಳ್ಳವನೆಂಬಲ್ಲಿ ವಾಕ್ಯ ೧೦. ಪ್ರ.ವಿ.ಯನ್ನು ಇಲ್ಲಿ ಓದಿಕೊಳ್ಳಬೇಕು. ವಾಸುದೇವಾದಿ ಚತೂರೂಪಗಳ ಕಾರ್ಯಗಳ ಬಗ್ಗೆ ಮುಂದಿನ ವಾಕ್ಯ ೧೮ ಮತ್ತು ಅದರ ಪ್ರ.ವಿ.ಯನ್ನು ಓದಬೇಕು.

೧೮. ಅಂಡಾದ್ ಬಹಿರಭಿವ್ಯಕ್ತ-ಶುದ್ಧಸೃಷ್ಟಿತ್ವೇನ ಅಭಿಮತ ಶ್ರೀಚತುರ್ಮುಖ ಮುಖ್ಯಪ್ರಾಣೋಪಾಸ್ಯತ್ವಾದ್ಯನೇಕ ಪ್ರಯೋಜನಕ ಅನಂತಾನಂತರೂಪಮೂಲ- ಭೂತ, ತಥಾ ಅಶೇಷಜಗತ್ಪಾಲನಪ್ರಯೋಜನಕ ಶಾಂತಿಪತಿ ಅನಿರುದ್ಧಮೂಲ-

**ಭೂತ, ತಥಾ ಅಶೇಷ ಜಗತ್ಸೃಷ್ಟಿ ಪ್ರಯೋಜನಕ ಕೃತಿಪತಿ ಪ್ರದ್ಯುಮ್ನ ಮೂಲಭೂತ, ತಥಾ ಅಶೇಷ ಜಗತ್ಸಂಹಾರ ಪ್ರಯೋಜನಕ ಜಯಾಪತಿ ಸಂಕರ್ಷಣ-ಮೂಲಭೂತ.....**

**ಪ್ರತಿಪದಾರ್ಥ:** ಅಂಡಾದ್ಬಹಿರಭಿವ್ಯಕ್ತ—ಬ್ರಹ್ಮಾಂಡದ ಹೊರಗೆ ಪ್ರಕಟಗಳಾದ, ಶುದ್ಧ-ಸೃಷ್ಟಿತ್ವೇನಾಭಿಮತ—ಶುದ್ಧ ಸೃಷ್ಟಿಯೆಂದು (ಜ್ಞಾನಿಗಳಿಗೆ) ಸಮ್ಮತವಾದ, ಶ್ರೀಚತುರ್ಮುಖ ಮುಖ್ಯಪ್ರಾಣೋಪಾಸ್ಯತ್ವಾದ್ಯನೇಕಪ್ರಯೋಜನಕ—ಚತುರ್ಮುಖ ಮತ್ತು ಮುಖ್ಯಪ್ರಾಣ-ರಿಂದ ಉಪಾಸ್ಯಮಾನಗಳೆಂಬ ಅನೇಕ ಪ್ರಯೋಜನವುಳ್ಳ; ಅನಂತಾನಂತ ರೂಪ ಮೂಲಭೂತ—ಅಸಂಖ್ಯವಾದ (ಅಥವಾ ನಿತ್ಯವೂ ಅಗಣಿತವೂ ಆದ) ರೂಪಗಳಿಗೆ ಮೂಲವೂ, ತಥಾ—ಹಾಗೂ, ಅಶೇಷ ಜಗತ್ಪಾಲನ ಪ್ರಯೋಜನಕ—ಜಗದ್ರಕ್ಷಣವೇ ಪ್ರಯೋಜನವಾಗಿವುಳ್ಳ, ಶಾಂತಿಪತ್ಯನಿರುದ್ಧ ಮೂಲಭೂತ ಶಾಂತೀನಾಮಕ ಲಕ್ಷ್ಮೀ-ದೇವಿಯ ಪತಿಯಾದ ಅನಿರುದ್ಧರೂಪದ ಮೂಲವೂ, ಅಶೇಷ ಜಗತ್ಸೃಷ್ಟಿ ಪ್ರಯೋಜನಕ—ಸಕಲ ಜಗತ್ತಿನ ಸೃಷ್ಟಿಯೇ ಪ್ರಯೋಜನವಾಗಿವುಳ್ಳ, ಕೃತಿಪತಿ ಪ್ರದ್ಯುಮ್ನ ಮೂಲಭೂತ—ಕೃತೀನಾಮಕ ಲಕ್ಷ್ಮೀದೇವಿಯ ಪತಿಯಾದ ಪ್ರದ್ಯುಮ್ನ ರೂಪದ ಮೂಲವೂ, ಜಗತ್ಸಂಹಾರ ಪ್ರಯೋಜನಕ—ಸಮಸ್ತ ಜಗತ್ತಿನ ಲಯವೇ ಪ್ರಯೋಜನವಾಗಿವುಳ್ಳ, ಜಯಾಪತಿ ಸಂಕರ್ಷಣ ಮೂಲಭೂತ—ಜಯಾನಾಮಕ ಲಕ್ಷ್ಮೀಪತಿ ಸಂಕರ್ಷಣ ರೂಪದ ಮೂಲವೂ;

**ತಾತ್ಪರ್ಯ:** ಬ್ರಹ್ಮಾಂಡದ ಹೊರಗೆ, ಎಂದರೆ ಬ್ರಹ್ಮಾಂಡದ ಸೃಷ್ಟಿಗಿಂತ ಮೊದಲೇ, ಈ ಮೂಲರೂಪೀ ನಾರಾಯಣನಿಂದ ಹಿಂದೆ ಹೇಳಿದ ಅನಿರುದ್ಧಾದಿ ನಾಲ್ಕು ರೂಪ-ಗಳು ಪ್ರಕಟವಾದವು. ಈ ನಾರಾಯಣನು ಚತುರ್ಮುಖ ಮತ್ತು ಮುಖ್ಯಪ್ರಾಣನಿಂದ ಉಪಾಸಿಸಲ್ಪಡುವ ಅನಂತ ರೂಪಗಳಿಗೆ ಮೂಲಭೂತನಾದವನು; ಈ ನಾಲ್ಕು ರೂಪಗಳಲ್ಲಿ ಒಂದಾದ ಅನಿರುದ್ಧರೂಪದಿಂದ ಜಗತ್ಪಾಲನೆಯು ನಡೆಯುತ್ತದೆ—ಅನಿರುದ್ಧನನ್ನು ಶಾಂತೀನಾಮಕರೂಪದಿಂದ ಶ್ರೀಲಕ್ಷ್ಮೀದೇವಿಯು ಸೇವಿಸುತ್ತಾಳೆ; ಪ್ರದ್ಯುಮ್ನರೂಪದಿಂದ ಸೃಷ್ಟಿಯು ನಡೆಯುತ್ತದೆ—ಪ್ರದ್ಯುಮ್ನನನ್ನು ಕೃತೀನಾಮಕ ರೂಪದಿಂದ ಶ್ರೀಲಕ್ಷ್ಮೀದೇವಿಯು ಸೇವಿಸುತ್ತಾಳೆ; ಸಂಕರ್ಷಣರೂಪದಿಂದ ಜಗತ್ತಿನ ಲಯಕಾರ್ಯವು ನಡೆಯುತ್ತದೆ—ಸಂಕರ್ಷಣನನ್ನು ಜಯಾನಾಮಕರೂಪದಿಂದ ಶ್ರೀಮಹಾಲಕ್ಷ್ಮೀಯು ಸೇವಿಸುತ್ತಾಳೆ.

**ಪ್ರಮೇಯ ವಿವರಣೆ:** (೧) ಪ್ರಳಯಕಾಲದ ರಾತ್ರಿಯಲ್ಲಿ ಲನೇ ೧ ಭಾಗವು ಉಳಿದಿರುವಾಗ ದುರ್ಗಾರೂಪಳಾದ ಶ್ರೀಲಕ್ಷ್ಮೀದೇವಿಯು ಸ್ತುತಿಸಿ ಪ್ರಾರ್ಥಿಸಲು, ಯೋಗನಿದ್ರೆಯಿಂದ ಎಚ್ಚೆತ್ತ ಶ್ರೀಹರಿಯು ಸೃಷ್ಟಿಕಾರ್ಯದಲ್ಲಿ ತೊಡಗುತ್ತಾನೆ. ಸೃಷ್ಟ್ಯಾದಿ ಕಾರ್ಯಗಳನ್ನು ನಿರ್ವಹಿಸುವ ವಾಸುದೇವಾದಿ ತನ್ನ ರೂಪಗಳನ್ನು ಪ್ರಕಟ-

ಮಾಡುತ್ತಾನೆ. ಈ ರೂಪಗಳ ಅಭಿವ್ಯಕ್ತಿಯು, ಒಂದು ವಿವಕ್ಷೆಯಿಂದ, ತನ್ನನ್ನೇ ಸೃಷ್ಟಿಸಿಕೊಳ್ಳುವನೆಂಬ ಈಶ ಸೃಷ್ಟಿಯು. ಇದು, ಶುದ್ಧ ಸೃಷ್ಟಿಯೆಂದೂ ಕರೆಯಲ್ಪಡು-ತ್ತದೆ. ..ೀಗೆ ಮೂಲರೂಪದಿಂದ (ನಾರಾಯಣನಿಂದ) ಅಭಿವ್ಯಕ್ತಗೊಳ್ಳುವ ವಾಸು-ದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಗಳೆಂಬ ನಾಲ್ಕು ರೂಪಗಳನ್ನು ಸೇವಿಸಲು, ಶ್ರೀಹರಿಯ ನಿತ್ಯಾವಿಯೋಗಿನಿಯಾದ ಲಕ್ಷ್ಮೀದೇವಿಯು, ಕ್ರಮವಾಗಿ ಮಾಯಾ, ಜಯಾ, ಕೃತೀ ಮತ್ತು ಶಾಂತೀ ನಾಮಕ ರೂಪಗಳನ್ನು ಸ್ವೀಕರಿಸುತ್ತಾಳೆ. ರಮಾ ನಾರಾಯಣರ ಈ ಎಲ್ಲ ರೂಪಗಳು ಮತ್ತು ಅವರ ಇತರ ಅನಂತ ರೂಪಗಳು ಸಚ್ಚಿದಾನಂದಾತ್ಮಕವಾದವುಗಳೇ — **ಉಭಯರಿಗೆ ಪ್ರಾಕೃತ ದೇಹಯೋಗವು ಯಾವ ಕಾಲಕ್ಕೂ** ಇಲ್ಲ. .ಂದಿನ ಬ್ರಹ್ಮಕಲ್ಪದಲ್ಲಿ ಮೋಕ್ಷ ಸಾಧನೆಯನ್ನು ಮುಗಿಸಿ, ಲಿಂಗ ದೇಹವನ್ನೂ ತ್ಯಜಿಸಿ, ಪ್ರಳಯಕಾಲದಲ್ಲಿ ಚತುರ್ಮುಖನೊಂದಿಗೆ ಶ್ರೀಹರಿಯ ಉದರವನ್ನು ಪ್ರವೇಶಮಾಡಿ, ಧ್ಯಾನದಲ್ಲಿರುತ್ತಾ ವೈಕುಂಠಾದಿ ಸ್ವಯೋಗ್ಯ ಸ್ಥಾನಗಳನ್ನು ಸೇರಿ ಸ್ವೇಚ್ಛಾ ವಿಹಾರಿಗಳಾಗಲು ಅರ್ಹರಾದ ಜೀವರಿಗೆ, ಶ್ವೇತದ್ವೀಪದಲ್ಲಿರುವ ತನ್ನ ರೂಪದ ಸಂದರ್ಶನವನ್ನಿತ್ತು, ಅವರವರ ಸ್ಥಾನಗಳನ್ನು ಹೊಂದಿಸುವುದು, ಮೊದಲು ವ್ಯಕ್ತವಾದ ವಾಸುದೇವರೂಪವು. ಸರ್ವ ಸಂಹಾರಕನಾದ ಸಂಕರ್ಷಣನು ನಂತರ ಸೃಷ್ಟವಾದ (ಪ್ರಕಟವಾದ) ರೂಪವು; ಮೃತ್ಯುವನ್ನು ಮೊದಲಿಗೇ ಸಿದ್ಧಮಾಡಿಟ್ಟು ನಂತರ ಜೀವರನ್ನು ಸೃಷ್ಟಿಸುವ (ಸ್ಥೂಲದೇಹ ಸಂಬಂಧವನ್ನು ಹೊಂದಿಸುವ) ಶ್ರೀಹರಿಸಂಕಲ್ಪವು ಅರ್ಥಪೂರ್ಣವಾದುದು. ಪ್ರದ್ಯುಮ್ನನು ಸೃಷ್ಟಿಕರ್ತನು; ಅನಿರುದ್ಧನ ಪ್ರವೇಶದಿಂದ ಸೂಕ್ಷ್ಮದೇಹಗಳನ್ನು ಪಡೆದು ಪ್ರದ್ಯುಮ್ನನ ಉದರವನ್ನು ಪ್ರವೇಶಿಸಿ, ನಂತರ ಸ್ಥೂಲದೇಹ ಯೋಗವೆಂಬ ಸೃಷ್ಟಿಯನ್ನು ಜೀವರು ಹೊಂದುವರು; ಸಕಲ ಪ್ರಾಣಿ ದೇಹಗಳಲ್ಲಿದ್ದು, ಪ್ರದ್ಯುಮ್ನನು ಕಾಮೋದ್ದೀಪಕನಾಗಿ, ಪುರುಷ ಪ್ರಾಣಿಗಳ ರೇತೋದ್ವಾರಾ, ಜೀವನನ್ನು ಮಾತೃಗರ್ಭದಲ್ಲಿ ಸ್ಥಾಪಿಸುವನು; ಈತನೇ ಸಮಸ್ತ ಜಗತ್ಪಿತನು. ಸರ್ವ ಪ್ರಕಾರದಿಂದ ಹುಟ್ಟಿದ ಜೀವರನ್ನು ರಕ್ಷಿಸುವವನು, ಅನಿರುದ್ಧನು. ಈ ನಾರಾಯಣಾದಿ ಪಂಚರೂಪಗಳ ಮಹಿಮೆಯು ಅತ್ಯದ್ಭುತವಾದುದು.

ವಾಸುದೇವಾದಿ ಚತೂರೂಪಗಳಿಂದಾಗುವ ಕ್ರಿಯಾವಿಶೇಷಗಳನ್ನು ತತ್ಸಂಬಂಧ-ವಾದ ವಿವರಗಳನ್ನು ಶ್ರೀಜಗನ್ನಾಥದಾಸವರ್ಯರ ಹರಿಕಥಾಮೃತಸಾರದ ಮಾತೃಕಾ-ಸಂಧಿ, ವರ್ಣಪ್ರಕ್ರಿಯಾಸಂಧಿ ಮೊದಲಾದ ಭಾಗಗಳಲ್ಲಿಯೂ, ಶ್ರೀವಾದಿರಾಜ ಯತಿವರೇಣ್ಯರ ವೈಕುಂಠವರ್ಣನೆ(ತತ್ವಸಾರ)ಯಿಂದಲೂ ತಿಳಿಯಬಹುದು. ಇವು ಕನ್ನಡ ಗ್ರಂಥಗಳು. ಸಂಸ್ಕೃತದಲ್ಲಿ ಶ್ರೀಮದಾಚಾರ್ಯರ ಶ್ರೀಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ, ಈ ಚತೂರೂಪ ವ್ಯೂಹ ಸಂಬಂಧವಾದ, ಪ್ರಮಾಣಪೂರ್ವಕ

ನಿರೂಪಣೆಯನ್ನು ಕಾಣಬಹುದು. ಶ್ರೀಹರಿಯು, ತನ್ನ ಯಾವುದೊಂದು ರೂಪದಿಂದ ಸರ್ವರೂಪಗಳಿಂದಾಗುವ ಸರ್ವಕಾರ್ಯಗಳನ್ನು ನಿರ್ವಹಿಸಲು ಸಮರ್ಥನೇ ಇರುವನು. ಆದರೂ ಸತ್ಯಸಂಕಲ್ಪನಾದ ತಾನು ಭಿನ್ನಭಿನ್ನ ಯೋಗ್ಯತೆಯ ಅನಂತ ಜೀವರ ಉದ್ಧಾರಕ್ಕಾಗಿ ಅನಂತರೂಪಿಯಾಗಿರುತ್ತಾನೆ. *'ಸ್ಮೃತಿ ಕೀರ್ತನ ಪ್ರಣತಿಭಿರ್ವಿಮುಕ್ತಯೇ ಸ್ವಜನಸ್ಯಯಾತ್ಯಯಮನೇಕರೂಪತಾಂ'* (ಸುಮಧ್ವವಿಜಯ) ಎಂದು ಹೇಳಿರುವುದರಲ್ಲಿ ಅಡಕವಾಗಿರುವ ರಹಸ್ಯ ಪ್ರಮೇಯಗಳನ್ನು ಗುರುದ್ವಾರಾ ಶಾಸ್ತ್ರಾಭ್ಯಾಸದಿಂದ ತಿಳಿಯಬೇಕು.

(೨) ಶ್ರೀಹರಿಯು ಸೃಷ್ಟ್ಯಾದ್ಯಷ್ಟಕರ್ತೃತ್ವದ ನಿರ್ವಹಣೆಗಾಗಿ, ಮೂಲರೂಪದಿಂದ ವಿವಿಧ ರೂಪಗಳನ್ನು ಪ್ರಕಟಗೊಳಿಸುವುದು, ಶುದ್ಧ ಸೃಷ್ಟಿಯು. ಪ್ರಸಂಗತ್ವೇನ, ಜಗತ್ಸೃಷ್ಟಿ ಸಂಬಂಧವಾದ ನಾನಾ ಪ್ರಕಾರಗಳನ್ನು ಇಲ್ಲಿ ಸಂಗ್ರಹವಾಗಿ ನಿರೂಪಿಸಲಾಗುತ್ತದೆ. ಸೃಷ್ಟಿಯು ಸೂಕ್ಷ್ಮ-ಸ್ಥೂಲ ಭೇದದಿಂದ ಎರಡು ಪ್ರಕಾರವು. ಸೃಷ್ಟಿಕಾಲ ಪ್ರಾಪ್ತವಾಗಲು, ಶ್ರೀಹರಿಯು ಅವ್ಯಕ್ತ ತತ್ವಕ್ಕೆ (ಮೂಲ ಜಡಪ್ರಕೃತಿಗೆ) ಅಭಿಮಾನಿಯಾದ ಶ್ರೀಮಹಾಲಕ್ಷ್ಮೀದೇವಿಯಲ್ಲಿ, ಪ್ರಕೃತಿಯಲ್ಲಿರುವ ಸತ್ವರಜಸ್ತಮೋಗುಣಗಳು ವಿಷಮಾವಸ್ಥೆಯನ್ನು ಹೊಂದಿ ಮಹದಾದಿ ತತ್ವಗಳ ರೂಪದಿಂದ ವಿಕಾರ ಹೊಂದಲು ಅವಶ್ಯಕವಾದ ತನ್ನ ಶಕ್ತಿಯನ್ನು ಸ್ಥಾಪಿಸುವನು. ಶ್ರೀಹರೀಚ್ಛೆಯಂತೆ ಕ್ರಮವಾಗಿ ಮಹದಾದಿ ೨೪ ತತ್ವಗಳೂ ಅವುಗಳ ಅಭಿಮಾನಿ ದೇವತೆಗಳೂ ಸೃಷ್ಟರಾಗುವರು. ೨೪ ತತ್ವಗಳು ಯಾವುವೆಂದರೆ: ಆಕಾಶಾದಿ ಪಂಚಭೂತಗಳು ೫; ಶಬ್ದಾದಿ ತನ್ಮಾತ್ರೆಗಳು ೫; ವಾಗಾದಿ ಕರ್ಮೇಂದ್ರಿಯಗಳು ೫; ಚಕ್ಷುರಾದಿ ಜ್ಞಾನೇಂದ್ರಿಯಗಳು ೫; ಮನಸ್ಸು, ಅಹಂಕಾರ, ಮಹತ್ ಮತ್ತು ಅವ್ಯಕ್ತಗಳೆಂಬ ೪; ಹೀಗೆ ಒಟ್ಟು ೨೪.

ಅವ್ಯಕ್ತದ ಸೃಷ್ಟಿಯೆಂದರೆ: ಅತ್ಯಲ್ಪ ವಿಕಾರದಿಂದ ಸತ್ವ-ರಜ-ತಮೋಗುಣಗಳ ಪ್ರಾಕಟ್ಯ ಮತ್ತು ಮುಂದಿನ ತತ್ವ ನಿರ್ಮಾಣ ಪ್ರವೃತ್ತಿ. ಈ ತತ್ವಗಳ ಅಭಿಮಾನಿ ದೇವತೆಗಳು ಯಾರೆಂದರೆ: ಆಕಾಶ-ಗಣಪತಿ, ವಾಯು-ಪ್ರವಹವಾಯು, ಅಗ್ನಿ ಅಥವಾ ತೇಜಸ್ಸು-ಅಗ್ನಿ, ಜಲ-ವರುಣ, ಪೃಥ್ವಿ-ಧರಾದೇವಿ; ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಗೆ-ಸೌಪರ್ಣೀ (ಗರುಡಪತ್ನಿ), ವಾರುಣೀ (ಶೇಷಪತ್ನಿ), ಉಮಾ (ರುದ್ರಪತ್ನಿ) ಈ ಮೂವರು; ವಾಕ್-ಅಗ್ನಿ, ಪಾಣಿ-ಇಂದ್ರ, ಪಾದ-ಜಯಂತ. ಪಾಯು-ಯಮ, ಉಪಸ್ಥ-ದಕ್ಷ; ಚಕ್ಷು-ಸೂರ್ಯ, ಶ್ರೋತ್ರ-ಚಂದ್ರ, ತ್ವಕ್-ಕುಬೇರ, ರಸನ-ವರುಣ, ಘ್ರಾಣ-ಅಶ್ವಿನೀ ದೇವತೆಗಳು; ಮನಸ್ಸು ಮತ್ತು ಅಹಂಕಾರಗಳಿಗೆ, ಗರುಡಶೇಷರುದ್ರರು; ಮಹತ್ತತ್ವಕ್ಕೆ-ಬ್ರಹ್ಮ ; ಮಹತ್ತತ್ವದ ಪ್ರಭೇದವಾದ ಬುದ್ಧಿ ತತ್ವಕ್ಕೆ (ಮನಃಪ್ರವೃತ್ತಿಗಳಲ್ಲಿ ಒಂದಾದ ಬುದ್ಧಿ ಬೇರೆ) ಸರಸ್ವತಿಯು ಅಭಿಮಾನಿ; ಸರಸ್ವತೀ

ಚತುರ್ಮುಖರೊಂದಿಗೆ ಭಾರತೀ ವಾಯುಗಳನ್ನೂ ಅಭಿಮಾನಿಗಳೆಂದು ತಿಳಿಯ-ಬೇಕು. ಇವೆಲ್ಲವುಗಳ ಸೃಷ್ಟಿಯು ಸೂಕ್ಷ್ಮಸೃಷ್ಟಿಯು. ಇದರಲ್ಲಿರುವ ಪೃಥಿವೀ ಮೊದ-ಲಾದವುಗಳು, ಪ್ರತ್ಯಕ್ಷ ಗೋಚರವಾದ ಭೂಮ್ಯಾದಿಗಳಂತೆ ಸ್ಥೂಲವೆಂದು ತಿಳಿಯ-ಕೂಡದು. ಮಹತ್ತತ್ತ್ವದಿಂದ ಹುಟ್ಟಿದ ಅಹಂಕಾರ ತತ್ತ್ವವು—ವೈಕಾರಿಕ, ತೈಜಸ, ತಾಮಸಗಳೆಂದು ತ್ರಿವಿಧವಾಗಿರುತ್ತದೆ. ವೈಕಾರಿಕದಿಂದ ಋಜುಭಿನ್ನತತ್ತ್ವಾಭಿಮಾನಿ-ಗಳೂ ಮತ್ತು ಮನಸ್ಸೂ, ತೈಜಸದಿಂದ ದಶೇಂದ್ರಿಯಗಳೂ, ತಾಮಸದಿಂದ ಶಬ್ದಾದಿ ತನ್ಮಾತ್ರೆಗಳೂ ಮತ್ತು ಪಂಚಭೂತಗಳೂ ಹುಟ್ಟುತ್ತವೆ. ಶ್ರೀಹರಿಯ ಆಜ್ಞೆಯಂತೆ ಬ್ರಹ್ಮಾಂಡವನ್ನು ನಿರ್ಮಾಣ ಮಾಡಲು ಅಶಕ್ತರಾಗಿ, ತತ್ತ್ವಾಭಿಮಾನಿ ದೇವತೆಗಳು ಪ್ರಾರ್ಥಿಸಲು, ಸೂಕ್ಷ್ಮತತ್ತ್ವಗಳನ್ನು ವಿನಿಯೋಗಿಸಿ ಲಕ್ಷ್ಮೀದ್ವಾರಾ 'ಆವರಣ ಸಹಿತ' ಬ್ರಹ್ಮಾಂಡವನ್ನು ನಿರ್ಮಿಸುತ್ತಾನೆ; ನಂತರ ಬ್ರಹ್ಮಾಂಡದೊಳಗೆ ಚತುರ್ಮುಖ ಬ್ರಹ್ಮ-ನಲ್ಲಿದ್ದು ಬ್ರಹ್ಮನ ದ್ವಾರಾ ಲೋಕಗಳು, ಲೋಕ ವಿಭಾಗಗಳು, ಗ್ರಹ ನಕ್ಷತ್ರಾದಿ ಸರ್ವ-ವನ್ನೂ ಶ್ರೀಹರಿಯು ಸೃಷ್ಟಿ ಮಾಡುತ್ತಾನೆ; ಅಸಂಖ್ಯ ಜೀವರಿಗೆ ಅವರವರ ಯೋಗ್ಯತೆಗನುಗುಣವಾದ ಸ್ಥೂಲ ದೇಹಗಳನ್ನೂ ಕೊಡುತ್ತಾನೆ—ಇದು ಸ್ಥೂಲ ಸೃಷ್ಟಿಯು.

(೩) ಜಗತ್ಸೃಷ್ಟಿಯು, ಬೇರೆ ಪ್ರಕಾರದಿಂದ, ನಾಲ್ಕು ವಿಧವೆಂದೂ ಆಗಮಗಳು ನಿರೂಪಿಸುತ್ತವೆ. ಶುದ್ಧಸೃಷ್ಟಿ, ಪರಾಧೀನ ವಿಶೇಷಾವಾಪ್ತಿ ಸೃಷ್ಟಿ, ಮಿಶ್ರಸೃಷ್ಟಿ ಮತ್ತು ಕೇವಲ ಸೃಷ್ಟಿಗಳೆಂಬುವು ಚತುರ್ವಿಧ ಸೃಷ್ಟಿಗಳು. ಈ ಮೊದಲು ನಿರೂಪಿಸಿದಂತೆ ಮೂಲರೂಪದಿಂದ, ವಾಸುದೇವಾದಿ ರೂಪಗಳನ್ನು ಪ್ರಕಟಿಸುವುದು ಶುದ್ಧಸೃಷ್ಟಿಯು. ಪ್ರಳಯ ಕಾಲದಲ್ಲಿ ಲಕ್ಷ್ಮೀ ಬ್ರಹ್ಮಾದಿ ಯಾವ ತತ್ತ್ವಾಭಿಮಾನಿಗಳೂ, ಪ್ರಕೃತ್ಯಾದಿ ತತ್ತ್ವಗಳ ಮೇಲೆ ತಮ್ಮ (ಶ್ರೀಹರಿಯ ಅಧೀನವೇ ಆದ) ಸ್ವಾಮಿತ್ವವನ್ನು ಉಪ-ಯೋಗಿಸುವುದಿಲ್ಲ; ಚೇತನಾಚೇತನ ಜಗತ್ತೆಲ್ಲವೂ ಚೇಷ್ಟಾರಹಿತವಾಗಿರುತ್ತದೆ; ಮುಕ್ತ-ಜೀವರು ಧ್ಯಾನದಲ್ಲಿದ್ದರೆ, ಅನ್ಯರು ನಿದ್ರಾವಸ್ಥೆಯಲ್ಲಿರುತ್ತಾರೆ. ಜಡವಿಶ್ವವು ಮೂಲ ಪ್ರಕೃತಿಯಲ್ಲಿ ಲಯಗೊಂಡಿರುತ್ತದೆ. ಸೃಷ್ಟ್ಯಾರಂಭದಲ್ಲಿ, ರಮಾದೇವಿಯು ಪ್ರಕೃತಿಯ ಮೇಲಿನ ತನ್ನ ಸ್ವಾಮಿತ್ವವನ್ನು ಪ್ರಯೋಗಿಸಿ, ಅದರಿಂದ ಸೃಷ್ಟಿಕಾರ್ಯಗಳನ್ನು ಮಾಡಿಸುವುದೆಂಬ ವಿಶೇಷ ಸ್ಥಿತಿಯನ್ನು ಹೊಂದಿಸಲ್ಪಡುತ್ತಾಳೆ. ಹಾಗೆಯೇ ಸೃಷ್ಟವಾದ ಮಹದಾದಿ ತತ್ತ್ವಗಳ ಅಭಿಮಾನಿಗಳೂ ಸಹ ತಂತಮ್ಮ ತತ್ತ್ವಗಳ ಮೇಲಿನ (ಪ್ರಳಯ-ಕಾಲದಲ್ಲಿಲ್ಲದ) ಸ್ವಾಮಿತ್ವಾದಿ ವಿಶೇಷ ಸ್ಥಿತಿಯನ್ನು ಹೊಂದಿಸಲ್ಪಡುತ್ತಾರೆ. ಲಕ್ಷ್ಮ್ಯಾದಿ-ಗಳಿಗೆ ಪ್ರಕೃತಿ ಸ್ವಾಮಿತ್ವಾದಿ ವಿಶೇಷಗಳನ್ನು ಹೊಂದಿಸುವುದೂ ಒಂದು ಬಗೆಯ ಸೃಷ್ಟಿಯು. '*ಪರಾಧೀನ ವಿಶೇಷಾವಾಪ್ತಿಃ ಸೃಷ್ಟಿಸ್ತು ಲಕ್ಷ್ಮ್ಯಾದೀನಾಂ ಭಗವದಾಜ್ಞಯಾ*

ಪ್ರಕೃತಿ ಸ್ವಾಮಿತ್ವಾದಿ ವಿಶೇಷಾವಾಪ್ತಿಃ' (ಭಾವಪ್ರಕಾಶಿಕಾ) ಎಂದು ಇದನ್ನೇ ಹೇಳ-ಲಾಗಿದೆ. ಅನಾದಿನಿತ್ಯ ಜೀವಸ್ವರೂಪಕ್ಕೆ ಸೃಷ್ಟಿಯೆಂಬುದಿಲ್ಲ. ಜೀವರು ಅಸಂಖ್ಯರು— ಅವರವರ ಗತಿಗಳನ್ನು ಹೊಂದಿಸಲು (ಲಿಂಗದೇಹಾದಿ ಸ್ವರೂಪಾವರಕಗಳನ್ನು ಕಳೆದುಕೊಳ್ಳಲು) ಆವಶ್ಯಕವಾದ ಸಾಧನೆಗಳನ್ನು ಮಾಡಿಸಲು, ಅವರವರ ಕರ್ಮಾನು-ಸಾರವಾದ ಪ್ರಾಕೃತ ಸ್ಥೂಲ ದೇಹಗಳನ್ನು ಹೊಂದಿಸುವುದು ಮಿಶ್ರ ಸೃಷ್ಟಿಯು. ಮಿಶ್ರ ಸೃಷ್ಟಿಯ ಕರ್ತನು ಸರ್ವಜ್ಞತ್ವಾದಿ ಅಚಿಂತ್ಯ ಸಾಮರ್ಥ್ಯವುಳ್ಳವನಾಗಿರಲೇಬೇಕಲ್ಲವೇ! ಅನಂತ ಜೀವಾಂತರ್ಯಾಮಿ ರೂಪಗಳಿಂದ ಅನಂತ ಜೀವರನ್ನು ನಿಯಮನ ಮಾಡುತ್ತ, ಅವರವರ ಗತಿಗಳನ್ನು ಹೊಂದಿಸುವ ಅಚಿಂತ್ಯಾದ್ಭುತ ಕಾರ್ಯವನ್ನು ಸ್ವತಂತ್ರ ಪ್ರಭುವಾದ ಶ್ರೀಹರಿಯೊಬ್ಬನು ಮಾತ್ರ ನಿರ್ವಹಿಸಬಲ್ಲನು. ಆಧುನಿಕ ವೈಜ್ಞಾನಿಕ ಪ್ರವೀಣರಿಗೂ ಊಹಿಸಲಸಾಧ್ಯವಾದ ಜಡಸೃಷ್ಟಿಯು, ಗ್ರಹ-ನಕ್ಷತ್ರಾದಿ-ಗಳು, ಸಮುದ್ರ-ಪರ್ವತ-ವೃಕ್ಷಾದಿ ಅನಂತ ವಸ್ತುಸಮೂಹಗಳಿಂದ ಅಗಾಧವೂ ಅಚಿಂತ್ಯವೂ ಆದುದು. ಇವುಗಳ ನಿರ್ಮಾಣಕರ್ತನೂ ಶ್ರೀಹರಿಯೇ— ಇದು ಕೇವಲ ಸೃಷ್ಟಿಯು. ಹೀಗೆ ಸೃಷ್ಟಿಯು ನಾಲ್ಕು ವಿಧ. ಹೀಗೆ, ವಿಶ್ವದಲ್ಲಿ ತುಂಬಿರುವ ಶ್ರೀಹರಿಯ ಅನಂತರೂಪಗಳಿಗೆಲ್ಲ ಮೂಲವಾದುದು ನಾರಾಯಣನೆಂಬ ಮೂಲರೂಪವು. ಈ ಅನಂತ ರೂಪಗಳು, ಪರಸ್ಪರವಾಗಿಯೂ ಮೂಲರೂಪದಿಂದ ಸಹ ಅತ್ಯಂತ ಅಭಿನ್ನಗಳು. ಭಿನ್ನಗಳಾಗಿದ್ದಂತೆ ವ್ಯವಹರಿಸುವುದು 'ವಿಶೇಷ'ವೆಂಬ ಶ್ರೀಹರಿಯ ಸ್ವರೂಪಭೂತ ಧರ್ಮದಿಂದಲೂ, ಆತನ ಅಚಿಂತ್ಯ ಶಕ್ತಿಯಿಂದಲೂ ಸಾಧ್ಯವೆಂದು ಆಗಮ ಪ್ರಮಾಣಗಳಿಂದ ತಿಳಿದುಬರುತ್ತದಲ್ಲದೇ, ಬುದ್ಧಿಯಿಂದ ಅಲ್ಪ ಮಾನವನು ಗ್ರಹಿಸಲಾರನು.

**೧೯. ತಥಾ ಸ್ವಸ್ವಸಮಗ್ರ ಯೋಗ್ಯತಾಭಿಜ್ಞ ಪರಮಾನುಗ್ರಹಶೀಲ ಭಗವತ್ಪ್ರೇರಿತ ಚತುರ್ಮುಖಾದಿ ಸದ್ಗುರೂಪದಿಷ್ಟ-ಸ್ವಸ್ವಯೋಗ್ಯ ಭಗವದ್ರೂಪಗುಣೋಪಾಸನಯಾ ಸಂಜಾತ ಸ್ವಸ್ವಯೋಗ್ಯ ಭಗವದ್ರೂಪ ವಿಶೇಷದರ್ಶನ ಭೋಗಾಭ್ಯಾಂ ವಿನಷ್ಟಾನಿಷ್ಟ ಸಂಚಿತ ಪ್ರಾರಬ್ಧ ಲಕ್ಷಣಾಶೇಷ ಕರ್ಮಣಾಂ.....**

ಪ್ರತಿಪದಾರ್ಥ: ತಥಾ— ಮತ್ತು, ಸ್ವಸ್ವಸಮಗ್ರ ಯೋಗ್ಯತಾಭಿಜ್ಞ— ಅವರವರ (ಪ್ರತಿ-ಯೊಬ್ಬನ) ಪೂರ್ಣಯೋಗ್ಯತೆಯನ್ನು ಚೆನ್ನಾಗಿ ತಿಳಿದವರೂ, ಪರಮಾನುಗ್ರಹಶೀಲ— ಉತ್ಕೃಷ್ಟವಾದ ಅನುಗ್ರಹವನ್ನು ಮಾಡುವ ಸ್ವಭಾವವುಳ್ಳವರೂ, ಭಗವತ್ಪ್ರೇರಿತ— ಶ್ರೀಹರಿ-ಯಿಂದ ಪ್ರೇರಿತರಾದ, ಚತುರ್ಮುಖಾದಿ ಸದ್ಗುರೂಪದಿಷ್ಟ— ಬ್ರಹ್ಮಾದಿ ಸದ್ಗುರುಗಳಿಂದ ಉಪದೇಶಿಸಲ್ಪಟ್ಟ, ಸ್ವಸ್ವಯೋಗ್ಯ ಭಗವದ್ರೂಪ ಗುಣೋಪಾಸನಯಾ— ತಮತಮಗೆ ಯೋಗ್ಯವಾದ ಭಗವದ್ರೂಪವನ್ನೂ ಗುಣಗಳನ್ನೂ ಉಪಾಸಿಸುವುದರಿಂದ ಸಂಜಾತ—

ಉಂಟಾದ (ದೊರಕಿದ), ಸ್ವಸ್ವಯೋಗ್ಯ ಭಗವದ್ರೂಪವಿಶೇಷ ದರ್ಶನಭೋಗಾಭ್ಯಾಂ —ಸ್ವಯೋಗ್ಯ ಭಗವದ್ರೂಪದ ಅಪರೋಕ್ಷ ದರ್ಶನದಿಂದಲೂ (ಪ್ರಾರಬ್ಧ ಕರ್ಮ) ಭೋಗದಿಂದಲೂ, ವಿನಷ್ಟಾನಿಷ್ಟ ಸಂಚಿತ ಪ್ರಾರಬ್ಧ ಲಕ್ಷಣಾಶೇಷ ಕರ್ಮಣಾಂ—ನಷ್ಟ-ಗೊಂಡ (ನಾಶ ಹೊಂದಿದ) ಸಕಲ ಅನಿಷ್ಟ ಸಂಚಿತ ಕರ್ಮಗಳು ಮತ್ತು ಪ್ರಾರಬ್ಧ ಕರ್ಮಗಳುಳ್ಳವರೂ (ಆದ);

ತಾತ್ಪರ್ಯ: ಜೀವಯೋಗ್ಯತೆಯನ್ನು ಚೆನ್ನಾಗಿ ತಿಳಿದು, ಜೀವನ ಮೇಲೆ ಪ್ರಸನ್ನ-ರಾಗಿ ಪರಮಾನುಗ್ರಹ ಮಾಡುವ ಸ್ವಭಾವದವರೂ ಶ್ರೀಹರಿ ಪ್ರೇರಿತರೂ ಆದ ಚತುರ್ಮುಖಾದಿ ಸದ್ಗುರುಗಳಿಂದ ಸ್ವಯೋಗ್ಯ ಗುಣಗಳಿಂದ ಭಗವಂತನನ್ನು ಉಪಾಸಿಸುವ ದಿವ್ಯೋಪದೇಶವನ್ನು, ಸುಜೀವರು ಪಡೆಯುತ್ತಾರೆ; ಸ್ವಯೋಗ್ಯ ಭಗವದ್ರೂಪವನ್ನು ಗುರೂಪದಿಷ್ಟ ಗುಣೋಪಸಂಹಾರದಿಂದ ಧ್ಯಾನಿಸುತ್ತಾರೆ; ಧ್ಯಾನದ ಸಿದ್ಧಿಯಿಂದ ಸ್ವಯೋಗ್ಯ ಭಗವದ್ರೂಪದ ಸಂದರ್ಶನವನ್ನು ಪಡೆಯುತ್ತಾರೆ; ಅಪರೋಕ್ಷ ದರ್ಶನ ಪ್ರಭಾವದಿಂದ ಸಂಚಿತಕರ್ಮರಾಶಿಯೊಳಗಿನ ಸಕಲ ಅನಿಷ್ಟ ಕರ್ಮಗಳೂ (ಪಾಪ-ಪುಣ್ಯಗಳೆರಡೂ) ವಿನಾಶಗೊಳ್ಳುತ್ತವೆ: ಪ್ರಾರಬ್ಧ ಕರ್ಮವನ್ನು ಭೋಗದಿಂದ ಕಳೆದುಕೊಳ್ಳುತ್ತಾರೆ.

ಪ್ರಮೇಯ ವಿವರಣೆ: (೧) ಇಲ್ಲಿ ವಾಕ್ಯ ೧೨, ಪ್ರ.ವಿ. (೨)ನ್ನು ಓದಿಕೊಳ್ಳಬೇಕು. ಬಿಂಬೋಪದೇಶಕ ಗುರು ಅಥವಾ ನಿಯತ ಗುರುವೇ ಆತ್ಮೋದ್ಧಾರಕ ಗುರುವು. ತಾರತಮ್ಯ ಕ್ರಮದಲ್ಲಿ ಮೇಲಿನ ಜೀವರು ಕೆಳಗಿನವರಿಗೆ ನಿಯತ ಗುರುಗಳು. ಅಸ್ಮದಾದಿ ಅಲ್ಪ ಜೀವರ ನಿಯತ ಗುರುವು, ಸಾಧನ ಪರಿಪಕ್ವತೆಯ ಕಾಲದಲ್ಲಿ ಶ್ರೀಹರಿ ಪ್ರೇರಣೆಯಿಂದ ಒದಗುತ್ತಾರೆ. ಏಕಾಂತದಲ್ಲಿ ಶಿಷ್ಯನ ಬಿಂಬರೂಪವನ್ನು ತಿಳಿಸಿ, ಬಿಂಬೋಪಾಸನೆಯ ಕ್ರಮವನ್ನು ಉಪದೇಶಿಸುತ್ತಾರೆ. ಬಿಂಬೋಪಾಸನೆ-ಯಲ್ಲಿ ತೊಡಗಿದ ಜೀವನಿಗೆ ಶ್ರೀಹರಿಯು ಸ್ವಸಂಕಲ್ಪಿತ ಕಾಲದಲ್ಲಿ ಸಂದರ್ಶನವನ್ನು ಕರುಣಿಸುತ್ತಾನೆ. ಈ ವಾಕ್ಯದಲ್ಲಿ ನಿಯತ ಗುರುವಿನ ಲಕ್ಷಣಗಳನ್ನು ನಿರೂಪಿಸಿರುವರು. ಆ ಗುರುವು ಶಿಷ್ಯನ ಯೋಗ್ಯತೆಯನ್ನು ಪೂರ್ಣವಾಗಿ ತಿಳಿದಿರುತ್ತಾನೆ; ಪರಮಾನುಗ್ರಹ ಮಾಡಿ ಉದ್ಧರಿಸುವ ಉದಾರ ಚಿತ್ತದ ಉತ್ಕೃಷ್ಟ ಸ್ವಭಾವದವನಾಗಿರುತ್ತಾನೆ; ಶಿಷ್ಯನು ಯಾವ ಭಗವದ್ರೂಪವನ್ನು ಎಷ್ಟು ಗುಣಗಳಿಂದ ಹೇಗೆ ಉಪಾಸಿಸಬೇಕೆಂಬುದನ್ನು ಉಪದೇಶಿಸುತ್ತಾನೆ. ಚತುರ್ಮುಖ ಪರ್ಯಂತವಾದ ಸದ್ಗುರು ಸಮೂಹದಲ್ಲಿ ಪ್ರತಿ ಜೀವನಿಗೆ ತನಗೆ ಯೋಗ್ಯನಾದ ಸದ್ಗುರುವು ಲಭಿಸುತ್ತಾನೆ. ನಿಯತ ಗುರೂಪದೇಶ-ದಿಂದ, ಯೋಗ್ಯ ಕಾಲದಲ್ಲಿ ಸ್ವಯೋಗ್ಯ ಕಾಲಾವಧಿಯ ಅಪರೋಕ್ಷ ದರ್ಶನವನ್ನು ಪಡೆಯುತ್ತಾನೆ.

(೨) ಭಗವದಪರೋಕ್ಷ ಜ್ಞಾನದಿಂದ ಲಭ್ಯವಾಗುವ ಫಲಗಳಲ್ಲಿ ಮುಖ್ಯವಾದ ಮೊದಲಿನ ಫಲವೆಂದರೆ ಕರ್ಮಕ್ಷಯವು. ಬ್ರಹ್ಮಸೂತ್ರಗಳ ೪ನೇ ಅಧ್ಯಾಯದ ೧ನೇ ಪಾದದ ೮ನೇ ತದಧಿಗಮಾಧಿಕರಣವನ್ನು ಓದಿ ಅಥವಾ ತಿಳಿದವರಿಂದ ಶ್ರವಣ ಮಾಡಿ ವಿವರಗಳನ್ನು ತಿಳಿದುಕೊಳ್ಳುವುದು ಉತ್ತಮ. ವಾಕ್ಯ ೨, ಪ್ರ.ವಿ. ೧ರಲ್ಲಿ ತ್ರಿವಿಧ ಕರ್ಮಗಳು, ಅಪರೋಕ್ಷದಿಂದ ನಾಶವಾಗುವ ಕರ್ಮಗಳು, ಜ್ಞಾನಿಗಳು ತಮ್ಮ ಸಂಚಿತ ಕರ್ಮಗಳಲ್ಲಿದ್ದ ಇಷ್ಟ ಪುಣ್ಯಗಳನ್ನು (ಅನಿಷ್ಟ ಪುಣ್ಯಗಳು ಮತ್ತು ಸಮಸ್ತ ಪಾಪ ಕರ್ಮಗಳು ಧ್ವಸಿಹೋಗಲು) ಸ್ವಭಕ್ತರಿಗೆ ದಾನ ಮಾಡುವರೆಂಬ ಮುಂತಾದ ಪ್ರಮೇಯಗಳನ್ನು ವಿವರಿಸಲಾಗಿದೆ. ಅಪರೋಕ್ಷವಾಗುವ ಕಾಲಕ್ಕೆ ಫಲ ಕೊಡಲು ಆರಂಭವಾಗಿರುವ ಕರ್ಮವನ್ನು (ಪ್ರಾರಬ್ಧವನ್ನು) ಸರ್ವರೂ ಅನುಭವಿಸಿಯೇ ಕಳೆದುಕೊಳ್ಳಬೇಕು. ಶ್ರೀಹರಿಯ ಅನುಗ್ರಹ ವಿಶೇಷದಿಂದ, ಆ ಕರ್ಮಭೋಗದಲ್ಲಿ ಉಪಮರ್ದವೂ ದೊರೆಯಬಹುದು. ಈ ಪ್ರಾರಬ್ಧಕರ್ಮವು ಪುಣ್ಯ, ಪಾಪ ಅಥವಾ ಉಭಯಾತ್ಮಕವೂ ಆಗಿರಬಹುದು. ಬ್ರಹ್ಮಾದಿ ಋಜುಗಣದ ಜೀವರ ಪ್ರಾರಬ್ಧವು ಕೇವಲ ಪುಣ್ಯರೂಪವಾಗಿದ್ದು, ಸುಖಮಾತ್ರದ ಭೋಗಕ್ಕೆ ಕಾರಣವಾಗುತ್ತದೆ. ರುದ್ರ, ಇಂದ್ರಾದಿಗಳ ಪ್ರಾರಬ್ಧವು ಕಿಂಚಿತ್ ದುಃಖಹೇತುವೂ ಆಗಿದ್ದು, ಸುಖಪ್ರಚುರವಾದು-ದಾಗಿರುತ್ತದೆ. ಮತ್ತು ಪ್ರಾರಬ್ಧ ಕರ್ಮದ ಭೋಗ ಕಾಲಾವಧಿಯು, ಮೇಲಿನವರಿ-ಗಿಂತ ಕೆಳಗಿನವರಿಗೆ ಕಡಿಮೆಯಾಗಿರುತ್ತದೆ. ತಾರತಮ್ಯದಲ್ಲಿ ಕೆಳಕೆಳಗೆ ಬಂದಂತೆ, ಜೀವರ ಪ್ರಾರಬ್ಧವು ಹೆಚ್ಚು ಹೆಚ್ಚಾಗಿ ದುಃಖಪ್ರಚುರವೂ, ಭೋಗಕಾಲವು ಕಡಿಮೆ ಕಡಿಮೆಯಾಗುತ್ತಲೂ ಸಾಗುತ್ತದೆ. ಅಲ್ಪರಾದ ಮನುಷ್ಯೋತ್ತಮ ಜೀವರ ಪ್ರಾರಬ್ಧವು, ದುಃಖ ಪ್ರಚುರವಾಗಿದ್ದು ಅತ್ಯಲ್ಪಕಾಲ ಭೋಗಪ್ರದವಾಗಿರುತ್ತದೆ. ಪ್ರಾರಬ್ಧ ಭೋಗವು ಕೊನೆಗೊಳ್ಳುವಾಗ ಇರುವ ಜೀವಶರೀರವು ಚರಮದೇಹವೆಂದು ಕರೆಯಲ್ಪಡು-ತ್ತದೆ. ಪ್ರಾರಬ್ಧವು ಅಲ್ಪವಾಗಿದ್ದರೆ, ಅಪರೋಕ್ಷವಾದ ದೇಹದಲ್ಲಿಯೇ ಅದರ ಭೋಗವು ಮುಗಿಯುವಂತಿದ್ದರೆ, ಆ ದೇಹಪಾತಾನಂತರ ಜೀವನು ಮುಕ್ತನಾಗು-ತ್ತಾನೆ; ಹಾಗಲ್ಲದೇ ಪ್ರಾರಬ್ಧವು ಪ್ರಬಲವಾಗಿದ್ದು ಒಂದು ಅಥವಾ ಹೆಚ್ಚಾದ ಜನ್ಮ-ಗಳನ್ನೆತ್ತಿ ಭೋಗಿಸಬೇಕಾಗಿದ್ದರೆ, ಜ್ಞಾನಿಯು ದೇಹಾಂತರಗಳನ್ನೂ ಹೊಂದುತ್ತಾನೆ. ಚರಮದೇಹಪಾತವಾದ ನಂತರ, ಜ್ಞಾನಿಯು ಉಕ್ತಮಾರ್ಗದಿಂದ, ಜನ-ತಪ-ಸತ್ಯ-ಅಮುಕ್ತ ವೈಕುಂಠಾದಿ ಲೋಕಗಳಲ್ಲಿ ಮಹಾ ಪ್ರಳಯಕಾಲದವರೆಗೆ ಇರಬೇಕಾಗು-ತ್ತದೆ. ನಂತರ ಎಲ್ಲರೂ ಬ್ರಹ್ಮನಲ್ಲಿಗೆ ಬಂದು, ಆತನ ಉಪದೇಶದಿಂದ ಸ್ಪಷ್ಟತರ ಬಿಂಬಾಪರೋಕ್ಷವನ್ನು ಹೊಂದಿ, ಆತನೊಂದಿಗೆ ವಿರಜಾ ನದಿಯಲ್ಲಿ ಸ್ನಾನ ಮಾಡಿ, ಲಿಂಗದೇಹವನ್ನು ತ್ಯಜಿಸಿ, ಬ್ರಹ್ಮನೊಂದಿಗೆ ಪರಮಾತ್ಮನ ಉದರವನ್ನು ಪ್ರವೇಶ

ಮಾಡುತ್ತಾರೆ. ಚರಮದೇಹ ನಾಶದಿಂದ ಪ್ರಾರಬ್ಧವು ನಿಶ್ಶೇಷ ನಾಶ ಹೊಂದುವುದಿಲ್ಲ —ಮತ್ತೆ ಜನ್ಮವೆತ್ತಬೇಕಾಗುವಷ್ಟು ಉಳಿಯುವುದೂ ಇಲ್ಲ. ಪ್ರಾರಬ್ಧಶೇಷವು ವಿರಜಾಸ್ನಾನದಿಂದ ನಷ್ಟವಾಗಿ, ಜ್ಞಾನಿಜೀವನು ಕೇವಲ ಸ್ವರೂಪ ದೇಹದಿಂದ ಉಳಿಯುತ್ತಾನೆ. '*ಪ್ರಾರಬ್ಧ ಕರ್ಮಶೇಷಶ್ಚವಿರಜಾತರಣಾವಧಿಃ*' ಎಂಬ ಪ್ರಮಾಣ ವಾಕ್ಯವು ಈ ಪ್ರಮೇಯವನ್ನೇ ನಿರೂಪಿಸುತ್ತದೆ.

೨೦. **ಸ್ವಸ್ವಯೋಗ್ಯತಾನುಸಾರೇಣ ಸಂಪೂರ್ಣಸಾಧನಾನಾಂ ಪೂರ್ವಕಲ್ಪೇ ಬ್ರಹ್ಮಣಾ ಸಹ ವಿರಜಾನದೀ ಸ್ನಾನೇನ ತ್ಯಕ್ತಲಿಂಗಾನಾಂ, ತಥಾ ವಿನಷ್ಟ-ಅವಶಿಷ್ಟ-ಇಷ್ಟಾಶೇಷಪ್ರಾರಬ್ಧಕರ್ಮಣಾಂ, ಪ್ರಲಯಕಾಲೇ ಭಗವದುದರೇ ವಸತಾಂ.....**

ಪ್ರತಿಪದಾರ್ಥ: ಸ್ವಸ್ವಯೋಗ್ಯತಾನುಸಾರೇಣ— ತಮ್ಮ ತಮ್ಮ ಯೋಗ್ಯತಾನುಸಾರವಾದ, ಸಂಪೂರ್ಣ ಸಾಧನಾನಾಂ— ಪೂರ್ಣ ಸಾಧನೆಗಳುಳ್ಳವರೂ, ಪೂರ್ವಕಲ್ಪೇ—ಹಿಂದಿನ ಬ್ರಹ್ಮ-ಕಲ್ಪದಲ್ಲಿ, ಬ್ರಹ್ಮಣಾ ಸಹ— ಚತುರ್ಮುಖನೊಂದಿಗೆ, ವಿರಜಾನದೀ ಸ್ನಾನೇನ— ವಿರಜಾ ನದೀ ಸ್ನಾನದಿಂದ, ತ್ಯಕ್ತಲಿಂಗಾನಾಂ— ತ್ಯಜಿಸಿದ ಲಿಂಗದೇಹವುಳ್ಳವರೂ, ತಥಾ— ಹಾಗೂ, ವಿನಷ್ಟ— ನಾಶವಾದ, ಅವಶಿಷ್ಟ— ನಾಶವಾಗದೇ ಉಳಿದ, ಇಷ್ಟಾಶೇಷ ಪ್ರಾರಬ್ಧ ಕರ್ಮಣಾಂ — ಅನಾರಬ್ಧ ಇಷ್ಟಪುಣ್ಯ ಮತ್ತು ಸಕಲ ಪ್ರಾರಬ್ಧಕರ್ಮಗಳುಳ್ಳವರೂ, ಪ್ರಳಯಕಾಲೇ— ಪ್ರಳಯ ಕಾಲದಲ್ಲಿ, ಭಗವದುದರೇ— ಭಗವಂತನ ಉದರದಲ್ಲಿ, ವಸತಾಂ— ವಾಸ ಮಾಡುವವರೂ ಆದ.....

ತಾತ್ಪರ್ಯ: ಹಿಂದಿನ ವಾಕ್ಯದಲ್ಲಿ ಪ್ರಸಕ್ತರಾದ ಅಪರೋಕ್ಷ ಜ್ಞಾನಿಗಳಾದ ಜೀವರು, ದರ್ಶನದಿಂದ ಸರ್ವಸಂಚಿತ ಪಾಪಗಳನ್ನೂ ಅನಿಷ್ಟ ಪುಣ್ಯಗಳನ್ನೂ ಕಳೆದುಕೊಂಡು, ಭೋಗದಿಂದ ಪ್ರಾರಬ್ಧ ಕರ್ಮವನ್ನೂ ಕಳೆದುಕೊಂಡು, ಸ್ವಯೋಗ್ಯ ಸಾಧನ ಪರಿಪೂರ್ತಿಯನ್ನು ಹೊಂದಿ, ಚತುರ್ಮುಖನೊಂದಿಗೆ ವಿರಜಾ ನದಿಯಲ್ಲಿ ಸ್ನಾನ ಮಾಡುವ ಮೊದಲೇ ಸಂಚಿತ ರಾಶಿಯೊಳಗಿನ ಇಷ್ಟ (ಕಾಮ್ಯ) ಪುಣ್ಯಗಳನ್ನು ತಮ್ಮನ್ನು ಆಶ್ರಯಿಸಿ ಸೇವಿಸುವವರಿಗೆ ದಾನ ಮಾಡಿ, ವಿರಜಾ ಸ್ನಾನದಿಂದ ಪ್ರಾರಬ್ಧವನ್ನು ನಿಃಶೇಷವಾಗಿ ಕಳೆದುಕೊಂಡು, ಪ್ರಳಯ ಕಾಲದಲ್ಲಿ ಭಗವದುದರಲ್ಲಿ ಧ್ಯಾನಾವಸ್ಥೆಯಲ್ಲಿರುತ್ತಾರೆ.

ಪ್ರಮೇಯ ವಿವರಣೆ: (೧) ವೈಕುಂಠಲೋಕವು ಶ್ರೀ-ಭೂ-ದುರ್ಗಾ ನಾಮಕ ಮೂರು ಭಾಗಗಳುಳ್ಳದ್ದು; ಅವು ತನ್ನಾಮಕ ಲಕ್ಷ್ಮೀರೂಪಗಳಿಂದ ನಿಯಮ್ಯವಾದವು-ಗಳು. ಇವುಗಳಲ್ಲಿ ಶ್ರೀಭಾಗವು ಅಪ್ರಾಕೃತವಾದುದು— ಸೃಷ್ಟ್ಯುಪಯುಕ್ತ ಪ್ರಾಕೃತ ಗುಣ ನಿರ್ಮಿತವಲ್ಲ; ಉಳಿದೆರಡೂ ತ್ರಿಗುಣಾತ್ಮಕವು. ಶ್ರೀಭಾಗದಲ್ಲಿ ವೈಕುಂಠನೆಂಬ ಶ್ರೀವಿಷ್ಣುವು ಶ್ರೀದೇವಿಯೊಡನೆ ವಿಹರಿಸುವ ಸಾರ್ವಭೌಮ ನಗರವು (ವೈಕುಂಠ-

ಪುರಿಯು) ಲಕ್ಷ್ಮ್ಯಾತ್ಮಕವಾದುದು—ಲಕ್ಷ್ಮೀದೇವಿಯೇ ಆ ರೂಪದಿಂದಿರುವಳು. ಉಳಿದ ಶ್ರೀಭಾಗವು ಶುದ್ಧಸತ್ವಾತ್ಮಕವಾದುದು. ತ್ರಿಗುಣಾತ್ಮಕ ಪ್ರಕೃತಿಯು ಅಪಾರವಾಗಿದೆ. ಅದರ ಏಕದೇಶ ಮಾತ್ರ (ಒಂದು ಅಲ್ಪಭಾಗ ಮಾತ್ರ) ಸೃಷ್ಟ್ಯರ್ಥವಾಗಿ ಉಪಯೋಗಿಸಲ್ಪಡುತ್ತದೆ. ..ಗೆ ಉಪಯೋಗಿಸಲ್ಪಡದಿರುವ ಪ್ರಕೃತಿಯಲ್ಲಿರುವ ಸತ್ವಗುಣವು 'ಶುದ್ಧಸತ್ವ' ವೆಂದು ಕರೆಯಲ್ಪಡುತ್ತದೆ. ವೈಕುಂಠನಗರಿಯನ್ನು ಶ್ರೀದೇವಿಯೇ ವಿರಜಾನದೀ ರೂಪದಿಂದ ಸುತ್ತುವರಿದು ಪ್ರವಹಿಸುತ್ತಿರುವಳು. ವೈಕುಂಠನಗರಿಗೂ ಅದರ ಸುತ್ತಲಿರುವ ಶುದ್ಧ ಸತ್ವಾತ್ಮಕ ಶ್ರೀಭಾಗ ವೈಕುಂಠಕ್ಕೂ ಮಧ್ಯೆ ಇರುವ ವಿರಜಾನದಿಯು, ಪ್ರಳಯ ಕಾಲದಲ್ಲಿ, ಎಂದರೆ ಬ್ರಹ್ಮಾಂಡವು ಲಯಹೊಂದಿ, ಬ್ರಹ್ಮಾಂಡದ ಹೊರಗೆ (ಬ್ಬಃ) ಇರುವ ಆವರಣಗಳು ಲಯ ಹೊಂದುತ್ತಿರಲು, ಅಲ್ಲಿದ್ದ ಸೂಕ್ಷ್ಮ ಸೃಷ್ಟಿಯಲ್ಲಿ ಸೃಷ್ಟರಾದ ತತ್ವಾಭಿಮಾನಿ ದೇವತೆಗಳು ಮೇಲೆ ಮೇಲಿನವರಲ್ಲಿ (ಸ್ವೋತ್ತಮ ದೇವತೆಗಳಲ್ಲಿ) ಪ್ರವೇಶಿಸುತ್ತಿರುವಾಗ, ಬ್ರಹ್ಮಾಂಡದ ಆವರಣಗಳಲ್ಲಿ ಕಡೆಯದಾದ ಸತ್ವಗುಣಾವರಣ ಮತ್ತು ಅದರ ಹೊರಗಿನ ನಿತ್ಯವೂ ಅನಂತವೂ ಆದ ಅವ್ಯಾಕೃತಾಕಾಶಗಳ ಮಧ್ಯೆ ಬರುತ್ತದೆ. ಆಗ (ಗರುಡ-ಶೇಷ ಮಾರ್ಗಗಳಿಂದ ಬಂದು) ಚತುರ್ಮುಖನನ್ನು ಪ್ರವೇಶಿಸಿದ್ದ ಸಮಸ್ತ ಜೀವರೂ ಹೊರಗೆ ಬಂದು ವಿರಜಾ ನದಿಯಲ್ಲಿ ಸ್ನಾನಮಾಡುತ್ತಾರೆ; ಲಿಂಗದೇಹದಿಂದ ಮುಕ್ತರಾಗುತ್ತಾರೆ. ಬ್ರಹ್ಮಾಂಡವು ೫೦ ಕೋಟಿ ಯೋಜನ ವಿಸ್ತಾರವಾದುದು; ಅದರ ಪೃಥಿವ್ಯಾತ್ಮಕ ಖರ್ಪರವು ೧೦೦ ಕೋಟಿ ಯೋಜನ ವಿಸ್ತಾರವಾದುದು; ಅದರ ಮೇಲೆ ಜಲಾದಿ ಭೂತಗಳು, ಅಹಂಕಾರ, ಮಹದಾದಿ ತತ್ವಗಳ ಆವರಣಗಳು ಒಂದಕ್ಕಿಂತ ಒಂದು ಹತ್ತುಪಟ್ಟು ವಿಸ್ತಾರವುಳ್ಳದ್ದು; ಅದರ ಮೇಲೆ ಸತ್ವಾದಿ ಗುಣಗಳ ಆವರಣಗಳು ಮತ್ತು ಸತ್ವಗುಣದ ಮೇಲೆ ಅನಂತ ವಿಸ್ತಾರವುಳ್ಳ ಅವ್ಯಾಕೃತಾಕಾಶವೂ ಇರುತ್ತವೆ. ಇವುಗಳ ವಿವರಗಳನ್ನು ಆಳವಾದ ಶಾಸ್ತ್ರಾಭ್ಯಾಸದಿಂದ ತಿಳಿದು ಸ್ಪಷ್ಟವಾಗಿ ಗ್ರಸಬೇಕು. ಕಲ್ಪನಾತೀತಗಳಾದ ಈ ಅಂಶಗಳ ವಿವರವನ್ನು ಗ್ರಂಥ ವಿಸ್ತಾರ ಭಯದಿಂದ ಬಿಟ್ಟಿದೆ. *'ಅಂತಿಮಾವರಣ ವ್ಯೋಮ್ನೋರಂತರಾ ವಿರಜಾನದೀ। ತದಾ ಚತುರ್ಮುಖೇ ಪ್ರವಿಷ್ಟಾಃ ಸರ್ವೇ ಬಹಿರ್ನಿರ್ಗತ್ಯ ವಿರಜಾಯಾಂ ಸ್ನಾಸ್ಯಂತಿ। ತೇನ ನಿಃಶೇಷಾರಬ್ಧ ನಿವೃತ್ತಿಃ ಲಿಂಗದೇಹಾದೇಃ ಸರ್ವಸ್ಯ ವಿನಾಶಶ್ಚ'* (ಸ.ರ.ಮಾ) ಎಂಬ ವಾಕ್ಯಗಳು, ಮೇಲೆ ನಿರೂಪಿಸಿದ ಪ್ರಮೇಯಗಳನ್ನು ಹೇಳುತ್ತವೆ.

(೨) 'ಲಿಂಗದೇಹ'—ಜೀವಸ್ವರೂಪವು ನಿತ್ಯ ಮತ್ತು ನಿರ್ವಿಕಾರವಾದುದು. ಇದನ್ನು ಲಿಂಗದೇಹವು ಅನಾದಿಕಾಲದಿಂದ ಆಚ್ಛಾದಿಸಿದೆ. ಅಮುಕ್ತ ಜೀವರೆಲ್ಲರೂ ಲಿಂಗದೇಹವುಳ್ಳವರು—ಸಲಿಂಗಿಗಳು. ಈ ಲಿಂಗದೇಹವು ೧೬ ಪ್ರಾಕೃತ ಕಲೆಗಳಿಂದ

(ಸೂಕ್ಷ್ಮಾಂಶಗಳಿಂದ) ನಿರ್ಮಿತವಾದುದು. ಪೃಥಿವ್ಯಾದಿ ಪಂಚಭೂತಗಳಿಗೆ ಕಾರಣ-ಗಳಾದ ಭೂತಸೂಕ್ಷ್ಮಗಳೆಂಬ ಪಂಚ ತನ್ಮಾತ್ರೆಗಳು, ದಶೇಂದ್ರಿಯಗಳು ಮತ್ತು ಮನಸ್ಸು, ..ೀಗೆ ಒಟ್ಟು ೧೬ ಕಲೆಗಳಿಂದಾದುದು. ಇದು ಜಡವಸ್ತುವಾದ್ದರಿಂದ ಪ್ರೇರಕಚೇತನ ಶಕ್ತಿಯನ್ನುಳಿದು ಚೇಷ್ಟಿಸುವ ಶಕ್ತಿಯುಳ್ಳದ್ದಲ್ಲ. ಇದಕ್ಕೆ ಜೀವಸ್ವರೂಪ-ವನ್ನು ಬಂಧಿಸುವ ಸಾಮರ್ಥ್ಯವೂ ಇಲ್ಲ. ಸರ್ವಪ್ರೇರಕ ಶ್ರೀಹರಿಯೇ ಅದಕ್ಕೆ ಬಂಧಕಶಕ್ತಿಪ್ರದನು. *'ಬಂಧಕೋ ಭವಪಾಶೇನ ಮೋಚಕಶ್ಚ ಸ ಏವ ಹಿ'* ಎಂಬ ಶ್ರುತಿಯು ಇದನ್ನೇ ಹೇಳುತ್ತದೆ. ಲಿಂಗದೇಹದ ಉಪಾದಾನ ಕಾರಣಗಳಾದ ೧೬ ಕಲೆಗಳು ಸತ್ವರಜಸ್ತಮೋ ಗುಣಗಳೆಂಬ ಪ್ರಾಕೃತಿಗುಣಗಳ ಅತಿಸೂಕ್ಷ್ಮ ವಿಕಾರಾಂಶ-ಗಳು. ಈಶ್ವರನ (ಶ್ರೀಹರಿಯ) ಇಚ್ಛೆಯಿಂದ ತ್ರಿಗುಣಗಳಿಗೆ ಅಭಿಮಾನಿಯಾದ ಶ್ರೀ-ಭೂ-ದುರ್ಗಾರೂಪಳಾದ ರಮಾದೇವಿಯು ಮುಖ್ಯ ಬಂಧಕಶಕ್ತಿಪ್ರದಳು. ಶ್ರೀ-ಹರಿಯ ಅಧೀನಳಾಗಿ, ನಂತರ ಭಾರತೀ ಸರಸ್ವತಿಯರು, ನಂತರ ಸೌಪರ್ಣೀ ವಾರುಣೀ ಉಮಾದೇವಿಯರು ಸಹ, ಲಕ್ಷ್ಮೀದೇವಿಯಂತೆ ಆಕೆಯ ನಂತರ, ಪ್ರಕೃತಿಶಬ್ದವಾಚ್ಯರೂ ಪ್ರಕೃತ್ಯಭಿಮಾನಿಗಳೂ ಆಗಿದ್ದು, ಇವರೂ ಸಹ ಜೀವರನ್ನು ತ್ರಿಗುಣಗಳಿಂದ ಬಂಧಿಸುತ್ತಾರೆ. ಇವರಲ್ಲಿ ಉತ್ತಮರು ಉತ್ತಮಾಧಿಕಾರಿಗಳಲ್ಲಿಯೂ, ಕೆಳಗಿನವರು ಕೆಳಗಿನ ಅಲ್ಪಾಧಿಕಾರಿಗಳಲ್ಲಿಯೂ ತ್ರಿಗುಣಕಾರ್ಯಪ್ರವರ್ತಕರಾಗಿರು-ವರೆಂಬುದು ಸಾಮಾನ್ಯ ನಿಯಮ. ಪ್ರತಿ ಜೀವರ ಲಿಂಗದೇಹದಲ್ಲಿ ಪಿಶಾಚಿಗಳಂತೆ ಆವಿಷ್ಟರಾದ ಇಬ್ಬರು 'ದುರ್ದೇವತೆಗಳೂ' ಇರುತ್ತಾರೆ. ಇವರೂ ಅಮುಖ್ಯ ಪ್ರಕೃತಿ ಶಬ್ದವಾಚ್ಯರು. ಇವರು ಜೀವನಿಗೆ, ತನ್ನ (ಆತನ) ಸ್ವರೂಪವನ್ನೂ, ಅಂತರ್ಯಾಮಿ ಭಗವಂತನನ್ನೂ ಮರೆಮಾಡಿರುತ್ತಾರೆ. ಈ ದುರ್ದೇವತಾ ನಿಯಾಮಕರು, ಪ್ರಕೃತಿ-ಶಬ್ದ ವಾಚ್ಯರಾದ ಲಕ್ಷ್ಮೀ ಮೊದಲಾದ ಉತ್ತಮರೇ ಆಗಿರುವರು. ಉತ್ತಮರು ಅಧಮರ ದ್ವಾರಾ, ಮೋಕ್ಷವಿರೋಧಿ ವ್ಯಾಪಾರಗಳನ್ನು ಸುಜೀವರಿಂದ ನಡೆಸುವುದು, ಕನಿಷ್ಠರನ್ನು ಫಲಭಾಗಿಗಳನ್ನಾಗಿ ಮಾಡುವುದಕ್ಕಾಗಿ ಎಂಬುದು ಶಾಸ್ತ್ರಸಿದ್ಧ ನಿರ್ಣಯ. ಈ ಎರಡು ಪ್ರಕೃತಿಶಬ್ದವಾಚ್ಯ ದುರ್ದೇವತೆಗಳು ಸ್ವಗುಣಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾ ಎಂದು ಕರೆಯಲ್ಪಡುತ್ತಾರೆ. ಈ ಉಭಯ ಪ್ರಕೃತಿಗಳಿಂದ ವಿಮುಕ್ತನಾಗದಿದ್ದರೆ ಜೀವನು ತ್ರಿಗುಣಾತೀತನಾಗಲು ಸಾಧ್ಯವಿಲ್ಲ.

..ೀಗಿರುವ ಲಿಂಗದೇಹದಿಂದ ವಿಮುಕ್ತರಾದ ಜೀವಸ್ವರೂಪವು, ಪೊರೆಬಿಟ್ಟ ಹಾವಿನಂತೆ ನಿತ್ಯ ಶುದ್ಧ ಜಾಗ್ರತ ಸ್ವಭಾವವುಳ್ಳದ್ದಾಗಿ ಉಳಿಯುತ್ತದೆ. ಜೀವಸ್ವರೂಪಕ್ಕೆ ಆಕಾರವಿದೆ. ಜೀವಸ್ವರೂಪಗಳ ನಾನಾ ಆಕಾರಗಳು, ವಿಕಾರ ಹೊಂದುವ ಪ್ರಾಕೃತ ಆಕಾರಗಳಂತೆ ಅಲ್ಲ. ಲೋಕಾನುಭವದಿಂದ ನಾವು ತಿಳಿದಿರುವ ತಿಳಿಯಬಹುದಾದ

ಆಕಾರಗಳೆಲ್ಲವೂ ವಿಕಾರ ಮತ್ತು ನಾಶವುಳ್ಳವುಗಳೇ ಆಗಿವೆ. ಚೇತನ ಸ್ವರೂಪವನ್ನು ಕಾಣದ ಅಜ್ಞಲೋಕಾನುಭವವನ್ನಾಶ್ರಯಿಸಿ, ಚೇತನ ವಸ್ತುವೇ ನಿರಾಕಾರವಾದು-ದೆಂದು ತಿಳಿಯುವುದು ಆಗಮ ಪ್ರಾಮಾಣ್ಯವನ್ನು ತಿರಸ್ಕರಿಸುವ ನಾಸ್ತಿಕ ಬುದ್ಧಿಯೇ ಸರಿ. ನಿರಾಕಾರ ವಸ್ತುವೆಂದರೆ ಶೂನ್ಯ ಒಂದೇ.

ತ್ರಿಗುಣಗಳು, ಉತ್ತಮ ಜೀವಜಾತವನ್ನು ಪ್ರಚುರ ಸತ್ವಗುಣದಿಂದಲೂ, ಮಧ್ಯಮರನ್ನು ರಜೋಗುಣ ಪ್ರಾಚುರ್ಯದಿಂದಲೂ, ಅಧಮರನ್ನು ತಮೋಗುಣ ಪ್ರಾಚುರ್ಯದಿಂದಲೂ ಬಂಧಿಸಿರುತ್ತವೆ. ಏವಂಚ, ಎಲ್ಲರನ್ನೂ ತ್ರಿಗುಣಗಳು ಬಂಧಿ-ಸಿರುತ್ತವೆ. ಸತ್ವಗುಣವು (ತದಭಿಮಾನಿ ಶ್ರೀದೇವಿಯು) ಸುಖ ವಿಷಯದಲ್ಲಿ, ರಜೋ-ಗುಣವು (ಭೂದೇವಿಯು) ಕರ್ಮ ವಿಷಯದಲ್ಲಿಯೂ, ತಮೋಗುಣವು (ದುರ್ಗಾ-ದೇವಿಯು) ಆಲಸ್ಯ ಅಧರ್ಮಾದಿ ಪ್ರವೃತ್ತಿಗಳಲ್ಲಿಯೂ, ಪ್ರೇರಿಸುತ್ತವೆ. ಜೀವರ ಸ್ವರೂಪ ಯೋಗ್ಯತೆ ಮತ್ತು ಅನಾದಿ ಕರ್ಮಗಳನ್ನನುಸರಿಸಿ, ತ್ರಿಗುಣಗಳು ರಮಾ-ರೂಪಗಳಿಂದ ಪ್ರೇರಿತಗಳಾಗಿ ಜೀವರನ್ನು ಸ್ಥೂಲದೇಹೇಂದ್ರಿಯಗಳ ದ್ವಾರಾ ಪ್ರವೃತ್ತಿಸುವಂತೆ ಮಾಡುತ್ತವೆ. ಈ ಪ್ರವೃತ್ತಿಯನ್ನು 'ಗುಣಕೃತ ಕರ್ತೃತ್ವ'ವೆಂದು ಕರೆಯಲಾಗುತ್ತದೆ. ತ್ರಿಗುಣಪ್ರಭಾವಕ್ಕೊಳಗಾಗಿ ಪ್ರವೃತ್ತಿಸುವುದೇ ಗುಣಬಂಧವು—ಉಚ್ಚನೀಚ ಯೋನಿಗಳಲ್ಲಿ ಹುಟ್ಟುವುದಕ್ಕೆ ಕಾರಣ. ಗುಣಕೃತ ಕರ್ತೃತ್ವದಿಂದಾಗುವ ಕರ್ಮಗಳೇ ಸುಖ ದುಃಖಗಳಿಗೆ ಕಾರಣಗಳು. ಈ ತ್ರಿಗುಣಗಳ ಪ್ರಭಾವವನ್ನು (ಗುಣಕೃತ ಕರ್ತೃತ್ವವನ್ನು) ಅತಿಕ್ರಮಿಸಿ ಸ್ವರೂಪಗುಣಾನುಸಾರ ಪ್ರವೃತ್ತಿಸುವುದೇ ತ್ರಿಗುಣಾತೀತತ್ವವು—ತ್ರಿಗುಣಗಳನ್ನು ದಾಟುವುದು. ಇದನ್ನು ಹೊಂದುವುದೇ ಸಕಲ ಸಾಧನಗಳ ಗುರಿ ಎಂದರೆ, ಲಿಂಗಭಂಗವೇ ಮುಖ್ಯ ಗುರಿಯು.

೨೧. ಆನಂದಮಾತ್ರವಪುಷಾಂ, ತದನುಭವರಹಿತಾನಾಂ, ಸ್ವಸ್ವಯೋಗ್ಯ-ಭಗವದ್ರೂಪ ವಿಶೇಷ ಧ್ಯಾನರತಾನಾಂ, ಸೃಷ್ಟಿಕಾಲೇ ಭಗವದಾಜ್ಞಯಾ ಭಗವದುದರಾದ್ ಬಹಿರ್ಗತಾನಾಂ ಶ್ರೀ ಶ್ವೇತದ್ವೀಪದರ್ಶನಂ ನಿಮಿತ್ತೀಕೃತ್ಯ ಪ್ರಧಾನಾವರಣಭೂತ ಸ್ವೇಚ್ಛಾಪಸರಣೇನ ಸ್ವಸ್ವಯೋಗ್ಯಾನಂದಾವಿರ್ಭಾವಲಕ್ಷಣ ಮುಕ್ತಿಪ್ರದಾನ ಪ್ರಯೋಜನಕ ಮಾಯಾಪತಿ ಶ್ರೀ ವಾಸುದೇವಾತ್ಮಕ.....

ಪ್ರತಿಪದಾರ್ಥ: ಆನಂದಮಾತ್ರವಪುಷಾಂ—ಆನಂದವೇ ದೇಹವಾಗಿವುಳ್ಳ (ಆನಂದ ಸ್ವರೂಪರಾದ), ತದನುಭವರ್ರತಾನಾಂ—ಆ ದೇಹದಿಂದ ಪಡೆಯಬಹುದಾದ ಪೂರ್ಣಾ-ನಂದ ರ್ರತರಾದ, ಸ್ವಸ್ವಯೋಗ್ಯ ಭಗವದ್ರೂಪ ವಿಶೇಷ ಧ್ಯಾನರತಾನಾಂ—ಸ್ವಯೋಗ್ಯ-ವಾದ ಭಗವಂತನ ರೂಪವನ್ನು ಧ್ಯಾನಿಸುವುದರಲ್ಲಿ (ಪ್ರಳಯ ಕಾಲದಲ್ಲಿ ಶ್ರೀಹರಿಯ ಉದರದಲ್ಲಿದ್ದು) ಆಸಕ್ತರಾದ, ಸೃಷ್ಟಿಕಾಲೇ—ಸೃಷ್ಟಿಕಾಲವು ಪ್ರಾಪ್ತವಾಗಲು, ಭಗವ-

ದಾಜ್ಞಯಾ— ಭಗವಂತನ ಆಜ್ಞೆಯಿಂದ, ಭಗವದುದರಾತ್— ಭಗವಂತನ ಉದರದಿಂದ, ಬ್ಹಿರ್ನಿರ್ಗತಾನಾಂ— ಹೊರಗೆ ಬಂದವರಿಗೆ, ಶ್ರೀಶ್ವೇತದ್ವೀಪ ದರ್ಶನಂ— (ಮುಕ್ತಗಮ್ಯ-ವಾದ) ಶ್ವೇತದ್ವೀಪ ದರ್ಶನವನ್ನು, ನಿಮಿತ್ತೀಕೃತ್ಯ— ಕಾರಣವಾಗಿಟ್ಟುಕೊಂಡು, ಪ್ರಧಾನಾ-ವರಣಭೂತ— (ಪೂರ್ಣಾನಂದದ ಅಭಿವ್ಯಕ್ತಿಗೆ ಅವಕಾಶ ಕೊಡದ) ಜೀವಸ್ವರೂಪದ ಮುಖ್ಯಾವರಣಭೂತವಾದ, ಸ್ವೇಚ್ಛಾಪಸರಣೇನ— ತನ್ನ ಇಚ್ಛಾ ರೂಪದ ಆವರಣವನ್ನು ಅಪಸರಣ ಮಾಡಿ (ತೆರೆಯನ್ನು ತೆಗೆದು ದೂರ ಸರಿಸಿ), ಸ್ವಸ್ವಯೋಗ್ಯಾನಂದಾವಿರ್ಭಾವ-ಲಕ್ಷಣ— ಜೀವಸ್ವರೂಪ ಯೋಗ್ಯವಾದ ಪೂರ್ಣಾನಂದವನ್ನು ಪ್ರಕಟಗೊಳಿಸುವುದೆಂಬ, ಮುಕ್ತಿಪ್ರದಾನ ಪ್ರಯೋಜನಕ— ಮುಕ್ತಿ ಪ್ರದಾನವೇ ಪ್ರಯೋಜನವಾಗಿವುಳ್ಳ, ಮಾಯಾಪತಿ ಶ್ರೀವಾಸುದೇವಾತ್ಮಕ— ಮಾಯಾಪತಿ ಶ್ರೀವಾಸುದೇವ ಸ್ವರೂಪನಾದ—

ತಾತ್ಪರ್ಯ: ಮಹಾ ಪ್ರಳಯ ಕಾಲದಲ್ಲಿ ಭಗವಂತನ ಉದರ ಪ್ರವೇಶಮಾಡಿ ಸೃಷ್ಟಿಕಾಲ ಪರ್ಯಂತ ಧ್ಯಾನಾವಸ್ಥೆಯಲ್ಲಿರುವ ಜೀವರು, ಲಿಂಗದೇಹವನ್ನು ತೊರೆದು ಸ್ವಸ್ವರೂಪಾನಂದ ದೇಹಿಗಳಾಗಿರುವರು. ಆದರೂ ಸ್ವಯೋಗ್ಯವಾದ ಪೂರ್ಣಾ-ನಂದವು ಈ ಮುಕ್ತರ ಅನುಭವಕ್ಕೆ ಬರುವುದಿಲ್ಲ. ಸೃಷ್ಟಿಕಾಲ ಬರುವವರೆಗೆ ಸ್ವಬಿಂಬ ಧ್ಯಾನದಲ್ಲಿ ಆಸಕ್ತರಾಗಿರುತ್ತಾರೆ. ಸೃಷ್ಟಿಸಮಯ ಬರಲು, ಭಗವದಾಜ್ಞೆಯಂತೆ ಈ ಎಲ್ಲರೂ ಉದರದಿಂದ ಹೊರಗೆ ಬರುತ್ತಾರೆ; ವ್ಯಕ್ತಗೊಳಿಸಲ್ಪಟ್ಟ ಶ್ವೇತದ್ವೀಪ ದರ್ಶನಕ್ಕಾಗಿ ಇವರೆಲ್ಲರನ್ನೂ ಮಾಯಾಪತಿ ಶ್ರೀವಾಸುದೇವನು ಅಲ್ಲಿಗೆ ಕರೆ-ದೊಯ್ಯುತ್ತಾನೆ. ಅಲ್ಲಿರುವ ತನ್ನದೇ ಆದ ನಾರಾಯಣ (ಪದ್ಮನಾಭ) ರೂಪದ ಸಂದರ್ಶನವನ್ನು ಮಾಡಿಸುತ್ತಾನೆ. ಆಗ ತನ್ನ ಇಚ್ಛಾರೂಪದ ಆವರಣವನ್ನು ಅಪಸರಣ ಮಾಡಿ, (ಇವರಿಗೆ ಪೂರ್ಣಾನಂದಾನುಭವವು ದೊರೆಯಲೆಂದು ಸಂಕಲ್ಪಿಸಿ) ತನ್ನ ಇಚ್ಛೆಯೆಂಬ, ಆವರಣಗಳಲ್ಲಿ ಪ್ರಧಾನವಾದ ಆವರಣವು ದೂರ-ವಾಗಲು, ಅವರನ್ನು ಮುಕ್ತರೆಂದೆನಿಸುತ್ತಾನೆ. ಈ ವ್ಯಾಪಾರವು ಶ್ರೀವಾಸುದೇವ ರೂಪದಿಂದ ಆಗುವುದರಿಂದ ವಾಸುದೇವನು ಮುಕ್ತಿಪ್ರದಾತನೆನಿಸಿರುವನು.

ಪ್ರಮೇಯ ವಿವರಣೆ: (೧) *'ದೃಷ್ಟ್ವಾ ಸ ಚೇತನಗಣಾನ್ ಜಠರೇ ಶಯಾನಾನ್ ಆನಂದಮಾತ್ರವಪುಷಃ ಸೃತಿವಿಪ್ರಮುಕ್ತಾನ್। ಧ್ಯಾನಂ ಗತಾನ್—'* ಎಂದು ಭಾರತ ತಾತ್ಪರ್ಯದಲ್ಲಿ ಉಕ್ತವಾದ ಪ್ರಮೇಯವನ್ನು ಇಲ್ಲಿ ನಿರೂಪಿಸಲಾಗಿದೆ. ಲಿಂಗ ಭಂಗ-ವನ್ನು ಸಹ ಹೊಂದಿ, ಸಂಸಾರದಿಂದ ವಿಪ್ರಮುಕ್ತರಾದ ಜೀವರು, ಪ್ರಳಯ ಕಾಲದಲ್ಲಿ ಪರಮಾತ್ಮನ ಉದರದಲ್ಲಿರುತ್ತಾ ಸ್ವಯೋಗ್ಯ ಧ್ಯಾನದಲ್ಲಿರುವವರನ್ನು, ಸೃಷ್ಟಿಕಾಲ ಬರಲು, ಉದರದಿಂದ ಹೊರಗೆ ತಂದು ಶ್ವೇತದ್ವೀಪಕ್ಕೆ ಕರೆದೊಯ್ದು, ನಾರಾಯಣನ ದರ್ಶನದಿಂದ ಇಚ್ಛಾವರಣದ ಅಪಸರಣ ಮಾಡಿ, ಸ್ವಸ್ವರೂಪಾನಂದದ ಪೂರ್ಣಾನು-ಭವವುಳ್ಳವರನ್ನಾಗಿಸಿ ಮುಕ್ತರೆಂಬ ನಾಮವು ಪೂರ್ಣ ಅನ್ವರ್ಥವಾಗುವಂತೆ ಮಾಡು-

ವವನು ಮಾಯಾಪತಿ ಶ್ರೀವಾಸುದೇವನು. 'ತದನುಭವರ್ರತಾನಾಂ'—ಎಂದರೆ ಆನಂದಾನುಭವರ್ರತರೆಂದರ್ಥವಲ್ಲ. ..ಂದಿನ ಕಲ್ಪದಲ್ಲಿ ಮುಕ್ತರಾದವರು ಮತ್ತು ಈ ಕಲ್ಪದಲ್ಲಿ ಲಿಂಗ ಭಂಗವನ್ನು ಹೊಂದಿದವರೆಂಬ ಉಭಯರೂ '*ಆನಂದಮಾತ್ರ ವಪುಷರೇ*'—'*ವಿಲಿಂಗಾಃ ಆನಂದಾನುಭವಿನಃ ಅನ್ಯೇ ವಿಲಿಂಗಮಾತ್ರಾಃ ಉಭೇ ಆನಂದಮಾತ್ರವಪುಷಃ*' ಎಂಬಲ್ಲಿ ಹೇಳಿರುವಂತೆ; 'ಆನಂದಮಾತ್ರವಪುಷಃ' ಎಂಬ ವಿಶೇಷವು ಸರ್ವಥಾ ಆನಂದರ್ರತರೆಂದು ಅರ್ಥ ಮಾಡಲು ಅವಕಾಶ ಕೊಡುವು-ದಿಲ್ಲ. ಧ್ಯಾನದಲ್ಲಿದ್ದರೂ ಆನಂದರ್ರತರೆಂಬುದು ಯುಕ್ತಿವಿರೋಧವು. ಮುಂದೆ ಸೃಷ್ಟಿಯಲ್ಲಿ ಬರತಕ್ಕ ಜೀವರು ಸುಪ್ತಿಯಲ್ಲಿರುವರೆಂದು ಅಲ್ಲಿಯೇ ಹೇಳಲಾಗಿದೆ. ಸಂಸಾರಾವಸ್ಥೆಯಲ್ಲಿರುವ ಜೀವರಿಗೆ ಸಹ ಬಾಹ್ಯಾಂತಃಕರಣದಿಂದ ಶ್ರೀಹರಿಧ್ಯಾನ-ಮಾಡುತ್ತಿರುವಾಗ ವಿಲಕ್ಷಣವಾದ ಆನಂದವು ಲಭಿಸುತ್ತಿರಲು, ಲಿಂಗದೇಹವನ್ನು ಬಿಟ್ಟ ಆನಂದವಪುಷರಿಗೆ, ಶ್ರೀಹರಿಧ್ಯಾನದಲ್ಲಿರುವ ಆನಂದದ ಅನುಭವವು ಸರ್ವಥಾ ಇಲ್ಲವೆಂಬುದು ಯುಕ್ತವಲ್ಲ. ಆದ್ದರಿಂದ ಆನಂದರ್ರತರೆಂದರೆ ಸ್ವಯೋಗ್ಯ ಪೂರ್ಣಾ-ನಂದವಿಲ್ಲದವರೆಂಬ ಅರ್ಥವನ್ನೇ ತಿಳಿಯಬೇಕು. ಈ ನಿರ್ಣಯವೇ ಮುಂದಿನ ಸತ್ತತ್ವರತ್ನಮಾಲಾ ವಾಕ್ಯದಿಂದಲೂ ಸಿದ್ಧವಾಗುತ್ತದೆ. '*ತಮೇವ ಪರಮ ಪ್ರೇಷ್ಠಂ ಧ್ಯಾಯಂತಃ ಕಮಲಾಪತಿಂ। ಯಾವತ್ಸೃಷ್ಟಿವಸಂತ್ಯತ್ರ ಸಂಪೂರ್ಣಾನಂದ ಭೋಜನಾಃ। ಶ್ವೇತದೀಪಂ ತತೋ ಗತ್ವಾ...*' ಇತ್ಯಾದಿ (ಇಲ್ಲಿ ಸಂಪೂರ್ಣವೆಂಬುದು ಸಂಸಾರಾವಸ್ಥೆಯಲ್ಲಿ ಎಂದೂ ಅನುಭವಿಸದ ಅಧಿಕಾನಂದವೆಂದು ಹೇಳುತ್ತದೆ.)

(೨) ತ್ರಿಗುಣಬಂಧಪ್ರಕಾರವು ವಾಕ್ಯ ೨೦, ಪ್ರ.ವಿ. (೨) ರಲ್ಲಿ ವಿಸ್ತರಿಸಲ್ಪಟ್ಟಿದೆ. ಅಲ್ಲಿ ಹೇಳಲಾಗಿರುವ ಬಂಧನಕಾರಣಗಳಿಗೆಲ್ಲ ಮೂಲವಾದುದು ಶ್ರೀಹರೀಚ್ಛೆ. '*ಈಶ್ವರೇಚ್ಛಾ ಪ್ರಾಥಮಿಕೀ—ದ್ವಿತೀಯಾ ಪ್ರಕೃತಿಃ ಪ್ರೋಕ್ತಾ*' ಇತ್ಯಾದಿ ಭಾಗವತ ದ್ವಿತೀಯಸ್ಕಂದ ತಾತ್ಪರ್ಯ ವಾಕ್ಯಗಳು, ಜೀವನನ್ನು ಸಂಸಾರಬಂಧನಕ್ಕೊಳಪಡಿ-ಸಿರುವ ಕಾರಣಗಳನ್ನು ನಿರೂಪಿಸುತ್ತವೆ. ಮತ್ತು ಈಶ್ವರೇಚ್ಛೆಯೇ ಪ್ರಥಮ (ಪ್ರಧಾನ) ಕಾರಣವೆಂದೂ ಹೇಳುತ್ತವೆ. ಪರಮಾತ್ಮನ ಇಚ್ಛಾರೂಪದ ಆವರಕವು ಆತನ ಪ್ರಸಾದರೂಪ ಅನುಗ್ರಹೇಚ್ಛೆಯಿಂದಲೇ ಪರಿಹಾರವಾಗಬೇಕಷ್ಟೆ! ಲಿಂಗದೇಹವನ್ನು ತೊರೆದ ನಂತರ ಸಹ, ಶ್ವೇತದ್ವೀಪಕ್ಕೆ ಹೋಗಿ ಶ್ರೀಹರಿದರ್ಶನವನ್ನು ಪಡೆಯುವ-ವರೆಗೆ, ಜೀವನು (ಪೂರ್ಣ) ಮುಕ್ತನೇ ಅಲ್ಲವೆಂದು, '*...ಯಾವಚ್ಛ್ವೇತಂ ನ ಗಚ್ಛತಿ*' ಎಂಬ ಶ್ರುತಿಯೇ ಹೇಳುತ್ತದೆ.

೨೨. ಲಕ್ಷ್ಮ್ಯಾತ್ಮಕ ಪ್ರಲಯಾಬ್ಧಿಸ್ಥ ಶ್ರೀವಟಪತ್ರಶಾಯಿ, ಅಶೇಷಜಗದುದರ, ಅಶೇಷಮುಕ್ತನಾಭಿದೇಶೋರ್ಧ್ವಭಾಗಕುಕ್ಷ್ಯಬ್ದಿದೇಶ, ತ್ರಿವಿಧಾಶೇಷ ಸಂಸಾರಿನಾಭಿ-

ದೇಶ, ಅಶೇಷತಮಃಪತಿತನಾಭ್ಯಧೋಭಾಗದೇಶ, ಶ್ರೀಭೂಮ್ಯಾಲಿಂಗಿತ, ಕಾಲಾದಿಚೇಷ್ಟಕ, ಪರ್ಮಾಣ್ವಾದ್ಯಶೇಷಕಾಲಾವಯವ ಸೃಷ್ಟ್ಯಾದಿಕರ್ತೃ, ಅಶೇಷ-ನಾಮಕ, ಪರಮಪುರುಷನಾಮಕ ಶ್ರೀಚತುರ್ಮುಖಮುಖ್ಯಪ್ರಾಣೋಪಾಸಿತಚರಣ, ಅನಿರುದ್ಧಾದಿ ಚತೂರೂಪಾತ್ಮಕ, ಗಾಯತ್ರೀನಾಮಕ, ಸವಿತೃನಾಮಕರೂಪ-ವಿಶೇಷಾತ್ಮಕ, ವ್ಯಾಪ್ತರೂಪ, ಬೃಹಚ್ಛರೀರ.....

ಪ್ರತಿಪದಾರ್ಥ: ಲಕ್ಷ್ಮ್ಯಾತ್ಮಕ—ಲಕ್ಷ್ಮೀಸ್ವರೂಪವೇ ಆದ, ಪ್ರಳಯಾಬ್ಧಿಸ್ಥ-ಪ್ರಳಯ ಸಮುದ್ರದಲ್ಲಿರುವ, ಶ್ರೀವಟಪತ್ರ ಶೇಷಶಾಯಿ—ಲಕ್ಷ್ಮೀಸ್ವರೂಪದ (ಶ್ರೀ) ವಟಪತ್ರವೇ ಶೇಷದೇವನಂತಿರುವ ಶಯನದಲ್ಲಿ ಮಲಗಿರುವ, ಅಶೇಷ ಜಗದುದರ—ಸಮಸ್ತ ಜಗತ್ತನ್ನು ಉದರಲ್ಲಿ ಧರಿಸಿರುವ, ಅಶೇಷ ಮುಕ್ತನಾಭಿದೇಶೋರ್ಧ್ವಭಾಗ ಕುಕ್ಷ್ಯಾಖ್ಯದೇಶ—ಸಮಸ್ತ ಮುಕ್ತಜೀವರನ್ನು ಧರಿಸಿದ ನಾಭಿಯ ಮೇಲಿನ ಕುಕ್ಷಿಯೆಂಬ ದೇಹಭಾಗವುಳ್ಳ, ತ್ರಿವಿಧಾಶೇಷ ಸಂಸಾರಿ ನಾಭಿದೇಶ—ಸರ್ವ ಸಂಸಾರಿ ಜೀವರನ್ನು ಧರಿಸಿದ ನಾಭಿದೇಶವುಳ್ಳ, ಅಶೇಷ ತಮಃಪತಿತ ನಾಭ್ಯಧೋ ಭಾಗದೇಶ—ತಮಸ್ಸಿನಲ್ಲಿ ಬಿದ್ದಿರುವ ಸಮಸ್ತರನ್ನು ಧರಿಸಿದ ನಾಭಿಯ ಕೆಳಭಾಗವುಳ್ಳ, ಶ್ರೀಭೂಮ್ಯಾಲಿಂಗಿತ—ಶ್ರೀ ಭೂದೇವಿಯರಿಂದ ಆಲಿಂಗಿತನೂ, ಕಾಲಾದಿಚೇಷ್ಟಕ—ಕಾಲಾದಿ ನಿಯಾಮಕನೂ, ಪರಮಾಣ್ವಾದ್ಯಶೇಷ ಕಾಲಾವಯವ—ಪರಮಾಣುವೇ ಮೊದಲಾದ ಸಮಸ್ತ ಕಾಲ ವಿಭಾಗಗಳ, ಸೃಷ್ಟ್ಯಾದಿಕರ್ತೃ—ಸೃಷ್ಟ್ಯಾದಿಕರ್ತ-ನಾದ, ಶೇಷನಾಮಕ—ಶೇಷನೆಂದು ಕರೆಯಲ್ಪಡುವ, ಪರಮಪುರುಷನಾಮಕ—ಪರಮ-ಪುರುಷನೆಂಬ (ಪುರುಷೋತ್ತಮನೆಂಬ) ನಾಮವುಳ್ಳ, ಶ್ರೀ ಚತುರ್ಮುಖ ಮುಖ್ಯಪ್ರಾಣೋ-ಪಾಸಿತ ಚರಣ—ಸಂಪದ್ಯುಕ್ತವಾದ (ಮಂಗಳ—ಶುದ್ಧ ಸ್ವರೂಪರಾದ) ಚತುರ್ಮುಖ ಬ್ರಹ್ಮ ಮತ್ತು ಮುಖ್ಯಪ್ರಾಣರಿಂದ ಉಪಾಸಿಸಲ್ಪಡುವ ಚರಣಗಳುಳ್ಳ, ಅನಿರುದ್ಧಾದಿ ಚತೂ-ರೂಪಾತ್ಮಕ—ಅನಿರುದ್ಧಾದಿ ನಾಲ್ಕು ರೂಪಗಳುಳ್ಳ, ಗಾಯತ್ರೀನಾಮಕ ಸವಿತೃನಾಮಕ ರೂಪ ವಿಶೇಷಾತ್ಮಕ—ಗಾಯತ್ರೀ ಮತ್ತು ಸವಿತೃ ಎಂಬ ರೂಪ ವಿಶೇಷಗಳುಳ್ಳ, ವ್ಯಾಪ್ತ-ರೂಪ ಬೃಹಚ್ಛರೀರ—ಸರ್ವವ್ಯಾಪಕವೂ ಗುಣಪೂರ್ಣವೂ (ಬೃಹತ್) ಆದ ಶರೀರ-ವುಳ್ಳವನೂ, ಆದ—

ತಾತ್ಪರ್ಯ: ಪ್ರಳಯಕಾಲದಲ್ಲಿ ಶ್ರೀಹರಿಯು ಚೇತನಾಚೇತನಾತ್ಮಕ ಸಮಸ್ತ ಜಗತ್ತನ್ನೂ ತನ್ನ ಉದರದಲ್ಲಿಟ್ಟುಕೊಂಡು ಮೂಲರೂಪದಿಂದ (ನಾರಾಯಣನು) ಪ್ರಳಯೋದಧಿಯಲ್ಲಿ ವಟಪತ್ರದಲ್ಲಿ ಮಲಗಿರುತ್ತಾನೆ. ಆಗ ಪ್ರಾಕೃತ ಜಲಾದಿಗಳು ಯಾವುವೂ ಇರುವುದಿಲ್ಲ; ಲಕ್ಷ್ಮೀದೇವಿಯೇ ಜಲರೂಪದಿಂದ ಪ್ರಳಯ ಸಮುದ್ರ-ವಾಗಿರುತ್ತಾಳೆ; ಮತ್ತೊಂದು ರೂಪದಿಂದ ವಟಪತ್ರವೂ (ಆಲದೆಲೆ) ಆಗಿರುತ್ತಾಳೆ. ..ೀಗೆ ಶಯನ ಮಾಡಿರುವ ನಾರಾಯಣನು (ನಾಭಿಯ ಮೇಲಿರುವ) ಕುಕ್ಷಿ ಪ್ರದೇಶ-ದಲ್ಲಿ ಸರ್ವಮುಕ್ತರನ್ನೂ (ಮುಕ್ತಲೋಕಗಳನ್ನೂ ಸಹ); ನಾಭಿದೇಶದಲ್ಲಿ ತ್ರಿವಿಧರಾದ ಸಕಲ ಸಂಸಾರಿ (ಮುಂದಿನ ಸೃಷ್ಟಿಯಲ್ಲಿ ಬರತಕ್ಕ) ಜೀವರನ್ನು; ನಾಭಿಯ ಕೆಳಭಾಗ-

ದಲ್ಲಿ ನಿತ್ಯ ತಮಸ್ಸನ್ನು ಹೊಂದಿರುವ ತಮೋಯೋಗ್ಯ ಜೀವರನ್ನೂ ಧರಿಸಿರುತ್ತಾನೆ; ಅದ್ಭುತವು! ಈ ವಟಪತ್ರಶಾಯಿ ನಾರಾಯಣನು ಶ್ರೀಭೂದೇವಿಯುವರ ಆಲಿಂಗನ-ದಲ್ಲಿರುತ್ತಾನೆ. ಈತನೇ ಕಾಲ ನಿಯಾಮಕನು—ಪರಮಾಣು ಮೊದಲಾದ ಸೂಕ್ಷ್ಮ ಕಾಲಾಂಶಗಳ ನಿರ್ಮಾತನೂ ಆಗಿರುವನು. ಸ್ವೇತರ ಸಮಸ್ತವೂ ಕಾರ್ಯಶೂನ್ಯಾ-ವಸ್ಥೆಯಲ್ಲಿರುವ ಪ್ರಳಯಕಾಲದಲ್ಲಿ, ತಾನೊಬ್ಬನೇ ಸರ್ವವನ್ನೂ ಕಾಣುತ್ತ ಜಾಗ್ರತ-ನಾಗಿ ಪೂರ್ಣಾನಂದವನ್ನು ಅನುಭವಿಸುತ್ತ, ಉಳಿದಿರುವನಾದ್ದರಿಂದ 'ಶೇಷ'ನೆಂದೂ, ಸರ್ವೋತ್ತಮನಾದ್ದರಿಂದ 'ಪರಮಪುರುಷ'ನೆಂದೂ ಕರೆಯಲ್ಪಡುತ್ತಾನೆ. ಚತುರ್ಮುಖ ಬ್ರಹ್ಮ ಮತ್ತು ಮುಖ್ಯಪ್ರಾಣರಿಂದ ನಿತ್ಯೋಪಾಸಿತ ಚರಣಗಳುಳ್ಳವನು; ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವಗಳೆಂಬ ನಾಲ್ಕು ರೂಪಗಳಿಂದ ಪ್ರಕಟನಾಗು-ವವನು ಈತನೇ; ಗಾಯತ್ರೀ, ಸವಿತಾ ನಾಮಕ ರೂಪ ವಿಶೇಷಗಳುಳ್ಳವನು; ಗುಣಪೂರ್ಣನು (ಬೃಹದಾಕಾರ—ಸರ್ವವ್ಯಾಪ್ತವಾದ ಒಂದು ರೂಪವುಳ್ಳವನಾಗಿ) ಸರ್ವವನ್ನೂ ವ್ಯಾಪಿಸಿರುವನು.

ಪ್ರಮೇಯ ವಿವರಣೆ: (೧) *'ಯತ್ರ ವಾಯೂದ ಪದ್ಮಾದಿ ರೂಪೇಣ ಪ್ರಕೃತಿಃ ಸ್ಥಿತಾ'*—(ಭಾಗ.ತಾ) ಎಂಬಲ್ಲಿ, ವಾಯು, ಉದಕ, ಪದ್ಮ ಮೊದಲಾದ ರೂಪ-ಗಳಿಂದ ಶ್ರೀಮಹಾಲಕ್ಷ್ಮೀದೇವಿಯೇ ಪ್ರಳಯಕಾಲ ಪೂರ್ಣವಾಗುವವರೆಗೂ ಇರುವ-ಳೆಂದು ಹೇಳಿದೆ. ಇದೇ ಪ್ರಮೇಯವು ಬ್ರಹ್ಮಕಾಂಡ ಪುರಾಣದಲ್ಲಿ *'ಲಕ್ಷ್ಮೀರ್ವಾದಕ ರೂಪೇಣ ಶಯ್ಯಾರೂಪೇಣ ಚಾಂಡಜ। ಆಸೀದ್ಗರ್ಭೋದಕೇ ಚೇತ್ಥಂ ನಾನ್ಯ-ದಾಸೀತ್ಕಥಂಚನ॥'* ಎಂದರೆ, 'ಲಕ್ಷ್ಮೀದೇವಿಯೇ ಪ್ರಳಯೋದಕ ಮತ್ತು ಶಯ್ಯಾ-ರೂಪದಿಂದಿದ್ದಳು, ಹೇ ಗರುಡ! ಪ್ರಳಯೋದಕದಲ್ಲಿ ಮಲಗಿದ್ದ ಶ್ರೀಹರಿಯ ಉದರಾಂತರ್ಗತ ಜಲರೂಪಳೂ ಆಕೆಯೇ ಆಗಿದ್ದಳು—ಬೇರೇನೂ ಇರಲಿಲ್ಲ.' ಇದನ್ನೇ ಶ್ರೀಜಗನ್ನಾಥದಾಸರು, 'ಪ್ರಳಯಕಾಲದಿ ಪತಿಯು ಮಲಗಬೇಕೆನುತ ವಟ। **ದೆಲೆಯಾಗಿ ಹರಿಯ ಒಲಿಸಿದಿ। ಒಲಿಸಿದಿ ಜಗದ ಮಂಗಳ ದೇವಿ ನಮಗೆ ದಯವಾಗೆ।**' ಎಂದು ತತ್ವಸುವ್ವಾಲಿಯಲ್ಲಿ ನಿರೂಪಿಸಿರುವರು.

(೨) ವಟಪತ್ರದಲ್ಲಿ ಮಲಗಿದ ನಾರಾಯಣನನ್ನು ವರ್ಣಿಸುತ್ತ, *'ಆಸೀದುದಾರ ಗುಣವಾರಿಧಿರಪ್ರಮೇಯೋ ನಾರಾಯಣಃ ಪರತಮಃ ಪರಮಾತ್ಮ ಏಕಃ। ಸಂಶಾಂತ ಸಂವಿದಖಿಲಂ ಜಠರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ॥"* (ಭಾ-ತಾ) 'ಸೃಷ್ಟಿ ಪೂರ್ವದಲ್ಲಿ (ಪ್ರಳಯಕಾಲದಲ್ಲಿ) ಉತ್ಕೃಷ್ಟ ಗುಣಸಮುದ್ರನೂ, ಅಪ್ರಮೇಯನೂ, ಸರ್ವೋತ್ತಮೋತ್ತಮನೂ (ಲಕ್ಷ್ಮೀದೇವಿಗಿಂತ ಅನಂತಮಡಿ ಉತ್ತಮನೂ) ಆದ ನಾರಾಯಣನೊಬ್ಬನೇ, ಎಲ್ಲ ಜಗತ್ತನ್ನು ಉದರದಲ್ಲಿ ಧರಿಸಿ, ವೇದಾದಿಜ್ಞಾನವನ್ನು ಹೃದಯದಲ್ಲಿಟ್ಟುಕೊಂಡು ಲಕ್ಷ್ಮೀದೇವಿಯಿಂದ ಆಲಿಂಗಿತನಾಗಿ,

ದೇಶ, ಅಶೇಷತಮಃಪತಿತನಾಭ್ಯಧೋಭಾಗದೇಶ, ಶ್ರೀಭೂಮ್ಯಾಲಿಂಗಿತ, ಕಾಲಾದಿಚೇಷ್ಟಕ, ಪರಮಾಣ್ವಾದ್ಯಶೇಷಕಾಲಾವಯವ ಸೃಷ್ಟ್ಯಾದಿಕರ್ತೃ, ಅಶೇಷ-ನಾಮಕ, ಪರಮಪುರುಷನಾಮಕ ಶ್ರೀಚತುರ್ಮುಖಮುಖ್ಯಪ್ರಾಣೋಪಾಸಿತಚರಣ, ಅನಿರುದ್ಧಾದಿ ಚತೂರೂಪಾತ್ಮಕ, ಗಾಯತ್ರೀನಾಮಕ, ಸವಿತೃನಾಮಕರೂಪ-ವಿಶೇಷಾತ್ಮಕ, ವ್ಯಾಪ್ತರೂಪ, ಬೃಹಚ್ಛರೀರ.....

ಪ್ರತಿಪದಾರ್ಥ: ಲಕ್ಷ್ಮ್ಯಾತ್ಮಕ—ಲಕ್ಷ್ಮೀಸ್ವರೂಪವೇ ಆದ, ಪ್ರಳಯಾಬ್ಧಿಸ್ಥ-ಪ್ರಳಯ ಸಮುದ್ರದಲ್ಲಿರುವ, ಶ್ರೀವಟಪತ್ರ ಶೇಷಶಾಯಿ—ಲಕ್ಷ್ಮೀಸ್ವರೂಪದ (ಶ್ರೀ) ವಟಪತ್ರವೇ ಶೇಷದೇವನಂತಿರುವ ಶಯನದಲ್ಲಿ ಮಲಗಿರುವ, ಅಶೇಷ ಜಗದುದರ—ಸಮಸ್ತ ಜಗತ್ತನ್ನು ಉದರಲ್ಲಿ ಧರಿಸಿರುವ, ಅಶೇಷ ಮುಕ್ತನಾಭಿದೇಶೋರ್ಧ್ವಭಾಗ ಕುಕ್ಷ್ಯಾಖ್ಯದೇಶ—ಸಮಸ್ತ ಮುಕ್ತಜೀವರನ್ನು ಧರಿಸಿದ ನಾಭಿಯ ಮೇಲಿನ ಕುಕ್ಷಿಯೆಂಬ ದೇಹಭಾಗವುಳ್ಳ, ತ್ರಿವಿಧಾಶೇಷ ಸಂಸಾರಿ ನಾಭಿದೇಶ—ಸರ್ವ ಸಂಸಾರಿ ಜೀವರನ್ನು ಧರಿಸಿದ ನಾಭಿದೇಶವುಳ್ಳ, ಅಶೇಷ ತಮಃಪತಿತ ನಾಭ್ಯಧೋ ಭಾಗದೇಶ—ತಮಸ್ಸಿನಲ್ಲಿ ಬಿದ್ದಿರುವ ಸಮಸ್ತರನ್ನು ಧರಿಸಿದ ನಾಭಿಯ ಕೆಳಭಾಗವುಳ್ಳ, ಶ್ರೀಭೂಮ್ಯಾಲಿಂಗಿತ—ಶ್ರೀ ಭೂದೇವಿಯರಿಂದ ಆಲಿಂಗಿತನೂ, ಕಾಲಾದಿಚೇಷ್ಟಕ—ಕಾಲಾದಿ ನಿಯಾಮಕನೂ, ಪರಮಾಣ್ವಾದ್ಯಶೇಷ ಕಾಲಾವಯವ—ಪರಮಾಣುವೇ ಮೊದಲಾದ ಸಮಸ್ತ ಕಾಲ ವಿಭಾಗಗಳ, ಸೃಷ್ಟ್ಯಾದಿಕರ್ತೃ—ಸೃಷ್ಟ್ಯಾದಿಕರ್ತ-ನಾದ, ಶೇಷನಾಮಕ—ಶೇಷನೆಂದು ಕರೆಯಲ್ಪಡುವ, ಪರಮಪುರುಷನಾಮಕ—ಪರಮ-ಪುರುಷನೆಂಬ (ಪುರುಷೋತ್ತಮನೆಂಬ) ನಾಮವುಳ್ಳ, ಶ್ರೀ ಚತುರ್ಮುಖ ಮುಖ್ಯಪ್ರಾಣೋ-ಪಾಸಿತ ಚರಣ—ಸಂಪದ್ಯುಕ್ತವಾದ (ಮಂಗಳ—ಶುದ್ಧ ಸ್ವರೂಪರಾದ) ಚತುರ್ಮುಖ ಬ್ರಹ್ಮ ಮತ್ತು ಮುಖ್ಯಪ್ರಾಣರಿಂದ ಉಪಾಸಿಸಲ್ಪಡುವ ಚರಣಗಳುಳ್ಳ, ಅನಿರುದ್ಧಾದಿ ಚತೂ-ರೂಪಾತ್ಮಕ—ಅನಿರುದ್ಧಾದಿ ನಾಲ್ಕು ರೂಪಗಳುಳ್ಳ, ಗಾಯತ್ರೀನಾಮಕ ಸವಿತೃನಾಮಕ ರೂಪ ವಿಶೇಷಾತ್ಮಕ—ಗಾಯತ್ರೀ ಮತ್ತು ಸವಿತೃ ಎಂಬ ರೂಪ ವಿಶೇಷಗಳುಳ್ಳ, ವ್ಯಾಪ್ತ-ರೂಪ ಬೃಹಚ್ಛರೀರ—ಸರ್ವವ್ಯಾಪಕವೂ ಗುಣಪೂರ್ಣವೂ (ಬೃಹತ್) ಆದ ಶರೀರ-ವುಳ್ಳವನೂ, ಆದ—

ತಾತ್ಪರ್ಯ: ಪ್ರಳಯಕಾಲದಲ್ಲಿ ಶ್ರೀಹರಿಯು ಚೇತನಾಚೇತನಾತ್ಮಕ ಸಮಸ್ತ ಜಗತ್ತನ್ನೂ ತನ್ನ ಉದರದಲ್ಲಿಟ್ಟುಕೊಂಡು ಮೂಲರೂಪದಿಂದ (ನಾರಾಯಣನು) ಪ್ರಳಯೋದಧಿಯಲ್ಲಿ ವಟಪತ್ರದಲ್ಲಿ ಮಲಗಿರುತ್ತಾನೆ. ಆಗ ಪ್ರಾಕೃತ ಜಲಾದಿಗಳು ಯಾವುವೂ ಇರುವುದಿಲ್ಲ; ಲಕ್ಷ್ಮೀದೇವಿಯೇ ಜಲರೂಪದಿಂದ ಪ್ರಳಯ ಸಮುದ್ರ-ವಾಗಿರುತ್ತಾಳೆ; ಮತ್ತೊಂದು ರೂಪದಿಂದ ವಟಪತ್ರವೂ (ಆಲದೆಲೆ) ಆಗಿರುತ್ತಾಳೆ. ಹೀಗೆ ಶಯನ ಮಾಡಿರುವ ನಾರಾಯಣನು (ನಾಭಿಯ ಮೇಲಿರುವ) ಕುಕ್ಷಿ ಪ್ರದೇಶ-ದಲ್ಲಿ ಸರ್ವಮುಕ್ತರನ್ನೂ (ಮುಕ್ತಲೋಕಗಳನ್ನೂ ಸಹ); ನಾಭಿದೇಶದಲ್ಲಿ ತ್ರಿವಿಧರಾದ ಸಕಲ ಸಂಸಾರಿ (ಮುಂದಿನ ಸೃಷ್ಟಿಯಲ್ಲಿ ಬರತಕ್ಕ) ಜೀವರನ್ನು; ನಾಭಿಯ ಕೆಳಭಾಗ-

ದಲ್ಲಿ ನಿತ್ಯ ತಮಸ್ಸನ್ನು ಹೊಂದಿರುವ ತಮೋಯೋಗ್ಯ ಜೀವರನ್ನೂ ಧರಿಸಿರುತ್ತಾನೆ; ಅದ್ಭುತವು! ಈ ವಟಪತ್ರಶಾಯಿ ನಾರಾಯಣನು ಶ್ರೀಭೂದೇವಿಯವರ ಆಲಿಂಗನ-ದಲ್ಲಿರುತ್ತಾನೆ. ಈತನೇ ಕಾಲ ನಿಯಾಮಕನು—ಪರಮಾಣು ಮೊದಲಾದ ಸೂಕ್ಷ್ಮ ಕಾಲಾಂಶಗಳ ನಿರ್ಮಾತನೂ ಆಗಿರುವನು. ಸ್ವೇತರ ಸಮಸ್ತವೂ ಕಾರ್ಯಶೂನ್ಯಾ-ವಸ್ಥೆಯಲ್ಲಿರುವ ಪ್ರಳಯಕಾಲದಲ್ಲಿ, ತಾನೊಬ್ಬನೇ ಸರ್ವವನ್ನೂ ಕಾಣುತ್ತ ಜಾಗ್ರತ-ನಾಗಿ ಪೂರ್ಣಾನಂದವನ್ನು ಅನುಭವಿಸುತ್ತ, ಉಳಿದಿರುವನಾದ್ದರಿಂದ 'ಶೇಷ'ನೆಂದೂ, ಸರ್ವೋತ್ತಮನಾದ್ದರಿಂದ 'ಪರಮಪುರುಷ'ನೆಂದೂ ಕರೆಯಲ್ಪಡುತ್ತಾನೆ. ಚತುರ್ಮುಖ ಬ್ರಹ್ಮ ಮತ್ತು ಮುಖ್ಯಪ್ರಾಣರಿಂದ ನಿತ್ಯೋಪಾಸಿತ ಚರಣಗಳುಳ್ಳವನು; ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವಗಳೆಂಬ ನಾಲ್ಕು ರೂಪಗಳಿಂದ ಪ್ರಕಟನಾಗು-ವವನು ಈತನೇ; ಗಾಯತ್ರೀ, ಸವಿತಾ ನಾಮಕ ರೂಪ ವಿಶೇಷಗಳುಳ್ಳವನು; ಗುಣಪೂರ್ಣನು (ಬೃಹದಾಕಾರ—ಸರ್ವವ್ಯಾಪ್ತವಾದ ಒಂದು ರೂಪವುಳ್ಳವನಾಗಿ) ಸರ್ವವನ್ನೂ ವ್ಯಾಪಿಸಿರುವನು.

ಪ್ರಮೇಯ ವಿವರಣೆ: (೧) '*ಯತ್ರ ವಾಯೂದ ಪದ್ಮಾದಿ ರೂಪೇಣ ಪ್ರಕೃತಿಃ ಸ್ಥಿತಾ*'—(ಭಾಗ.ತಾ) ಎಂಬಲ್ಲಿ, ವಾಯು, ಉದಕ, ಪದ್ಮ ಮೊದಲಾದ ರೂಪ-ಗಳಿಂದ ಶ್ರೀಮಹಾಲಕ್ಷ್ಮೀದೇವಿಯೇ ಪ್ರಳಯಕಾಲ ಪೂರ್ಣವಾಗುವವರೆಗೂ ಇರುವ-ಳೆಂದು ಹೇಳಿದೆ. ಇದೇ ಪ್ರಮೇಯವು ಬ್ರಹ್ಮಕಾಂಡ ಪುರಾಣದಲ್ಲಿ '*ಲಕ್ಷ್ಮ್ಯೈವೋದಕ ರೂಪೇಣ ಶಯ್ಯಾರೂಪೇಣ ಚಾಂಡಜ। ಆಸೀದ್ಗರ್ಭೋದಕೇ ಚೇತ್ಥಂ ನಾನ್ಯ-ದಾಸೀತ್ಕಥಂಚನ॥*' ಎಂದರೆ, 'ಲಕ್ಷ್ಮೀದೇವಿಯೇ ಪ್ರಳಯೋದಕ ಮತ್ತು ಶಯ್ಯಾ-ರೂಪದಿಂದಿದ್ದಳು, ಹೇ ಗರುಡ! ಪ್ರಳಯೋದಕದಲ್ಲಿ ಮಲಗಿದ್ದ ಶ್ರೀಹರಿಯ ಉದರಾಂತರ್ಗತ ಜಲರೂಪಳೂ ಆಕೆಯೇ ಆಗಿದ್ದಳು—ಬೇರೇನೂ ಇರಲಿಲ್ಲ.' ಇದನ್ನೇ ಶ್ರೀಜಗನ್ನಾಥದಾಸರು, '**ಪ್ರಳಯಕಾಲದಿ ಪತಿಯು ಮಲಗಬೇಕೆನುತ ವಟ। ದೆಲೆಯಾಗಿ ಹರಿಯ ಒಲಿಸಿದಿ। ಒಲಿಸಿದಿ ಜಗದ ಮಂಗಳ ದೇವಿ ನಮಗೆ ದಯವಾಗೆ।**' ಎಂದು ತತ್ತ್ವಸುವ್ವಾಲಿಯಲ್ಲಿ ನಿರೂಪಿಸಿರುವರು.

(೨) ವಟಪತ್ರದಲ್ಲಿ ಮಲಗಿದ ನಾರಾಯಣನನ್ನು ವರ್ಣಿಸುತ್ತ, '*ಆಸೀದುದಾರ ಗುಣವಾರಿಧಿರಪ್ರಮೇಯೋ ನಾರಾಯಣಃ ಪರತಮಃ ಪರಮಾತ್ಮ ಏಕಃ। ಸಂಶಾಂತ ಸಂವಿದಖಿಲಂ ಜಠರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ॥*" (ಭಾ-ತಾ) 'ಸೃಷ್ಟಿ ಪೂರ್ವದಲ್ಲಿ (ಪ್ರಳಯಕಾಲದಲ್ಲಿ) ಉತ್ಕೃಷ್ಟ ಗುಣಸಮುದ್ರನೂ, ಅಪ್ರಮೇಯನೂ, ಸರ್ವೋತ್ತಮೋತ್ತಮನೂ (ಲಕ್ಷ್ಮೀದೇವಿಗಿಂತ ಅನಂತಮಡಿ ಉತ್ತಮನೂ) ಆದ ನಾರಾಯಣನೊಬ್ಬನೇ, ಎಲ್ಲ ಜಗತ್ತನ್ನು ಉದರದಲ್ಲಿ ಧರಿಸಿ, ವೇದಾದಿಜ್ಞಾನವನ್ನು ಹೃದಯದಲ್ಲಿಟ್ಟುಕೊಂಡು ಲಕ್ಷ್ಮೀದೇವಿಯಿಂದ ಆಲಿಂಗಿತನಾಗಿ,

ಪೂರ್ಣಾನಂದನಾದ ತಾನು, ಆಕೆಗೆ ಆನಂದಪ್ರದನಾಗಿ ಇರುತ್ತಿದ್ದನು' ಎಂಬುದಾಗಿ ಈ ಪ್ರಮೇಯದ ನಿರ್ಣಯವು ಉಕ್ತವಾಗಿದೆ. ಪೂರ್ಣಾನಂದಸ್ವರೂಪನಾದ ಶ್ರೀಹರಿಗೆ ಶ್ರೀಲಕ್ಷ್ಮೀದೇವಿಯು ರತಿಪಾತ್ರಳಲ್ಲದೇ ರತಿಪ್ರದಳಲ್ಲ. '*ಮಹಾಲಕ್ಷ್ಮೀಂ ರಮಯತೇ ಲೀಲಯಾ ಕೃಪಯಾ ಹರಿಃ। ರಮಯಾ ರಮಮಾಣೋಽಪಿ ತತ್ಸ್ಥೇನೈವ ಸ್ತ್ರಿಯಾತ್ಮನಾ॥*' (ಸ.ರ.ಮಾ.)—ಎಂದರೆ ರಮಾದೇವಿಯನ್ನು, ಆಕೆಯಲ್ಲಿ ನಿರತಿಶಯ ಕೃಪೆಯುಳ್ಳ ಶ್ರೀಹರಿಯು, ಆನಂದಗೊಳಿಸಿ ಆಕೆಯೊಂದಿಗೆ ಕ್ರೀಡಿಸುತ್ತಾನೆ; ಆಕೆಯೊಂದಿಗೆ ರಮಿಸುವುದೆಂದರೆ, ಆಕೆಯಲ್ಲಿರುವ ತನ್ನ ಸ್ತ್ರೀರೂಪದೊಂದಿಗೆ ರಮಿಸಿ, ಅಧಿಷ್ಠಾನಭೂತಳಾದ ಆಕೆಗೆ ಅಮಿತಾನಂದವನ್ನು ಕರುಣಿಸುತ್ತಾನೆಂದರ್ಥ. ವಟಪತ್ರಶಾಯಿಯಾದ ಶ್ರೀಹರಿಯು ತನ್ನಲ್ಲಿ, ಯಾವ ಭಾಗದಲ್ಲಿ ಯಾರನ್ನು ಧರಿಸಿರುವನೆಂಬ ರಹಸ್ಯಪ್ರಮೇಯವೂ ಪ್ರಸಕ್ತವಾಕ್ಯದಲ್ಲಿ ನಿರೂಪಿಸಲ್ಪಟ್ಟಿದೆ. '*ಧಾಮತ್ರಯಸ್ಥಿತಾ ಮುಕ್ತಾ ವಟಪತ್ರಸ್ಥ ಶೌರಿಣಃ। ಕುಕ್ಷಿಂ ಗತಾ ಧ್ಯಾನಯುತಾ ಯಾವತ್ಸೃಷ್ಟಿರ್ಭವೇತ್ಪುನಃ। ತಾವತ್ತಿಷ್ಠಂತಿ ಚಾನಂದಾಃ ಸೃಷ್ಟೌ ಯಾಂತಿ ಸ್ವಕಂ ಸ್ಥಲಂ। ತಮಃ ಪ್ರಾಪ್ತಾ ತಾಮಸಾಶ್ಚ ಸ್ವರೂಪೇಣ ವ್ಯವಸ್ಥಿತಾಃ। ಲಿಂಗಭಂಗಮನುಪ್ರಾಪ್ತಾಃ ಪೂರ್ಣದ್ವೇಷಾತ್ಮಕಾಃ ಸದಾ। ನಾಭೇರಧಶ್ಚ ತಿಷ್ಠಂತಿ ದುಃಖಮಾತ್ರ ಸ್ವರೂಪಿಣಃ। ನಾಭೇರುಪರಿಭಾಗೇತು ಸೃತಿಸ್ಥಾಃ ಸುಪ್ತಿಮಾಗತಾಃ। ತ್ರಿವರ್ಗಾ ಅಪಿ ತಿಷ್ಠಂತಿ ಯಾವತ್ಸರ್ಗಃ ಪುನರ್ಭವೇತ್॥*" (ಬ್ರಹ್ಮಾಂಡ ಪುರಾಣ) ಪುರಾಣವಾಕ್ಯಗಳ ಭಾವಾರ್ಥವೇನೆಂದರೆ: ವೈಕುಂಠ, ಶ್ವೇತದ್ವೀಪ, ಅನಂತಾಸನಗಳೆಂಬ ಮೂರು ಮುಕ್ತ-ಲೋಕಗಳಲ್ಲಿರುವ ಮುಕ್ತರು ವಟಪತ್ರಶಾಯಿ ಶ್ರೀಕೃಷ್ಣನ ಕುಕ್ಷಿದೇಶದಲ್ಲಿ, ಸೃಷ್ಟಿಕಾಲ ಬರುವವರೆಗೆ ಧ್ಯಾನದಲ್ಲಿದ್ದು ಆನಂದಿಸುತ್ತ, ಸೃಷ್ಟಿಯಾಗಲು (ವ್ಯಕ್ತಗೊಳಿಸಲ್ಪಡುವ ಆ ತ್ರಿಧಾಮಗಳಲ್ಲಿ) ತಮ್ಮ ಸ್ಥಾನಗಳನ್ನು ಹೊಂದುತ್ತಾರೆ; ತಮಸ್ಸನ್ನು ಹೊಂದಿದ ತಾಮಸಜೀವರು, ಲಿಂಗದೇಹವನ್ನು ತ್ಯಜಿಸಿ, ಪೂರ್ಣವಾದ ಹರಿದ್ವೇಷಸ್ವರೂಪ-ರಾಗಿ ನಾಭಿಯ ಕೆಳಭಾಗದಲ್ಲಿರುತ್ತಾರೆ—ಅವರು ದುಃಖಮಾತ್ರ ಸ್ವರೂಪರಾಗಿರು-ತ್ತಾರೆ; ನಾಭಿಯಲ್ಲಿ (ನಾಭಿಯ ಮೇಲೆ) ಸಂಸಾರಿಜೀವರು (ಅಂದರೆ ಮುಂದಿನ ಸೃಷ್ಟಿಯಲ್ಲಿ ಬರುವವರು) ನಿದ್ರಾವಸ್ಥೆಯಲ್ಲಿ ಪ್ರಳಯಕಾಲ ಮುಗಿಯುವವರೆಗೂ ಇರುತ್ತಾರೆ. '*ವೈಕುಂಠಃ ಕಲ್ಪಿತೋ ಯೇನ ಲೋಕೋ ಲೋಕನಮಸ್ಕೃತಃ*' (ಭಾಗವತ) ಎಂದು 'ಸರ್ವಲೋಕಗಳ ಪ್ರಜೆಗಳಿಂದ ನಮಸ್ಕೃತವಾದ ವೈಕುಂಠಲೋಕವು ಯಾರಿಂದ ಕಲ್ಪಿತವಾಯಿತೋ' ಇತ್ಯಾದಿಯಾಗಿ ಹೇಳುವ ವಾಕ್ಯಗಳ ತಾತ್ಪರ್ಯವು, ಉದರದಲ್ಲಿ ಅವ್ಯಕ್ತಸ್ಥಿತಿಯಲ್ಲಿದ್ದ ಮುಕ್ತಲೋಕಗಳು, ಬ್ರಹ್ಮಾಂಡ ಸೃಷ್ಟವಾದೊಡನೆ, ಬ್ರಹ್ಮಾಂಡದಲ್ಲಿ ವ್ಯಕ್ತಗೊಳಿಸಲ್ಪಡುತ್ತವೆಂದೇ ಆಗಿದೆ.

(೩) ಲಕ್ಷ್ಮೀಪತಿಯಾದ ನಾರಾಯಣನನ್ನು, ಕಾಲರೂಪನಾಗಿ ಕಾಲನಾಮಕನಾಗಿ ಕಾಲದಲ್ಲಿದ್ದು ಕಾಲನಿಯಾಮಕನೆಂದು ಜ್ಞಾನಿಗಳು ತಿಳಿಯುತ್ತಾರೆ. *'ಯೋಽಯಂ ಕಾಲಸ್ತಸ್ಯ ತೇಽವ್ಯಕ್ತಬಂಧೋ ಚೇಷ್ಟಾಮಾಹುಃ ಚೇಷ್ಟತೇ ಯೇನ ವಿಶ್ವಂ'*— (ಭಾಗವತ) 'ಜಗಚ್ಚೇಷ್ಟಕನಾದ ನೀನೇ ಕಾಲಚೇಷ್ಟಕನೂ ಆಗಿರುವೆ' ಎಂದು, ಆಗ-ತಾನೆ ಅವತರಿಸಿದ ಶ್ರೀಕೃಷ್ಣನನ್ನು ದೇವಕೀದೇವಿಯು ಸ್ತುತಿಸಿದ್ದಾಳೆ. ಅಖಂಡಕಾಲದ (ಮಹಾಕಾಲದ) ಅಂತರ್ಯಾಮಿಯೇ ಕಾಲಾಂಶಗಳ (ಕಾಲವಿಭಾಗಗಳ) ಸೃಷ್ಟಿ-ಕರ್ತನೂ, ಕಾಲಾವಯವಗಳ ಅಂತರ್ಯಾಮಿಯೂ ಆಗಿರುತ್ತಾನೆ— ಆತನೇ ಪರ-ಬ್ರಹ್ಮನು. *'ಈಶೋ ದೇಶಶ್ಚ ಕಾಲಶ್ಚ ಸ್ವಗತಾ ಏವ ಸರ್ವದಾ'*— ಈಶ, ದೇಶ, ಕಾಲಗಳು ಸ್ವಗತಗಳೆಂದು (ಆಶ್ರಯ ರ್ಗತಗಳೆಂದು) ಹೇಳಲ್ಪಡುತ್ತವೆ. ದೇಶಕಾಲ-ಗಳು ಸ್ವಗತವಾದರೂ ಸ್ವತಂತ್ರಗಳಲ್ಲ— ಈಶಾನ್ಯ ಆಶ್ರಯರ್ಗತಗಳು ಮಾತ್ರವೆಂದು, *'ಈಶಾಧೀನೌ ಚ ತೌ ನಿತ್ಯಂ ತದಾಧಾರೌ ಚ ತದ್ಗತೌ॥'* ಎಂಬುದಾಗಿ ದೇಶ ಕಾಲಗಳ ಸ್ವರೂಪ ವಿಮರ್ಶೆಯಲ್ಲಿ (ಸ.ರ.ಮಾ) ಹೇಳಲಾಗಿದೆ. ದೇಶಕಾಲಗಳು ಶ್ರೀಹರಿಯ ಅಧೀನಗಳೆಂಬ ಪ್ರಮೇಯವನ್ನು ದೃಷ್ಟಾಂತೀಕರಿಸುವ, ಶ್ರೀಹರಿಯ ನಾನಾ ಲೀಲೆಗಳನ್ನು ಭಾಗವತಾದಿ ಪುರಾಣಗಳಲ್ಲಿ ಕಾಣುತ್ತೇವೆ. ಉದಾ:- ಶ್ರೀಕೃಷ್ಣನು, ಕೈಲಾಸಕ್ಕೆ ಹೋಗಿ ಶಿವನನ್ನು ಕುರಿತು ತಪಸ್ಸು ಮಾಡಿ, ಪ್ರದ್ಯುಮ್ನನನ್ನು ಪುತ್ರನನ್ನಾಗಿ ಪಡೆದವನಂತೆ ಅಜ್ಞಾನಿಗಳ ಮೋಹನಾರ್ಥವಾಗಿ ವಿಡಂಬನೆ ಮಾಡುತ್ತ, ದೀರ್ಘಕಾಲಾವಧಿಯ ವ್ರತನಿಷ್ಠೆಯನ್ನು ದ್ವಾದಶ ರಾಶಿಗಳಲ್ಲಿ ಗ್ರಹಗಳನ್ನು ಗರ್‍ನೆ ಸುತ್ತಿಸಿ, ಅಲ್ಪಕಾಲದಲ್ಲಿ ಪೂರ್ಣಗೊಳಿಸಿದನು. ಒಂದು ದಿನದ ಅಶ್ವಮೇಧಯಾಗದಲ್ಲಿ ದೀಕ್ಷಿತನಾದ ಶ್ರೀಕೃಷ್ಣನು, ದ್ವಿಜಪುತ್ರನನ್ನು ರಕ್ಷಿಸಲಾಗದೆ ಅಗ್ನಿಪ್ರವೇಶಕ್ಕೆ ಸಿದ್ಧನಾದ ಅರ್ಜುನನನ್ನು ಕಂಡು, ಬಹುಕೋಟಿ ಯೋಜನ ದೂರದಲ್ಲಿರುವ ಅನಂತಾಸನಕ್ಕೆ ತನ್ನ ರಥದಲ್ಲಿ ಬ್ರಾಹ್ಮಣನನ್ನೂ ಅರ್ಜುನನನ್ನೂ ಕರೆದೊಯ್ದು ಅಪಹೃತನಾದ ದ್ವಿಜ-ಪುತ್ರನನ್ನು ತಂದುಕೊಟ್ಟನು. ಯಾಗಾಶ್ವವು ಲಕ್ಷಯೋಜನ ವಿಸ್ತಾರದ ಭೂಮಂಡಲ-ವನ್ನು ಸಾರ್ಧ ಮುಹೂರ್ತದಲ್ಲಿ ಸುತ್ತಿ ಬಂತು. ಅನೇಕ ಶತಯೋಜನ ವಿಸ್ತಾರವುಳ್ಳ ರತ್ನ ಪರ್ವತಾದಿ ಐಶ್ವರ್ಯರಾಶಿಯನ್ನು ಗರುಡನ ಮೇಲೆ ದ್ವಾರಕೆಗೆ ಕಳ್ಳುಸಿ, ಉಪವನಾದಿ ಅಲ್ಪದೇಶದಲ್ಲಿ ಸ್ಥಾಪಿಸಿದ್ದಾನೆ— ಇತ್ಯಾದಿ.

ಪಾರ್ಥಿವಾದಿ ದ್ರವ್ಯಗಳ ಅಂತಿಮ ವಿಶೇಷವು ಪರಮಾಣುವೆನಿಸಿದ್ದರೂ, ಅದು ನಿರಂಶವಲ್ಲ. ಆ ಪರಮಾಣು ಸಹ ಅನಂತಾಂಶಗಳುಳ್ಳದ್ದು— ಪರಮಾಣುವಿನಲ್ಲಿ ನಿರಂಶತ್ವಭ್ರಮ ಮಾತ್ರ. *'ಚರಮಸ್ತು ವಿಶೇಷಣಾಮನೇಕಾ ಸಂಯುತಃ ಸದಾ। ಪರಮಾಣುಃ ವಿಜ್ಞೇಯೋ ನೃಣಾಮೈಕ್ಯಭ್ರಮೋ ಯತಃ॥'* (ಭಾಗವತ)— ಎಂಬಲ್ಲಿ

ಈ ಪ್ರಮೇಯದ ನಿರೂಪಣೆಯಿದೆ. ದ್ರವ್ಯ ಪರಿಮಾಣವನ್ನು ದೃಷ್ಟಾಂತವಾಗಿಟ್ಟು-ಕೊಂಡು, ಕಾಲ ಪರಿಮಾಣವನ್ನು ನಿರೂಪಿಸಲಾಗುತ್ತದೆ. ಕಾಲಪರಮಾಣುವೂ ಅನಂತಾಂಶಗಳುಳ್ಳದ್ದು; ಎರಡು ಪರಮಾಣುಗಳು ಸೇರಿದರೆ ಒಂದು ದ್ವ್ಯಣುಕ; ೩ ದ್ವ್ಯಣುಕಗಳು ಕೂಡಿ ೧ ತ್ರ್ಯಣುಕ; ೩ ತ್ರ್ಯಣುಕಗಳು ೧ ತ್ರುಟಿ; ೩ ತ್ರುಟಿಗಳು ೧ ವೇಧ; ೩ ವೇಧಗಳು ೧ ಲವ; ೩ ಲವಗಳು ೧ ನಿಮೇಷ; ೩ ನಿಮೇಷಗಳು ೧ ಕ್ಷಣ; ೫ ಕ್ಷಣಗಳು ೧ ಕಾಷ್ಠ; ೧೫ ಕಾಷ್ಠಗಳು ೧ ಲಘು; ೧೫ ಲಘುಗಳು ೧ ನಾಡಿಕಾ (ಘಳಿಗೆ); ೨ ಘಳಿಗೆ ೧ ಮುಹೂರ್ತ; ೩ ಮುಹೂರ್ತಗಳು (೬ ಘಳಿಗೆಗಳು) ೧ ಪ್ರಹರ; ೭ ರಿಂದ ೮ ಘಳಿಗೆವರೆಗೆ ೧ ಯಾಮ (ಯಾಮದ ಅವಧಿಯು ಮಕರ ಸಂಕ್ರಮಣದಿಂದ ಮಿಥುನ ಸಂಕ್ರಮಣದವರೆಗೆ ೭ ರಿಂದ ೮ರವರೆಗೆ ಹೆಚ್ಚಾಗುತ್ತ ಹೋಗುತ್ತದೆ); ೮ ಯಾಮಗಳು ೧ ಅಹೋರಾತ್ರಿ (೧ ದಿನ); ೧೫ ದಿನಗಳು ೧ ಪಕ್ಷ; ೨ ಪಕ್ಷಗಳು (ಶುಕ್ಲ-ಕೃಷ್ಣ) ೧ ಮಾಸ; ೨ ಮಾಸಗಳು ೧ ಋತು. ೬ ಮಾಸಗಳಿಗೆ ೧ ಅಯನ (ಉತ್ತರಾಯಣ-ದಕ್ಷಿಣಾಯನಗಳೆಂದು ಅಯನ-ಗಳು ೨); ೧೨ ಮಾಸಗಳು ಅಥವಾ ೨ ಅಯನಗಳು ೧ ಸಂವತ್ಸರ (ವರ್ಷ); ಮನುಷ್ಯನ ಪೂರ್ಣಾಯುಷ್ಯ ೧೦೦ ವರ್ಷಗಳು. ಮನುಷ್ಯಮಾನದ ೧ ವರ್ಷಕ್ಕೆ ದೇವತೆಗಳ (ಸ್ವರ್ಗಲೋಕವಾಸಿಗಳ) ೧ ದಿನ. (ಉತ್ತರಾಯಣ-ದಕ್ಷಿಣಾಯನಗಳು ಕ್ರಮವಾಗಿ ದೇವತೆಗಳ ಹಗಲು ರಾತ್ರಿಗಳು); ಕೃತ, ತ್ರೇತ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳು ಕೂಡಿ ೧ ಚತುರ್ಯುಗವೆಂದು ಕರೆಯಲ್ಪಡುತ್ತದೆ. ೧೦೦೦ ಚತುರ್ಯುಗಗಳು ಬ್ರಹ್ಮದೇವನ (ಸತ್ಯಲೋಕದ) ೧ ಹಗಲು—ಅಷ್ಟೇ ಅವಧಿಯ ರಾತ್ರಿ ಕಾಲವು; ದೇವಮಾನದ ೧೨,೦೦೦ ವರ್ಷಗಳಿಗೆ ೧ ಚತುರ್ಯುಗ; ಬ್ರಹ್ಮನ ೩೬೦ ದಿನಗಳಿಗೆ (ಅಹೋರಾತ್ರಿಗಳಿಗೆ) ಬ್ರಹ್ಮನ ೧ ವರ್ಷ; ..ೀಗಿರುವ ೧೦೦ವರ್ಷಗಳು ಬ್ರಹ್ಮನ ಆಯುರ್ಮಾನವು; ಇದು 'ಪರ'ವೆಂದೂ ಕರೆಯಲಾಗುತ್ತದೆ.

(೪) ಬ್ರಹ್ಮನ ಪರನಾಮಕ ಆಯುಷ್ಯವು ಮುಗಿಯಿತೆಂದರೆ ಮಹಾಪ್ರಳಯಕಾಲ ಬರುತ್ತದೆ. ಆಗ ಸರ್ವಲೋಕಗಳೂ, ಸರ್ವಲೋಕ ಪ್ರಜೆಗಳೂ ನಾಶಹೊಂದುವರು. ಪಂಚಭೂತಗಳು ತಮ್ಮ ಉತ್ಪತ್ತಿಗೆ ಕಾರಣವಾದ ಅಹಂಕಾರ ತತ್ವದಲ್ಲಿಯೂ, ಅದು ಮಹತ್ತತ್ವದಲ್ಲಿಯೂ, ಅದು ಅವ್ಯಕ್ತದಲ್ಲಿಯೂ (ಮೂಲ ಪ್ರಕೃತಿಯಲ್ಲಿಯೂ), ಲಯ ಹೊಂದುತ್ತವೆ. ಕಾಲನಾಮಕ ಶ್ರೀಹರಿಯ ಅಚಿಂತ್ಯಶಕ್ತಿಯಿಂದ .ೀಗೆ ಸರ್ವವೂ ನಾಶ ಹೊಂದಿ (ನಿಷ್ಕ್ರಿಯ ಸ್ಥಿತಿಯನ್ನು ಹೊಂದಿ), ಶ್ರೀಹರಿಯೊಬ್ಬನೇ ಉಳಿಯುತ್ತಾನೆ —ಶಶ್ವದೇಕ ಪ್ರಕಾರನಾದ ಆತನಲ್ಲಿ ಯಾವ ವ್ಯತ್ಯಾಸವೂ ಇಲ್ಲದೇ ನಿತ್ಯ ಜಾಗ್ರತ-ನಾಗಿಯೇ ನಿಲ್ಲುತ್ತಾನೆ—ಕಾರಣದಿಂದ 'ಶೇಷ'ನೆಂದು ಕರೆಯಲ್ಪಡುತ್ತಾನೆ. ಆಗ

ಮುಖ್ಯವಾಗಿ ಸರ್ವಶಬ್ದ ವಾಚ್ಯನಾಗಿರುತ್ತಾನೆ. ಪ್ರಳಯಕಾಲದಲ್ಲಿ ಶಬ್ದಗಳಿಗೆ ಬೇರೆ ವೃತ್ತಿಗಳೇ ಇಲ್ಲದ ಪ್ರಯುಕ್ತ (ಅನ್ಯವಸ್ತು ವಾಚಕವಾಗುವ ಪ್ರಸಕ್ತಿಯೇ ಇಲ್ಲದ ಕಾರಣ) ವೇದಾದಿ ಸಕಲ ಶಬ್ದಗಳು ಕೇವಲ ಪರಮಾತ್ಮವಾಚಕವಾಗಿರುತ್ತವೆ. ಈ ಅರ್ಥ ವಿಶೇಷಗಳು, ಶ್ರೀಕೃಷ್ಣನು ಅವತರಿಸಿದೊಡನೆ ದಿವ್ಯ ದರ್ಶನವಿತ್ತ ದೇವಕೀದೇವಿಯ ಸ್ತೋತ್ರ ಭಾಗದಿಂದ ಸ್ಪಷ್ಟವಾಗುತ್ತದೆ. ದೇವಕೀದೇವಿಯು ಹೇಳುತ್ತಾಳೆ: '*ನಷ್ಟೇ ಲೋಕೇ ದ್ವಿಪರಾರ್ಧಾವಸಾನೇ ಮಹಾಭೂತೇಷ್ವಾದಿ ಭೂತಂ ಗತೇಷು। ವ್ಯಕ್ತೇಽ ವ್ಯಕ್ತಂ ಕಾಲವೇಗೇನ ಯಾತೇ ಭವಾನೇಕಃ ಶಿಷ್ಯತೇ ಶೇಷ ಸಂಜ್ಞಃ॥*' (ಭಾಗವತ)

೨೩. ಶೂನ್ಯಾಭಿದ, ಕಾಲಾಭಿದ, ಕೇವಲಾಭಿದ, ಬ್ರಹ್ಮಾಭಿದ, ಅನಂತಾಭಿದ-ರೂಪವಿಶೇಷಾತ್ಮಕ, ನಿರುಪರಿತಮೂಲರೂಪ, ನಿರುಪಚರಿತವ್ಯಾಪ್ತಾಪ್ರತಿಪಾದ್ಯ, ಅನಂತತೇಜಃಪುಂಜ, ತಾದೃಶರಮಾಯುಕ್ತರೂಪವಿಶೇಷಾತ್ಮಕ, ಗಾಯತ್ರೀ-ಭೂತ-ವಾಕ್-ಪೃಥಿವೀ-ಶರೀರ-ಹೃದಯಭೇದೇನ ಷಡ್ವಿಧಗಾಯತ್ರೀನಾಮಕ, ಲೋಕ-ವೇದ-ಸಮೀರ-ರಮಾಂತರ್ಗತಪ್ರಣವಾಖ್ಯ ತುರೀಯಪಾದೋಪೇತ ಗಾಯತ್ರೀ-ಪಾದಚತುಷ್ಟಯಪ್ರತಿಪಾದ್ಯ, ವೈಕುಂಠಸ್ಥಿತ-ಅನಂತಾಸನಸ್ಥಿತ-ಶ್ವೇತ-ದ್ವೀಪಸ್ಥಿತ ಸರ್ವಜೀವಸ್ಥಿತರೂಪಭೇದೇನ, ಚತೂರೂಪಾತ್ಮಕ, ದೇಹ-ವ್ಯಾಪ್ತ-ದೇಹಾಂತರ್ಯಾಮಿ-ಜೀವವ್ಯಾಪ್ತ-ಜೀವಾಂತರ್ಯಾಮಿರೂಪಭೇದೇನ ಚತೂರೂಪಾತ್ಮಕ.....

ಪ್ರತಿಪದಾರ್ಥ: ಶೂನ್ಯಾಭಿದ— ಶೂನ್ಯನಾಮಕನೂ, ಕಾಲಾಭಿದ— ಕಾಲನಾಮಕನೂ, ಕೇವಲಾಭಿದ— ಕೇವಲನಾಮಕನೂ, ಬ್ರಹ್ಮಾಭಿದ— ಬ್ರಹ್ಮನಾಮಕನೂ(ಆದ), ಅನಂತಾಭಿದ-ರೂಪ ವಿಶೇಷಾತ್ಮಕ— ಅನಂತನಾಮ ರೂಪ ವಿಶೇಷ ಸ್ವರೂಪನೂ, ನಿರುಪಚರಿತಮೂಲ-ರೂಪ— ಉಪಚಾರವಲ್ಲದ (ಅನ್ವರ್ಥಗಳೇ ಆದ— ಗೌಣವಲ್ಲದ) ಮೂಲರೂಪಗಳೇ ಆದ (ನಾರಾಯಣನಿಂದ ಅತ್ಯಂತ ಅಭಿನ್ನಗಳಾದ), ನಿರುಪಚರಿತವ್ಯಾಪ್ತ— ಮುಖ್ಯಾರ್ಥದಲ್ಲಿಯೇ ಸರ್ವತ್ರ ವ್ಯಾಪ್ತಗಳೂ, ಅಪ್ರತಿಬದ್ಧ ಅನಂತ ತೇಜಃಪುಂಜ— ಪ್ರತಿಬಂಧರಹಿತ ಅಪಾರ ತೇಜೋರಾಶಿಗಳೂ, ತಾದೃಶ ರಮಾಯುಕ್ತ— ಅವುಗಳಂತಿರುವ (ಶ್ರೀಹರಿಯ ರೂಪ-ಗಳಂತೆ ಅಪಾರ ತೇಜೋರಾಶಿಗಳಾದ) ರಮಾದೇವಿಯ ರೂಪಗಳಿಂದ ಕೂಡಿದವುಗಳೂ (ಆದ), ರೂಪವಿಶೇಷಾತ್ಮಕ— ರೂಪವಿಶೇಷಗಳುಳ್ಳವನೂ; ಗಾಯತ್ರೀಭೂತ ವಾಕ್ ಪೃಥಿವೀ ಶರೀರ ಹೃದಯ ಭೇದೇನ— ಗಾಯತ್ರೀ, ಭೂತ, ವಾಕ್, ಪೃಥಿವೀ, ಶರೀರ ಮತ್ತು ಹೃದಯದಲ್ಲಿರುವ ರೂಪವಿಶೇಷಗಳ ಭೇದದಿಂದ, ಷಡ್ವಿಧ ಗಾಯತ್ರೀ ನಾಮಕ— ಆರು ಪ್ರಕಾರದ (ಷಡ್ವಿಧ) ಗಾಯತ್ರೀ ನಾಮವುಳ್ಳವನೂ, ಲೋಕ, ವೇದ, ಸಮೀರ ರಮಾಂತರ್ಗತ— ಲೋಕಾಭಿಮಾನಿಗಳು, ವೇದಾಭಿಮಾನಿಗಳು ಹಾಗೂ ಮುಖ್ಯಪ್ರಾಣ ಮತ್ತು ಲಕ್ಷ್ಮೀ ಇವರುಗಳ ಅಂತರ್ಯಾಮಿಯೂ, ಪ್ರಣವಾಖ್ಯ ತುರೀಯ ಪಾದೋಪೇತ— 'ಓಂ' ಎಂಬ ನಾಲ್ಕನೇ ಪಾದದಿಂದ ಕೂಡಿದ, ಗಾಯತ್ರೀ ಪಾದಚತುಷ್ಟಯ ಪ್ರತಿಪಾದ್ಯ—

ಗಾಯತ್ರೀ ಮಂತ್ರದ ನಾಲ್ಕು ಪಾದಗಳಿಂದ ಪ್ರತಿಪಾದ್ಯನೂ, ವೈಕುಂಠಸ್ಥಿತ—ವೈಕುಂಠದಲ್ಲಿರುವ, ಅನಂತಾಸನಸ್ಥಿತ—ಅನಂತಾಸನದಲ್ಲಿರುವ, ಶ್ವೇತದ್ವೀಪಸ್ಥಿತ—ಶ್ವೇತದ್ವೀಪದಲ್ಲಿರುವ, ಸರ್ವಜೀವಸ್ಥಿತ—(ಮತ್ತು) ಸರ್ವಜೀವರಲ್ಲಿರುವುದೆಂಬ, ರೂಪಭೇದೇನ—ರೂಪ ವ್ಯತ್ಯಾಸದಿಂದ, ಚತೂರೂಪಾತ್ಮಕ—ನಾಲ್ಕು ರೂಪಗಳುಳ್ಳವನೂ, ದೇಹವ್ಯಾಪ್ತದೇಹಾಂತರ್ಯಾಮಿ—ಶರೀರದಲ್ಲಿ ವ್ಯಾಪ್ತನಾಗಿ, ನಿಯಾಮಕನಾಗಿ, ಜೀವವ್ಯಾಪ್ತ ಜೀವಾಂತರ್ಯಾಮಿ—ಜೀವರೊಳಗಿದ್ದು, ಜ್ಯೇಷ್ಠಪ್ರದನಾಗಿ, ರೂಪಭೇದೇನ ಚತೂರೂಪಾತ್ಮಕ—ನಾಲ್ಕು ಸ್ವರೂಪಗಳುಳ್ಳವನಾಗಿರುವ....

ತಾತ್ಪರ್ಯ: ಶ್ರೀಹರಿಯು 'ಶೂನ್ಯ' ನೆಂಬ ಹೆಸರುಳ್ಳವನು; ಕಾಲನಾಮಕನೂ ಆತನೇ; 'ಕೇವಲ' ಮತ್ತು 'ಬ್ರಹ್ಮ' ಶಬ್ದಗಳೂ ಆತನ ನಾಮಗಳೇ; ಆತನು ಅನಂತ ನಾಮಗಳಿಂದ ಹೇಳಲ್ಪಡುವ ಅನಂತ ರೂಪವಿಶೇಷಗಳುಳ್ಳವನು—ಆ ಎಲ್ಲ ರೂಪಗಳು ಪರಸ್ಪರ ಅತ್ಯಂತ ಅಭಿನ್ನವಾದವುಗಳು ಮತ್ತು ಮೂಲರೂಪನಾದ ನಾರಾಯಣನಿಂದ ಅತ್ಯಂತ ಅಭಿನ್ನಗಳೇ ಆಗಿವೆ. ಇಗೆಂಬುದು ಉಪಚಾರದ ನುಡಿಯಲ್ಲ; ಈ ಎಲ್ಲ ರೂಪಗಳೂ ಮುಖ್ಯಾರ್ಥದಲ್ಲಿಯೇ ಸರ್ವತ್ರ ವ್ಯಾಪ್ತಗಳು—ಒಂದೊಂದೂ ತೇಜೋರಾಶಿಗಳಂತಿವೆ. ಇವುಗಳ ತೇಜೋವ್ಯಾಪ್ತಿಗೆ ಯಾವ ಪ್ರತಿಬಂಧಕವೂ ಇಲ್ಲ. (ಯಾರೂ ಯಾವ ವಸ್ತುವೂ ಅಡ್ಡ ಬರಲಾರದು); ಇಗೆಯೇ ಸರ್ವತ್ರ ವ್ಯಾಪ್ತವೂ ತೇಜಃಪುಂಜಗಳಂತಿರುವುವೂ ಆದ ಲಕ್ಷ್ಮೀರೂಪಗಳಿಂದ ಪರಮಾತ್ಮನ ಈ ಎಲ್ಲ ರೂಪಗಳೂ ಕೂಡಿರುತ್ತವೆ. ಶ್ರೀಹರಿಯು ಷಡ್ವಿಧ ಗಾಯತ್ರೀ (ಗಾಯತ್ರೀ, ಭೂತ, ವಾಕ್, ಪೃಥಿವೀ, ಶರೀರ, ಹೃದಯಗಳೆಂಬ ಷಡ್ವಿಧ ಗಾಯತ್ರೀ) ಪ್ರತಿಪಾದ್ಯನೂ ಆಗಿದ್ದಾನೆ. ಲೋಕಾಭಿಮಾನಿಗಳು, ವೇದಾಭಿಮಾನಿಗಳು, ಮುಖ್ಯಪ್ರಾಣ ಮತ್ತು ಶ್ರೀದೇವಿ ಇವರೆಲ್ಲರ ಅಂತರ್ಯಾಮಿಯೂ ಈತನೇ; (ಸರ್ವನಿಯಾಮಕನೆಂದು ಹೇಳಲೇನಿದೆ?); ಓಂಕಾರ ಸ್ತತವಾದ ನಾಲ್ಕು ಪಾದ ಗಾಯತ್ರೀ ಮಂತ್ರ ಪ್ರತಿಪಾದ್ಯನೂ ಆಗಿರುವನು. ವೈಕುಂಠ, ಅನಂತಾಸನ, ಶ್ವೇತದ್ವೀಪಗಳೆಂಬ ನಿತ್ಯಗಳಾದ ಮುಕ್ತಲೋಕಗಳಲ್ಲಿರುವ ಮೂರು ರೂಪಗಳು (ವೈಕುಂಠ-ವಾಯುದೇವ-ನಾರಾಯಣ ನಾಮಕ ಮೂರು ರೂಪಗಳು) ಮತ್ತು ಸರ್ವಜೀವಸ್ಥಿತವಾದ (ಬಿಂಬ) ಪುರುಷನಾಮಕ ರೂಪ ಒಂದು (ಅನಂತ ಜೀವರಲ್ಲಿ ಅನಂತ ರೂಪಗಳಿಂದ ಬಿಂಬನಾಗಿದ್ದರೂ ಆ ಎಲ್ಲ ರೂಪಗಳಲ್ಲಿ ಅತ್ಯಂತ ಅಭೇದವಿದ್ದು, ಅವೆಲ್ಲವೂ 'ಪುರುಷ' ಎಂಬ ನಾಮದಿಂದ ಕರೆಯಲ್ಪಡುತ್ತವೆ.) ಇಗೆ ನಾಲ್ಕು ರೂಪಗಳಿಂದ ಸದಾ ವಿರಾಜಮಾನವಾಗಿರುತ್ತಾನೆ. ಸಕಲ ಚೇತನರೊಳಗಿದ್ದು ವ್ಯಾಪ್ತನಾಗಿ ಮತ್ತು ಶರೀರದಲ್ಲಿಯೂ ಅಂತರ್ಯಾಮಿ ವ್ಯಾಪ್ತನಾಗಿ—ಈ ವೈಲಕ್ಷಣ್ಯದಿಂದ ಕೂಡಿದ ನಾಲ್ಕು ರೂಪಗಳಿಂದ ವಿರಾಜಮಾನನಾಗಿದ್ದಾನೆ.

ಪ್ರಮೇಯ ವಿವರಣೆ: (೧) ವಿಷ್ಣುವನ್ನು ಬಿಟ್ಟು ಅನ್ಯತ್ರ ಮಾತ್ರ ಉಪ-ಯೋಗಿಸಲ್ಪಡುವ ಪ್ರಸಿದ್ಧಿಯುಳ್ಳ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿ, ಆ ಸಂಬಂಧವಾದ ನಿರ್ಣಯಗಳನ್ನು ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ೪ನೇ ಪಾದ-ದಲ್ಲಿ ಹೇಳಲಾಗಿದೆ. *'ಶಮೂನಂ ಕುರುತೇ ವಿಷ್ಣುರದೃಶ್ಯಃ ಸನ್ ಪರಃಸ್ವಯಂ। ತಸ್ಮಾಚ್ಛೂನ್ಯ ಇತಿ ಪ್ರೋಕ್ತಃ....'* ಎಂದರೆ, ಸುಖಪೂರ್ಣನಾದ ಶ್ರೀವಿಷ್ಣುವು, ಅವ್ಯಕ್ತನಾಗಿದ್ದುಕೊಂಡೇ, ಇತರ ಸರ್ವರ ಸುಖವನ್ನು ಅಲ್ಪವನ್ನಾಗಿಯೇ ಇಡುತ್ತಾ-ನಾದ್ದರಿಂದ (ಸುಖ ಸ್ವರೂಪರಾದ ಇತರ ರಮಾಬ್ರಹ್ಮಾದಿ ಸರ್ವರೂ, ಆನಂದ-ಪೂರ್ಣನಾದ ವಿಷ್ಣುವಿಗಿಂತ ಅತ್ಯಲ್ಪ ಸುಖವುಳ್ಳವರಾದ್ದರಿಂದ, ಸ್ವಭಾವ ರಕ್ಷಕನಾದ ವಿಷ್ಣುವು ಅವರ ಸುಖವನ್ನು ಅಲ್ಪವನ್ನಾಗಿಯೇ ಇಡುವುದರಿಂದ) 'ಶೂನ್ಯ'ವೆಂದು ಕರೆಯಲ್ಪಡುತ್ತಾನೆ. ..ೀಗೆ ಯೋಗವೃತ್ತಿಯಿಂದ ಸಹ ಶೂನ್ಯ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸಲಾಗಿದೆ. *'ಏಷ ಹ್ಯೇವ ಶೂನ್ಯಃ ಏಷ ಹ್ಯೇವ ತುಚ್ಛಃ ಏಷ ಹ್ಯೇವ ಅಚಿಂತ್ಯೋ ನಿರ್ಗುಣಶ್ಚ'* (ಮಹೋಪನಿಷತ್ತು) ಎಂಬಲ್ಲಿ ಶೂನ್ಯ ಶಬ್ದವು ವಿಷ್ಣುಪರ-ವಾಗಿ ಉಪಯೋಗಿಸಲ್ಪಟ್ಟಿದೆ.

(೨) ಶ್ರೀವಿಷ್ಣುವೇ ಕಾಲನಾಮಕನೆಂಬಲ್ಲಿ ವಾಕ್ಯ ೨೦, ಪ್ರ.ವಿ (೩) ನ್ನು ನೋಡ-ಬೇಕು. 'ಕೇವಲ' ಎಂಬುದೂ ಶ್ರೀಹರಿಯ ನಾಮವೇ. *'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ'* ಇತ್ಯಾದಿ ಶ್ರುತಿಗಳು ಜಡಾಮಿಶ್ರನೂ, ಸಚ್ಚಿದಾನಂದ ರೂಪನೂ ಆದ್ದ-ರಿಂದಲೇ ಕೇವಲನೆನಿಸುವನೆಂದು ಹೇಳುತ್ತವೆ. ಸ್ವತಂತ್ರನಾದ್ದರಿಂದಲೂ, ಅನ್ಯಸ್ವತಂತ್ರ ವಸ್ತುವೇ ಇಲ್ಲದಿರುವುದರಿಂದಲೂ, ಶ್ರೀಹರಿಯೇ 'ಕೇವಲ'ನು. ಭಾಗವತ ತಾತ್ಪರ್ಯ-ದಲ್ಲಿ, *'ಕೇವಲಂ ಸ್ವತಂತ್ರಂ'* ಎಂದು ಶ್ರೀಮದಾಚಾರ್ಯರು ವ್ಯಾಖ್ಯಾನ ಮಾಡಿ, ಅದನ್ನು *'ಏಕಲಂ ಕೇವಲಂ ಚೇತಿ ಸ್ವತಂತ್ರಮಭಿಧೀಯತೇ'* ಎಂಬ (ಪ್ರವೃತ್ತ) ವಾಕ್ಯದಿಂದ ಸಮರ್ಥಿಸಿರುವರು.

ಎಲ್ಲ ಭಗವಂತನ ರೂಪಗಳೂ ಅನಂತ ಗುಣಪೂರ್ಣಗಳೇ ಆದ್ದರಿಂದ ಅವೆಲ್ಲವೂ ಬ್ರಹ್ಮಶಬ್ದವಾಚ್ಯಗಳೇ.

(೩) ಛಾಂದೋಗ್ಯೋಪನಿಷತ್ತು ನಿರೂಪಿಸುವ ವಿವಿಧ ಭಗವದುಪಾಸನೆಗಳಲ್ಲಿ, ಗಾಯತ್ರೀಮಂತ್ರ ಪ್ರತಿಪಾದ್ಯನಾದ ಗಾಯತ್ರೀನಾಮಕ ಸ್ತ್ರೀರೂಪೀ ಶ್ರೀನಾರಾಯಣನು ಆರು ವಿಧವಾಗಿರುವನೆಂದು ಹೇಳಿ, ಆ ರೂಪಗಳುಳ್ಳ ಗಾಯತ್ರೀನಾಮಕ ಶ್ರೀಹರಿಯ ಉಪಾಸನೆಯನ್ನು ವಿವರಿಸಲಾಗಿದೆ. ಈ ಆರು ರೂಪಗಳನ್ನು ಸಂಗ್ರಹಿಸಿ, (ಛಾಂದೋಗ್ಯದ ೩ನೇ ಅಧ್ಯಾಯದ ೧೨ನೇ ಖಂಡದ ಭಾಷ್ಯಭಾಗದಲ್ಲಿ) ಶ್ರೀಮದಾಚಾರ್ಯರು ..ೀಗೆ ಹೇಳಿದ್ದಾರೆ:

*"ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ ಸ್ತ್ರೀರೂಪಃ ಸೂರ್ಯಸಪ್ರಭಃ। ದ್ವಿತೀಯಶ್ಚೈವ ಮತ್ಸ್ಯಾದಿರ್ಭೂತನಾಮಾऽವತಾರಗಃ॥ ತೃತೀಯೋವಾಚಿ ಸಂಸ್ಥಶ್ಚ ಸ್ತ್ರೀರೂಪೋ ಹಯಶೀರ್ಷಕಃ। ಚತುರ್ಥಃ ಪೃಥಿವೀ ಸಂಸ್ಥಃ ಸ್ತ್ರೀರೂಪಃ ಪೀತವರ್ಣಕಃ॥ ಜೀವಸ್ಯಾಂತರ್ಗತೋ ವ್ಯಾಪ್ಯಶರೀರಮಿತಿನಾಮಕಃ। ಪಂಚಮಸ್ತದ್ಧೃದಿಸ್ಥಶ್ಚ ಷಷ್ಠೋ ಹೃದಯನಾಮಕಃ॥ ಗಾಯತ್ರೀ ನಾಮಕೋ ವಿಷ್ಣುರೇವಂ ಷಡ್ವಿಧ ಉಚ್ಯತೇ।"*— ಈ ವಾಕ್ಯಗಳ ಭಾವಾರ್ಥ: (೧) ಗಾಯತ್ರೀಮಂತ್ರ ಪ್ರತಿಪಾದ್ಯ ವಿಷ್ಣುವು ಸ್ತ್ರೀರೂಪನು; ಸೂರ್ಯನಂತೆ ಪ್ರಕಾಶವುಳ್ಳವನು; (೨) ಮತ್ಸ್ಯ ಮೊದಲಾದ ಅವತಾರಗಳ ರೂಪಗಳಿಂದಿರುವವನು; 'ಭೂತ' ನಾಮಕ ಗಾಯತ್ರೀಪ್ರತಿಪಾದ್ಯನು; (ಭೂತ=ಪರಿಪೂರ್ಣ) (೩) ವಾಗಿಂದ್ರಿಯದಲ್ಲಿರುವ (ಮಾತನಾಡುವ ಶಕ್ತಿಯನ್ನು ಕೊಡುವುದರಿಂದ 'ವಾಕ್' ಎಂದು ಕರೆಸುವ) ವಾಕ್‌ನಾಮಕ ಸ್ತ್ರೀರೂಪೀ ಹಯಗ್ರೀವನು; (೪) ಪೃಥಿವಿಯಲ್ಲಿರುವ ಪೀತ (ಹಳದಿ) ವರ್ಣವುಳ್ಳ ಪೃಥಿವೀನಾಮಕ ರೂಪ; (೫) ಜೀವನದಲ್ಲಿರುವ ಜೀವಸ್ವರೂಪವನ್ನು ವ್ಯಾಪಿಸಿರುವ, ಶರೀರನಾಮಕರೂಪ; ಮತ್ತು (೬) ಜೀವನ ಹೃದಯದಲ್ಲಿರುವ ಹೃದಯನಾಮಕ ರೂಪ; ..ೀಗೆ ಗಾಯತ್ರೀ ನಾಮಕ ವಿಷ್ಣುವು, ಆರು ವಿಧನಾಗಿದ್ದಾನೆ. ಈ ರೂಪಗಳನ್ನು ಪ್ರತಿಪಾದಿಸುವ ಗಾಯತ್ರಿಯು ನಾಲ್ಕು ಪಾದಗಳುಳ್ಳದ್ದು. *'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾऽಭ್ಯನೂಕ್ತಃ'* (ಛಾಂದೋಗ್ಯ)— ಗಾಯತ್ರೀಮಂತ್ರವು ಸಾಮಾನ್ಯವಾಗಿ ಎರಡು ವಿಧವೆಂದು ಹೇಳಲಾಗಿದೆ. ಸಂಧ್ಯಾಕಾಲದಲ್ಲಿ ಜಪಿಸುವ ಗಾಯತ್ರೀಮಂತ್ರಕ್ಕೆ ಋಷಿಯು— ವಿಶ್ವಾಮಿತ್ರನು, ದೇವತಾ—ಸವಿತೃ; ಛಂದಸ್ಸು—ಗಾಯತ್ರೀ; ಅದು ವ್ಯಾಹೃತಿಸ್ಸತವಾದುದು. *'ಓಂ ಭೂರ್ಭುವಸ್ವಃ ಓಂ ತತ್ಸವಿತುರ್ವರೇಣ್ಯಂ। ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್।'* ಎಂದಿರುತ್ತದೆ. ಅಷ್ಟಮಹಾಮಂತ್ರಗಳಲ್ಲಿ ಒಂದಾಗಿ ಜಪಿಸಲ್ಪಡುವುದು ಇನ್ನೊಂದು. ಅದಕ್ಕೆ ಋಷಿಯು— ಪ್ರಜಾಪತಿ (ಬ್ರಹ್ಮ ); ದೇವತಾ—ಸವಿತೃ; ಛಂದಸ್ಸು—ಗಾಯತ್ರೀ; ಆದರೆ ಇದು ವ್ಯಾಹೃತಿರ್ರತವಾದುದು. *'ಓಂ। ಓಂತತ್ಸವಿತುರ್ವರೇಣ್ಯಂ। ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್।'* ಎಂದು, ಇದರ ರೂಪವು. ಇದರಲ್ಲಿ *'ಓಂತತ್ಸವಿತುರ್ವರೇಣ್ಯಂ'* ಇತ್ಯಾದಿ ಮೂರು ಪಾದಗಳು ಸಂಧ್ಯಾ ಗಾಯತ್ರೀ ಮಂತ್ರದ ಭಾಗವೇ—ಸವಿತೃನಾಮಕ ನಾರಾಯಣನನ್ನು ಪ್ರತಿಪಾದಿಸತಕ್ಕದ್ದು. 'ಓಂ' ಎಂಬುದು, ಅಕಾರಾದಿ ಎಂಟು ಅಕ್ಷರಗಳುಳ್ಳದ್ದಾಗಿ, ಅದೇ ಒಂದು ಪಾದವಾಗಿದೆ–..ೀಗೆ ಇದು ಪಾದಚತುಷ್ಟಯ ಗಾಯತ್ರೀ ಮಂತ್ರವೆನಿಸುತ್ತದೆ. *'ವಿಶ್ವಾಮಿತ್ರಸ್ತು ಸಂಧ್ಯಾರ್ಥೇ ತದನ್ಯತ್ರ ಪ್ರಜಾಪತಿಃ। ಮುನಿರ್ದೇವಸ್ತು ಸವಿತೃ ನಾಮಾ ಪ್ರಷ್ಟುತ್ತತೋ ಹರಿಃ॥'* (ತಂತ್ರಸಾರ) ಎಂಬಲ್ಲಿ ಉಕ್ತಪ್ರಮೇಯದ ವಿವರಣೆ ಇದೆ.

*'ತ್ರಿಭಿಃ ಸ್ವರೂಪ ಪಾದೈಶ್ಚ ಭಿನ್ನೇನೈಕೇನ ಚೈವ ಹಿ। ಗಾಯತ್ರೀನಾಮಕೋ ವಿಷ್ಣುಃ ಚತುಷ್ಪಾತ್ ಸಂಪ್ರಕೀರ್ತಿತಃ। ಭಿನ್ನಪಾದಾಃ ಸರ್ವಜೀವಾಸ್ತಸ್ಯ ಸಾದೃಶ್ಯಮಾತ್ರತಃ। ಸ್ವರೂಪಪಾದಾ ವಿಷ್ಣೋಸ್ತು ತ್ರಯೋ ಹಿ ದಿವಿ ಸಂಸ್ಥಿತಾಃ। ನಾರಾಯಣ ವಾಸುದೇವ ವೈಕುಂಠ ಇತಿ ತೇ ತ್ರಯಃ॥'* ಎಂದರೆ, ಶ್ರೀಹರಿಯ ಸ್ವರೂಪಾಂಶಗಳು ಮೂರು; ಭಿನ್ನಾಂಶವೆಂದು ಒಂದು (ಸಾಮೂಹ್ಯೈಕವಚನ); ಈಗೆ ಗಾಯತ್ರೀ ನಾಮಕ ವಿಷ್ಣುವಿನ ಅಂಶಗಳು ನಾಲ್ಕು ಎಂದು ಶ್ರುತಿಪ್ರಸಿದ್ಧವು. (ಅನಂತರೂಪಗಳುಳ್ಳ ಶ್ರೀಹರಿಯ ನಿತ್ಯ-ಪ್ರಕಟ ರೂಪಗಳಿವು). ನಾರಾಯಣ (ಶ್ವೇತದ್ವೀಪ), ವಾಸುದೇವ (ಅನಂತಾಸನ), ವೈಕುಂಠ (ವೈಕುಂಠ)ಗಳೆಂಬ ತ್ರಿಧಾಮಗಳಲ್ಲಿರುವ ೩ ರೂಪಗಳು ಸ್ವರೂಪಾಂಶಗಳು; ಭಿನ್ನಾಂಶರೆಂದು ಕರೆಯಲ್ಪಡುವ ಅಸಂಖ್ಯ ಜೀವಗತ ಅಂಶ ಒಂದು; ಈಗೆ ನಾಲ್ಕು ಅಂಶಗಳಿಂದ ನಿತ್ಯಪ್ರಕಟನಾದ್ದರಿಂದ, **ಗಾಯತ್ರೀನಾಮಕ ವಿಷ್ಣುವು ಚತುಷ್ಪಾತ್** ಎನಿಸಿಕೊಳ್ಳುತ್ತಾನೆ. ಸೂತ್ರಭಾಷ್ಯದಲ್ಲಿ ಶ್ರೀಹರಿಯು ಚತುಷ್ಪಾದನೆಂದು ಬೇರೆ ರೀತಿ-ಯಿಂದ ಸಹ ಪ್ರತಿಪಾದಿಸಲಾಗಿದೆ. ಸರ್ವತ್ರ (ಒಳಹೊರಗೆ) ವ್ಯಾಪ್ತನಾಗಿ 'ಬ್ರಹ್ಮ'-ನೆನಿಸಿದನು — ಜೀವದೇಹದ (ಸ್ಥೂಲದೇಹದ) ಹೃದಯದಲ್ಲಿದ್ದು 'ಆಕಾಶ'ನೆನಿಸಿದನು — ಜೀವಸ್ವರೂಪಾಂತರ್ಯಾಮಿಯಾಗಿ 'ಪುರುಷ'ನೆನಿಸುವನು — ಜೀವಸ್ವರೂಪದ ಹೃದಯಭಾಗದಲ್ಲಿದ್ದು 'ಅಂತಃಪುರುಷ'ನೆನಿಸುವನು. ಇತ್ಯಾದಿ ವಿವರ ವಿಶೇಷಗಳನ್ನು ಗುರುಮುಖೇನ ಉಪನಿಷದಾದಿ ಶಾಸ್ತ್ರಗಳನ್ನು ಓದಿ ತಿಳಿಯಬೇಕು. ಏವಂಚ ತ್ರಿಧಾಮಗಳಲ್ಲಿರುವ ಮೂರು ರೂಪಗಳು ಮತ್ತು ಸರ್ವಜೀವಾಂತಸ್ಥ ರೂಪವೂ ಪ್ರಳಯಕಾಲದಲ್ಲಿ ಸಹ ಮೂಲರೂಪದಲ್ಲಿ ಐಕ್ಯ ಹೊಂದುವುದಿಲ್ಲ. ಜೀವಾಂತಸ್ಥ ಪುರುಷನಾಮಕ ಶ್ರೀಹರಿಯ ರೂಪವು, ಒಂದಂಶದಿಂದ ಮೂಲರೂಪವನ್ನು ಸೇರುವುದೆಂದೂ, ಜೀವಸ್ವರೂಪರಕ್ಷಕವಾದ ಅಂಶವು ಜೀವನದಲ್ಲಿಯೇ ನಿಲ್ಲುವು-ದೆಂದೂ ಬ್ರಹ್ಮಕಾಂಡ ಪುರಾಣದಲ್ಲಿ ಹೇಳಿದೆ. *'ಏಕಾಂಶೇನ ತು ಬಿಂಬಾಸ್ತು ಏಕೀಭಾವಂ ವ್ರಜಂತಿ ತೇ। ಏಕಾಂಶೇನ ತು ಜೀವೇಷು ಸಂಸ್ಥಿತಾ ನಾತ್ರ ಸಂಶಯಃ॥'* (ಬ್ರಹ್ಮಕಾಂಡ). *'ತನ್ನಿಃಸೃತತ್ವಾದ್ವೇದಾನಾಂ ಗಾಯಕಸ್ತ್ರಾತಿ ಚಾಖಿಲಂ। ಅತೋ ಗಾಯತ್ರಿ ನಾಮಾಸೌ ವಾಸುದೇವಃ ಪರಃ ಪುಮಾನ್॥'* — ತನ್ನಿಂದಲೇ ಹೊರಡುವ (ಪ್ರಕಟಮಾಡಲ್ಪಡುವ) ವೇದಗಳನ್ನು ತಾನು ಗಾನಮಾಡುವುದರಿಂದಲೂ ಸರ್ವ-ರಕ್ಷಕನಾದ್ದರಿಂದಲೂ ವಾಸುದೇವನು ಗಾಯತ್ರೀನಾಮಕನು — ಆತನೇ ಪರಮ-ಪುರುಷನು — ಶ್ರೀಹರಿಯು. ಗಾಯತ್ರೀಮಂತ್ರೋಪಾಸನೆಯಲ್ಲಿ ಚತುರ್ಮುಖನೂ, ಬ್ರಹ್ಮಪದಕ್ಕೆ ಅರ್ಹರಾದ ಜೀವರೂ ಮಾತ್ರ ಅಧಿಕಾರಿಗಳು — ಆ ಉಪಾಸನೆಯ ಮುಖ್ಯಫಲವನ್ನು ಹೊಂದಲರ್ಹರು. *'ಸಾಕ್ಷಾದ್ಗಾಯತ್ರ್ಯುಪಾಸಾಯಾಂ ಯೋಗ್ಯ ಏಕಶ್ಚತುರ್ಮುಖಃ'* (ಛಾ-ಭಾಷ್ಯ) ಎಂಬಲ್ಲಿ ಈಗೆಂದು ಹೇಳಿದೆ.

(ಳ) ತ್ರಿಧಾಮಗಳ ವಿಷಯಕ್ಕೆ ವಾಕ್ಯ ೨೦, ಪ್ರ.ವಿ. (೧) ನ್ನು ಓದಿಕೊಂಡು ಈ ಮುಂದಿನ ಭಾಗವನ್ನು ನೋಡಬೇಕು. ಶ್ರೀಭಾಗದ ವೈಕುಂಠಾದಿ ಮುಕ್ತಲೋಕಗಳು ಶುದ್ಧಸತ್ವಾತ್ಮಕವೆಂದು, *'ಶ್ರೀಭಾಗಃ ಶುದ್ಧಸತ್ವಾತ್ಮಾ ಮುಕ್ತೈರೇವ ನಿಷೇವಿತಃ।'* ಇತ್ಯಾದಿ ವಿಷ್ಣುರಹಸ್ಯದಲ್ಲಿ ಹೇಳಿದೆ. ಈ ಮುಕ್ತಲೋಕಗಳಲ್ಲಿ ಸರ್ವದಾ ಸರ್ವಮುಕ್ತರಿಗೆ, ಶ್ರೀಹರಿಯು ಪ್ರತ್ಯಕ್ಷನಾಗಿ ದರ್ಶನವಿತ್ತು ಆನಂದಗೊಳಿಸುತ್ತಾನೆ. ಈ ಮೂರೂ ಮುಕ್ತಲೋಕಗಳು, ಪ್ರಳಯಕಾಲದಲ್ಲಿ ಶ್ರೀಹರಿಯ ಉದರದಲ್ಲಿದ್ದು, ಸೃಷ್ಟಿಕಾಲ ಬಂದಾಗ, ತಂತಮ್ಮ ಸ್ಥಳಗಳಲ್ಲಿ ವ್ಯಕ್ತಗೊಳಿಸಲ್ಪಡುತ್ತವೆ. ಶ್ರೀಹರಿಸಂಕಲ್ಪದಂತೆ ನಡೆಯುವ ಇದು, ಶ್ರೀಹರಿಯ ಅದ್ಭುತಲೀಲೆಯು. ಜಂಬೂ ಪ್ಲಕ್ಷಾದಿ ಸಪ್ತದ್ವೀಪ-ಗಳನ್ನು ಸುತ್ತಿರುವ ಲವಣಾದಿ ಸಪ್ತಸಮುದ್ರಗಳ ಪೈಕಿ ಕ್ಷೀರಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವಿದೆ. ಸಪ್ತದ್ವೀಪಗಳು ದಾಟಿದ ಮೇಲೆ, ಮುಂದೆ ವಜ್ರಭೂಮಿ, ಲೋಕಾಲೋಕ ಪರ್ವತಗಳೂ, ನಂತರ ತಮಸ್ಸೂ, ಅದರ ದ್ವಿಗುಣ ಘನೋದಕವೂ ಇವೆ. ಅದರ ಆಚೆ, ಬ್ರಹ್ಮಾಂಡ ಖರ್ಪರದವರೆಗೆ ಅನಂತಾಸನವಿದೆ. ಮೇಲಿನ ಲೋಕಗಳಲ್ಲಿ ಎಲ್ಲಕ್ಕೂ ಮೇಲಿರುವ ಸತ್ಯಲೋಕದ ಮೇಲೆ ಬ್ರಹ್ಮಾಂಡ ಕಟಾಹ ಪರ್ಯಂತ ವೈಕುಂಠಲೋಕವಿದೆ. ಶ್ವೇತದ್ವೀಪಕ್ಕೆ ನಾರಾಯಣಪುರವೆಂಬ ನಾಮವೂ ಇದೆ. ಇವು ಮೂರೂ 'ತ್ರಿಧಾಮ'ಗಳೆಂದು ವೇದಾದಿಗಳಲ್ಲಿ ಪ್ರಸಿದ್ಧವಾಗಿವೆ.

ಸರ್ವಜೀವಾಂತಸ್ಥ ಭಗವಂತನು ಪುರುಷನಾಮಕನೆಂದು *'ವೀರ್ಯಾಣಿ ತಸ್ಯಾಖಿಲದೇಹಭಾಜಾಮಂತರ್ಬಹಿಃ ಪೂರುಷಕಾಲರೂಪೈಃ।'* (ಭಾಗವತ)— ಎಂಬ ಮುಂತಾದ ವಾಕ್ಯಗಳು ಹೇಳುತ್ತವೆ. ಜೀವಾಂತರ್ಯಾಮಿ ಪುರುಷನಾಮಕ ಪರಮಾತ್ಮನು ಸರ್ವರಿಗೂ ಅವರವರ ಗತಿದಾಯಕನು— ಆತನೇ ಸರ್ವರ ಬಿಂಬನು. ಕಾಲರೂಪದಿಂದ ಹೊರಗಿದ್ದು ಮೃತ್ಯುಪ್ರದನೂ ಆತನೇ. ..ಗೆ ನಿತ್ಯ ಪ್ರಕಟಗಳಾ-ಗಿದ್ದು, ಪ್ರಳಯಕಾಲದಲ್ಲಿ ಸಹ ಮೂಲರೂಪದಲ್ಲಿ ಐಕ್ಯಹೊಂದದ ಈ ನಾಲ್ಕು ರೂಪಗಳು (ವೈಕುಂಠ, ನಾರಾಯಣ, ವಾಸುದೇವ ಮತ್ತು ಪುರುಷ) ಸರ್ವಶಬ್ದ-ವಾಚ್ಯಗಳು.

**೨೪. ನಿರುಪಚರಿತ ಸರ್ವವಾಗರ್ಥ ಪ್ರತಿಪಾದಕ, ಶ್ರೀದೇವ್ಯಾದಿ ರಮಾ-ರೂಪಾಷ್ಟಕಾಭಿಮನ್ಯಮಾನ, ಚಕ್ರಶಂಖವರಾಭಯಯುಕ್ತ ಹಸ್ತಚತುಷ್ಟಯೋಪೇತ, ಪ್ರದೀಪವರ್ಣ, ಸರ್ವಾಭರಣಭೂಷಿತ.....**

**ಪ್ರತಿಪದಾರ್ಥ:** ನಿರುಪಚರಿತ— ಪರಮ ಮುಖ್ಯ ವೃತ್ತಿಯಿಂದ (ಮುಖ್ಯಾರ್ಥದಲ್ಲಿ), ಸರ್ವವಾಗರ್ಥಪ್ರತಿಪಾದಕ— ಸಕಲ ಶಬ್ದಾರ್ಥಗಳನ್ನು ಪ್ರತಿಪಾದಿಸುವ, ಶ್ರೀದೇವ್ಯಾದಿ— ಶ್ರೀದೇವಿಯೇ ಮೊದಲಾದ, ರಮಾರೂಪಾಷ್ಟಕ— ಲಕ್ಷ್ಮೀದೇವಿಯ ಎಂಟು ರೂಪಗಳಿಂದ,

ಅಭಿಮನ್ಯಮಾನ— ಅಭಿಮನ್ಯಮಾನಗಳಾದ (ಎಂಟು ರೂಪಗಳೇ ಅಭಿಮಾನಿಗಳಾಗಿವುಳ್ಳ), ಚಕ್ರಶಂಖ— ಚಕ್ರಶಂಖಗಳುಳ್ಳ, ವರಾಭಯಯುಕ್ತ— ವರ ಮತ್ತು ಅಭಯಗಳಿಂದ ಸ್ತತ-ವಾದ, ಹಸ್ತಚತುಷ್ಟಯೋಪೇತ— ನಾಲ್ಕು ಭುಜಗಳುಳ್ಳ, ಪ್ರದೀಪವರ್ಣ— ಪ್ರದೀಪದಂತೆ ವರ್ಣವುಳ್ಳ (ಸೂರ್ಯನಂತೆ ಪ್ರಕಾಶಿಸುವ), ಸರ್ವಾಭರಣಭೂಷಿತ— ಸಕಲಾಭರಣ-ಗಳಿಂದ ಅಲಂಕೃತವಾದ....

ತಾತ್ಪರ್ಯ: ಸರ್ವ ವಾಗಿಂದ್ರಿಯದಲ್ಲಿ 'ವಾಕ್' ನಾಮಕಳಾಗಿ ವಾಸಿಸುವ ಶ್ರೀದೇವಿಯು, ಪರಮ ಮುಖ್ಯವೃತ್ತಿಯಿಂದ ಸರ್ವದಾ ಸಮಸ್ತ ವಾಗ್ವ್ಯವಹಾರ-ದಿಂದ, ಶ್ರೀಹರಿಯನ್ನೇ ಪ್ರತಿಪಾದಿಸುತ್ತಾಳೆ. ಪ್ರಣವದ ಅಕಾರಾದಿ ಎಂಟು ವರ್ಣ-ಗಳಿಂದ ಪ್ರತಿಪಾದ್ಯಗಳಾದ ವಿಶ್ವಾದಿ ಎಂಟು ಭಗವದ್ರೂಪಗಳೊಂದಿಗೆ ಶ್ರೀದೇವಿಯು ತನ್ನ ವಿವಿಧ ಎಂಟು ರೂಪಗಳಿಂದ ಕೂಡಿ ಶೋಭಿಸುತ್ತಾಳೆ. ಈ ಎಂಟು ಭಗವದ್ರೂಪಗಳು, ಚಕ್ರ-ಶಂಖ-ವರ-ಅಭಯಗಳುಳ್ಳ (ವರಪ್ರದ-ಅಭಯಪ್ರದ-ಗಳೆಂಬ) ನಾಲ್ಕು ಹಸ್ತಗಳುಳ್ಳವೂ, ದಿವ್ಯ ಪ್ರಕಾಶವುಳ್ಳ ಕಿರೀಟ ಕುಂಡಲಾದಿ ಸಮಸ್ತ ಆಭರಣಗಳಿಂದ ಭೂಷಿತವಾದವುಗಳೂ ಆಗಿವೆ; ಈಗೆ ಪ್ರಣವೋಪಾಸಕರು ಚಿಂತಿಸುತ್ತಾರೆ. ಪ್ರಣವದ ವ್ಯಾಖ್ಯಾನವೇ ಸಕಲ ಶಬ್ದರಾಶಿಗಳು— ಎಲ್ಲ ಶಬ್ದಗಳೂ ಮುಖ್ಯಾರ್ಥದಲ್ಲಿ ಶ್ರೀಹರಿಯನ್ನೇ ಹೇಳುತ್ತವೆ.

ಪ್ರಮೇಯ ವಿವರಣೆ: (೧) ಶ್ರೀದೇವಿಯೇ ಮುಖ್ಯವಾಗಿ ಸರ್ವವಾಗರ್ಥ ಪ್ರತಿ-ಪಾದಕಳು. ಸಕಲ ವೇದಾಭಿಮಾನಿಯೂ ಸರ್ವರ ವಾಗಭಿಮಾನಿಯೂ ಆದ ಲಕ್ಷ್ಮೀ ದೇವಿಯು ಸರ್ವಶಬ್ದಾರ್ಥ ಪ್ರತಿಪಾದಕಳು; ಎಂದರೆ, ಸಕಲ ಧ್ವನ್ಯಾತ್ಮಕ ವರ್ಣಾತ್ಮಕ ಶಬ್ದಗಳಿಂದ ಪರಮಾತ್ಮನ ಗುಣಗಳನ್ನು (ಮಹಿಮೆಗಳನ್ನು) ನಿತ್ಯ ಹೊಗಳುವಳು ಆಕೆಯೇ. "*'ಅ' ಕಾರಃ ಸರ್ವವಾಗಾತ್ಮಾ*" ಎಂದು (ಐತರೇಯ) ಹೇಳಿದಂತೆ ಅಕಾರ-ದಿಂದ ಓಂಕಾರವೂ ಓಂಕಾರದಿಂದ ಸಕಲ ಶಬ್ದಗಳೂ ಪ್ರವೃತ್ತವಾಗುತ್ತವೆ; ಎಂದರೆ ಅಕಾರದ ವ್ಯಾಖ್ಯಾನವೆ. ಓಂಕಾರವು— ಓಂಕಾರದ ವ್ಯಾಖ್ಯಾನವೇ ನಾರಾಯಣಾದಿ ಶಬ್ದಗಳು— ಗಾಯತ್ರ್ಯಾದಿ ಮಂತ್ರಸಮೂಹಗಳು. ಸರ್ವಶಬ್ದಾರ್ಥಗಳನ್ನು ತಿಳಿದು ನಿತ್ಯವೂ ಸರ್ವರ ವಾಗಿಂದ್ರಿಯದಲ್ಲಿ ನಿಯಾಮಕಗಳಾಗಿದ್ದು ಶ್ರೀಹರಿಯನ್ನು ಸ್ತುತಿಸು-ವವಳು ಶ್ರೀಲಕ್ಷ್ಮೀದೇವಿಯು. ಇಲ್ಲಿ— ವಾಕ್ಯ ೧ರ ಪ್ರ.ವಿ.ಗಳನ್ನು ನೋಡಬೇಕು.

(೨) ಕಿರೀಟ ಕವಚಾದಿ ಆಭರಣಗಳಿಂದ ಅಲಂಕೃತವಾದ ಮತ್ತು ಚಕ್ರ, ಶಂಖ, ವರ, ಅಭಯಗಳೆಂಬ ನಾಲ್ಕು ಭುಜಗಳುಳ್ಳ, ಓಂಕಾರ ಪ್ರತಿಪಾದ್ಯ ವಿಶ್ವಾದಿ ಭಗವಂತನ ಅಷ್ಟಮೂರ್ತಿಗಳು [ವಾಕ್ಯ ೧, ಪ್ರ.ವಿ. (೫)ನ್ನು ನೋಡಿರಿ], ಅಷ್ಟ (ಎಂಟು) ರಮಾ ರೂಪಗಳಿಂದ ಯುಕ್ತವಾಗಿವೆ. *'ಮೂರ್ತಯೋಽಷ್ಟಾವಪಿ-*

*ಧ್ಯೇಯಾಶ್ಚಕ್ರಶಂಖವರಾಭಯೈಃ। ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣ ಭೂಷಿತಾಃ॥'* ಎಂದು ತಂತ್ರಸಾರದಲ್ಲಿ ಹೇಳಿರುವ ಪ್ರಮೇಯವೇ ಇಲ್ಲಿ ಸಂಗ್ರಸಲಾಗಿರುತ್ತದೆ. ..ೀಗೆಂಬುದು, ಪ್ರಸಕ್ತ 'ವಾಕ್ಯದಲ್ಲಿ ಪ್ರಯೋಗಿಸಿರುವ ಸಮಾನ ಶಬ್ದಗಳಿಂದ ಸಹ ಸ್ಪಷ್ಟವಿದೆ. ಕೇಶವಾದಿ ಭಗವಂತನ ೨೪ ರೂಪಗಳು ಶಂಖ, ಚಕ್ರ, ಗದಾ, ಪದ್ಮಗಳನ್ನೊಳಗೊಂಡಿವೆ. ಬೇರೆ ಕೆಲವು ರೂಪಗಳು ಚಕ್ರ-ಶಂಖಗಳೊಡನೆ ಧನುರ್ಬಾಣಗಳನ್ನೂ, ಇನ್ನೂ ಕೆಲವು ಚಕ್ರ-ಶಂಖಗಳೊಡನೆ ಖಡ್ಗ-ಚರ್ಮ(ಗುರಾಣಿ)-ಗಳನ್ನು ಧರಿಸಿರುತ್ತವೆ. ಕೆಲವು ರೂಪಗಳಿಗೆ ಬಲಗೈಯಲ್ಲಿ ಚಕ್ರವಿದ್ದರೆ ಮತ್ತೆ ಕೆಲವಕ್ಕೆ ಶಂಖವಿರುತ್ತದೆ—ಎಡಗೈಯಲ್ಲಿ ಚಕ್ರವಿರುತ್ತದೆ. ಏವಂಚ ಎಲ್ಲವೂ ಚತುರ್ಭುಜ-ಗಳುಳ್ಳವೇ. ಕೆಲವು ರೂಪಗಳ ಮೇಲಿನ ಎರಡು ಕೈಗಳಲ್ಲಿ ಚಕ್ರಶಂಖಗಳಿದ್ದರೆ, ಇನ್ನು ಕೆಲವಕ್ಕೆ ಕೆಳಗಿನ ಎರಡು ಕೈಗಳಲ್ಲಿರುತ್ತವೆ. ಅಜಾದಿ ೫೦ (ವರ್ಣಪ್ರತಿಪಾದ್ಯ) ರೂಪಗಳಲ್ಲಿಯೂ..ೀಗೆಯೇ ಚತುರ್ಭುಜಗತ ಆಯುಧಾದಿಗಳಲ್ಲಿ ವ್ಯತ್ಯಾಸವಿರುತ್ತದೆ. ಈ ವಿವರಗಳನ್ನು ತಂತ್ರಸಾರದ ಆಳವಾದ ಅಭ್ಯಾಸದಿಂದ ತಿಳಿಯಬಹುದು.

ಶ್ರೀಹರಿಯ ರೂಪಗಳು ಧರಿಸಿರುವ ಶಂಖ-ಚಕ್ರಾದಿಗಳು ಭಗವಂತನ ಸ್ವರೂಪಾತ್ಮಕವೇ ಆಗಿವೆ. ಸ್ವಸ್ವರೂಪದಿಂದ ಭಿನ್ನವಾದ ಶಂಖಚಕ್ರಾದಿಗಳನ್ನೂ ಶ್ರೀಹರಿಯು ಧರಿಸಿರುವುದುಂಟು. ಅಸ್ವರೂಪಗಳಾದ ಚಕ್ರಾದಿಗಳು ಕೆಲವು ಲಕ್ಷ್ಮೀಸ್ವರೂಪಗಳಾಗಿದ್ದು ಮತ್ತೆ ಕೆಲವು ಲಕ್ಷ್ಮೀದೇವಿಯಿಂದ ಅಭಿಮನ್ಯಗಳಾದ ಪ್ರಾಕೃತಗಳೂ ಆಗಿರುತ್ತವೆ. *'ಕಿರೀಟಾದ್ಯಾ ಅಪಿ ಹರೇಃ ದ್ವಿಧಾ ಸಂತಿ ನ ಸಂಶಯಃ। ಸ್ವರೂಪಾ ಹ್ಯಸ್ವರೂಪಾಶ್ಚ ಹ್ಯಸ್ವರೂಪಾ ನಿದರ್ಶನೇ। ಗೃಹೀತಾ ಇತಿ ವಿಜ್ಞೇಯಾ...* (ಬ್ರಹ್ಮಕಾಂಡ) ಇತ್ಯಾದಿ ವಾಕ್ಯಗಳು ಈ ಪ್ರಮೇಯವನ್ನು ವಿಸ್ತರಿಸುತ್ತವೆ. *'ಭೂಮಿರಾಪೋಽನಲೋ-ವಾಯುಃ ಖಂಮನೋ ಬುದ್ಧಿರೇವಚ। ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ॥'* ಎಂಬ (ಗೀತಾ) ವಾಕ್ಯದಲ್ಲಿ ಹೇಳಿದಂತೆ, ಸಕಲ ಪ್ರಾಕೃತ ವಸ್ತು-ನಿರ್ಮಾಣಕ್ಕೆ ಮೂಲಭೂತವಾದ ಪ್ರಾಕೃತ ತತ್ವಗಳು ಎಂಟು ವಿಧವಾಗಿವೆ. ಈ ಪೃಥಿವ್ಯಾದಿ ಎಂಟೂ ತತ್ವಗಳ ಮುಖ್ಯಾಭಿಮಾನಿಯು ಪ್ರಕೃತಿನಾಮಕ ಲಕ್ಷ್ಮೀ-ದೇವಿಯೇ ಆಗಿದ್ದಾಳೆ—ಎಂಟು ರೂಪಗಳಿಂದ ಪ್ರತಿ ಪ್ರಾಕೃತ ವಸ್ತುನಿಯಾಮಕ-ಳಾಗಿರುವಳು. ಜಗತ್ತಿಗೆ ದೃಶ್ಯಮಾನಗಳಾದ ಶಂಖಚಕ್ರಾದಿಗಳು, ಆಭರಣ, ಆಯು-ಧಾದಿಗಳು ಸಾಮಾನ್ಯವಾಗಿ ಪ್ರಾಕೃತಗಳಾಗಿದ್ದು, ಅನಿರುದ್ಧ, ಕಾಮಾದಿ ಅಭಿಮಾನಿ ದೇವತೆಗಳುಳ್ಳವೂ ಆಗಿರುತ್ತವೆ..ೀಗೆ ಲಕ್ಷ್ಮ್ಯಾತ್ಮಕವೂ, ಲಕ್ಷ್ಮಿಯಿಂದ ಅಭಿಮಾನ್ಯ-ಮಾನಗಳೂ ಆದ ಚಕ್ರ-ಶಂಖಗಳನ್ನು ಧರಿಸಿದ ಎರಡು ಹಸ್ತಗಳು ಮತ್ತು ವರದ, ಅಭಯಪ್ರದಗಳೆಂಬ ಸೂರ್ಯನಂತೆ ಪ್ರಕಾಶಮಾನಗಳಾದ, ಕಿರೀಟ, ಕುಂಡಲ,

ಅಂಗದ, ಕಂಕಣ, ಕಾಂಚಿ ಮೊದಲಾದ ಆಭರಣಗಳಿಂದ ಭೂಷಿತಗಳಾದ ಪ್ರಣವ-ಪ್ರತಿಪಾದ್ಯ ವಿಶ್ವಾದಿ ಅಷ್ಟರೂಪಗಳುಳ್ಳವನೆಂದು ಧ್ಯಾನದಲ್ಲಿ ಚಿಂತಿಸಬೇಕು. ..ೀಗೆ ಧ್ಯಾನಿಸುವುದರೊಂದಿಗೆ, ವೇದಾದಿ ಸಕಲ ಶಬ್ದಾಭಿಮಾನಿಯೂ, ಬ್ರಹ್ಮಾದಿ ಸರ್ವರ ವಾಗಿಂದ್ರಿಯದಲ್ಲಿ ವಾಕ್‌ನಾಮಕಳಾಗಿ ನಿಯಾಮಕಳಾಗಿಯೂ, ಇರುವ ಶ್ರೀ-ದೇವಿಯು ಸರ್ವಶಬ್ದಾರ್ಥ ಪ್ರತಿಪಾದಕಳಾಗಿ ಪ್ರಣವಪ್ರತಿಪಾದ್ಯ ವಿಶ್ವಾದಿ ಎಂಟು ಭಗವದ್ರೂಪಗಳೊಂದಿಗೆ, ತನ್ನ ಅಪಾರ ಪ್ರೇಮದಿಂದ, ಶ್ರೀಹರಿಯು ತನ್ನವನೇ ಎಂಬ ವಿಶೇಷಾಭಿಮಾನಯುಕ್ತಳಾಗಿ, ಕೂಡಿಕೊಂಡಿರುತ್ತಾಳೆಂದು ತಿಳಿಯುವುದರ ಔಚಿತ್ಯವನ್ನೂ ಗಮನಿಸಬಹುದು.

೨೫) ವಿಶ್ವಾದಿಭಗವದ್ರೂಪಾಷ್ಟಕಪ್ರತಿಪಾದಕ-ಅಕಾರಾದ್ಯಷ್ಟಾಕ್ಷರಾತ್ಮಕ ಶ್ರೀ-ಮತ್ಪ್ರಣವಾದ್ಯಷ್ಟ ಮಹಾಮಂತ್ರ ಪ್ರತಿಪಾದ್ಯ ಅಷ್ಟರೂಪಾತ್ಮಕ, ಮಂತ್ರಾಧ್ಯಾಯೋಕ್ತ ಭೂವರಾಹಾದ್ಯಶೇಷ, ವೈಷ್ಣವಮಂತ್ರಪ್ರತಿಪಾದ್ಯ, ಭೂವರಾಹಾದ್ಯಶೇಷ ರೂಪ ವಿಶೇಷಾತ್ಮಕ ರಮಾದಿಮಂತ್ರ ಪ್ರತಿಪಾದ್ಯ, ರಮಾದಿನಿಷ್ಠ ರಮಾದಿನಾಮಕ-ರೂಪವಿಶೇಷಾತ್ಮಕ ಶ್ರೀಲಕ್ಷ್ಮೀನೃಸಿಂಹಾತ್ಮಕ ಪರಮದಯಾಲೋ, ಕ್ಷಮಾಸಮುದ್ರ, ಭಕ್ತವತ್ಸಲ, ಭಕ್ತಾಪರಾಧಸಹಿಷ್ಣೋ, ದೇಶಕಾಲಾಧಿಪತೇ, ದೇಹೇಂದ್ರಿಯಾಧಿಪತೇ, ಸೂರ್ಯವಂಶಧ್ವಜ, ರಘುಕುಲತಿಲಕ, ಲಕ್ಷ್ಮಣಭರತಶತ್ರುಘ್ನಾಗ್ರಜ ಶ್ರೀಹನುಮ-ದುಪಾಸಿತ ಚರಣ ಸೀತಾಪತೇ ಶ್ರೀರಾಮಚಂದ್ರ!.....

ಪ್ರತಿಪದಾರ್ಥ: ವಿಶ್ವಾದಿ ಭಗವದ್ರೂಪಾಷ್ಟಕ ಪ್ರತಿಪಾದಕ— ವಿಶ್ವ ಮೊದಲಾದ ಎಂಟು ಭಗವದ್ರೂಪಗಳನ್ನು ಪ್ರತಿಪಾದಿಸುವ, ಅಕಾರಾದ್ಯಷ್ಟಾಕ್ಷರಾತ್ಮಕ— ಅಕಾರಾದಿ ಎಂಟು ಅಕ್ಷರ-ಗಳುಳ್ಳ, ಶ್ರೀಮತ್ಪ್ರಣವಾದಿ— ಪರಮಪವಿತ್ರ ಪ್ರಣವವೇ (ಸಕಲ ಸಂಪತ್ಪ್ರದ ಓಂಕಾರವೇ) ಮೊದಲಾದ, ಅಷ್ಟಮಹಾಮಂತ್ರ ಪ್ರತಿಪಾದ್ಯ— ಅಷ್ಟ ಮಹಾಮಂತ್ರಗಳಿಂದ (ಎಂಟು ಮಹಾಫಲಪ್ರಾಪಕ ಮಂತ್ರಗಳಿಂದ) ಪ್ರತಿಪಾದಿಸಲ್ಪಡುವ, ಅಷ್ಟರೂಪಾತ್ಮಕ— ಎಂಟು ರೂಪಗಳುಳ್ಳವನೂ; ಮಂತ್ರಾಧ್ಯಾಯೋಕ್ತ— ಮಂತ್ರಗಳನ್ನು ನಿರೂಪಿಸುವ ತಂತ್ರಸಾರ ಗ್ರಂಥದ ಅಧ್ಯಾಯದಲ್ಲಿ ಹೇಳಲ್ಪಡುವ, ಮತ್ತು ಭೂವರಾಹಾದಿ— ಭೂವರಾಹವೇ ಮೊದಲಾದ, ಅಶೇಷ ವೈಷ್ಣವಮಂತ್ರ ಪ್ರತಿಪಾದ್ಯ— ಸಮಸ್ತ ವೈಷ್ಣವ ಮಂತ್ರಗಳಿಂದ ಪ್ರತಿಪಾದ್ಯನಾದ (ಹೇಳಲ್ಪಡುವ, ನಿರೂಪಿಸಲ್ಪಡುವ), ಭೂವರಾಹಾದ್ಯಶೇಷ ರೂಪ ವಿಶೇಷಾತ್ಮಕ— ಭೂವರಾಹಾದಿ ಸಕಲ ರೂಪ ವಿಶೇಷಗಳುಳ್ಳವನೂ, ರಮಾದಿ ಮಂತ್ರ ಪ್ರತಿಪಾದ್ಯ— ರಮಾದಿ ಮಂತ್ರಗಳಿಂದ ಹೇಳಲ್ಪಡುವ, ರಮಾದಿನಿಷ್ಠ— ಲಕ್ಷ್ಮ್ಯಾದಿಗಳಲ್ಲಿ ಸ್ಥಿರವಾಗಿ ನೆಲೆಸಿರುವ, ರಮಾದಿ ನಾಮಕ— ಲಕ್ಷ್ಮ್ಯಾದಿ ನಾಮಗಳುಳ್ಳ, ರೂಪವಿಶೇಷಾತ್ಮಕ — (ಸ್ತ್ರೀ) ರೂಪ ವಿಶೇಷಗಳುಳ್ಳವನೂ, (ಆದ), ಶ್ರೀಲಕ್ಷ್ಮೀನೃಸಿಂಹಾತ್ಮಕ— ಶ್ರೀಲಕ್ಷ್ಮೀ-ನೃಸಿಂಹರೂಪಿಯಾದ, ಪರಮದಯಾಳೋ— ಉತ್ಕೃಷ್ಟ ದಯಾವಂತ!, ಕ್ಷಮಾಸಮುದ್ರ

— ಕ್ಷಮಾಗುಣ ಪೂರ್ಣನೇ!, ಭಕ್ತವತ್ಸಲ—ಭಕ್ತಪ್ರೇಮಿಯೇ!, ಭಕ್ತಾಪರಾಧ ಸ್ವಷ್ಣೋ—ಭಕ್ತಾಪರಾಧ ಸಹನಶೀಲ!, ದೇಶಕಾಲಾಧಿಪತೇ—ದೇಶ ಕಾಲಗಳನ್ನಾಳುವ ಹೇ ಸ್ವಾಮಿ!, ದೇಹೇಂದ್ರಿಯಾಧಿಪತೇ—ಸರ್ವರ ದೇಹ ಮತ್ತು ಇಂದ್ರಿಯಗಳ ನಿಯಾಮಕನಾದ ಹೇ ಹೃಷೀಕೇಶ!, ಸೂರ್ಯವಂಶ ಧ್ವಜ—ಸೂರ್ಯವಂಶಕ್ಕೆ ಧ್ವಜದಂತಿರುವ, ರಘುಕುಲತಿಲಕ —ರಘುವಂಶಕ್ಕೆ ತಿಲಕಪ್ರಾಯನಾದ, ಲಕ್ಷ್ಮಣ ಭರತ ಶತ್ರುಘ್ನಾಗ್ರಜ—ಲಕ್ಷ್ಮಣ, ಭರತ, ಶತ್ರುಘ್ನರ ಜ್ಯೇಷ್ಠಭ್ರಾತನಾದ, ಶ್ರೀಮದ್ಧನುಮದುಪಾಸಿತಚರಣ—ಶ್ರೀಹನುಮಂತನಿಂದ (ನಿರಂತ) ಉಪಾಸಿಸಲ್ಪಡುವ ಚರಣಗಳುಳ್ಳ, ಸೀತಾಪತೇ ಶ್ರೀರಾಮಚಂದ್ರ—ಜಾನಕೀ ರಮಣ ಶ್ರೀರಾಮಚಂದ್ರ ಪ್ರಭೋ!.....

ತಾತ್ಪರ್ಯ: ಪ್ರಣವವು (ಓಂಕಾರವು), ಅ-ಉ-ಮ-ನಾದ-ಬಿಂದು-ಘೋಷ-ಶಾಂತ-ಅತಿಶಾಂತಗಳೆಂಬ ಎಂಟು ವರ್ಣಗಳುಳ್ಳದ್ದು. ಈ ಎಂಟು ಅಕ್ಷರಗಳಿಂದ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ ಮತ್ತು ಜ್ಞಾನಾತ್ಮಗಳೆಂಬ ಎಂಟು ಭಗವದ್ರೂಪಗಳು ಪ್ರತಿಪಾದ್ಯಗಳಾಗಿವೆ. ಪ್ರಣವಮಂತ್ರವು (ಶ್ರೀಮತ್) ಪರಮಪವಿತ್ರವೂ, ಮೋಕ್ಷಾದಿ ಸಕಲ ಸಂಪತ್‌ಪ್ರದವೂ ಆದುದು; ಇದು ಪ್ರಸಿದ್ಧ ಅಷ್ಟಮಹಾಮಂತ್ರಗಳಲ್ಲಿ ಮೊದಲಿನದು. ಅಷ್ಟಮಹಾಮಂತ್ರಗಳ ಸಿದ್ಧಿ ಪಡೆದವರಿಗೆ ಸರ್ವಾಭೀಷ್ಟಗಳು ದೊರೆಯುತ್ತವೆ. ಅವು ಯಾವುದೆಂದರೆ: (೧) ಪ್ರಣವ (೨) ಮಾತೃಕಾ (ಅಕಾರಾದಿ ೫೦ ವರ್ಣಗಳಿಂದ ಪ್ರತಿಪಾದ್ಯಗಳಾದ ಅಜಾದಿರೂಪ-ಗಳ ವ್ಯೂಹ) (೩) ನಾರಾಯಣಾಷ್ಟಾಕ್ಷರ (೪) ವ್ಯಾಹೃತಿ (೫) ವಾಸುದೇವ-ದ್ವಾದಶಾಕ್ಷರ (೬) ಗಾಯತ್ರೀ (೭) ಪುರುಷಸೂಕ್ತ (೮) ವಿಷ್ಣು ಷಡಕ್ಷರ. ತಂತ್ರಸಾರದ ೪ನೇ ಅಧ್ಯಾಯದಲ್ಲಿ ಭೂವರಾಹಾದಿ ವೈಷ್ಣವ ಮಂತ್ರಗಳ ನಿರೂಪಣೆ ಇದೆ. ಅವುಗಳಲ್ಲಿ ಪ್ರಸಿದ್ಧವಾದವುಗಳಾವುವೆಂದರೆ: ಭೂವರಾಹ, ನೃಸಿಂಹ, ಹಂಸ, ದಧಿವಾಮನ (ಮಂತ್ರಚಿಂತಾಮಣಿ), ಪರಶುರಾಮ, ರಘುರಾಮ, ಕೃಷ್ಣ, ವೇದ-ವ್ಯಾಸ, ಹಯಗ್ರೀವ, ಕಪಿಲ, ದತ್ತಾತ್ರೇಯ, ಧನ್ವಂತರಿ ಇತ್ಯಾದಿ. ಶ್ರೀಹರಿಯು ರಮಾದಿ ಮಂತ್ರ ಪ್ರತಿಪಾದ್ಯನೂ ಆಗಿದ್ದಾನೆ. 'ರಮಾದಿ' ಎಂಬಲ್ಲಿನ ಆದಿಪದದಿಂದ, ಚತುರ್ಮುಖ ಬ್ರಹ್ಮ, ಸರಸ್ವತೀ ಮೊದಲಾದವರನ್ನು ಇಟ್ಟುಕೊಳ್ಳಬೇಕು. ಅದೇ ೪ನೇ ಅಧ್ಯಾಯದಲ್ಲಿ ರಮಾದಿ ಮಂತ್ರಗಳ ನಿರೂಪಣೆಯೂ ಇದೆ. ಅವು ಯಾವುವೆಂದರೆ: ಲಕ್ಷ್ಮೀ, ಚತುರ್ಮುಖ, ಮುಖ್ಯಪ್ರಾಣ, ಸರಸ್ವತೀ, ಭಾರತೀ ಮಂತ್ರಗಳು, ಶಿವಮಂತ್ರ, ಪಾರ್ವತೀ, ಶೇಷ, ಗರುಡ, ಇಂದ್ರಾದಿ ದಿಕ್ಪಾಲಕರ ಮಂತ್ರಗಳು. ಸ್ಕಂದ, ಸೂರ್ಯ, ವಿಘ್ನೇಶ್ವರ ಮಂತ್ರಗಳೂ ಹೇಳಲ್ಪಟ್ಟಿವೆ. ರಮಾದಿ ಆಯಾ ದೇವತೆಗಳಲ್ಲಿ ಆಯಾ ನಾಮಗಳುಳ್ಳ ಶ್ರೀಹರಿಯ ರೂಪಗಳೂ ಇವೆ. ಈ ದೇವತಾಧಿಷ್ಠಾನಗಳಲ್ಲಿ ತತ್ತನ್ನಾಮಕ ಶ್ರೀಹರಿಯನ್ನೂ ಉಪಾಸಿಸಿ ಯೋಗ್ಯಾಭೀಷ್ಟ-

ಗಳನ್ನು ಭಕ್ತರು (ಉಪಾಸಕರು) ಪಡೆಯಬಹುದು. ಈಗೆ ರೂಪವಿಶೇಷಗಳುಳ್ಳ ಶ್ರೀಲಕ್ಷ್ಮೀನೃಸಿಂಹನು ಪರಮ ದಯಾಳುವೂ, ಕ್ಷಮಾಸಮುದ್ರನೂ, ಭಕ್ತವತ್ಸಲನೂ, ಭಕ್ತಾಪರಾಧಗಳನ್ನು ಸ್ಸಸುವ ಶಾಂತ ಸ್ವಭಾವದವನೂ, ದೇಶಕಾಲಗಳ ನಿಯಾ-ಮಕನೂ, ದೇಹೇಂದ್ರಿಯಾಧಿಪತಿಯೂ ಆಗಿದ್ದಾನೆ. ಈತನೇ ಸೂರ್ಯವಂಶ-ಧ್ವಜನಾಗಿದ್ದಾನೆ (ರಥಾಗ್ರಭಾಗದಲ್ಲಿ ಧ್ವಜವು ಶೋಭಿಸುವಂತೆ ಆ ವಂಶದಲ್ಲಿ ಶೋಭಿಸುತ್ತಾನೆ). ಆ ವಂಶದಲ್ಲಿ ಪ್ರಖ್ಯಾತ ಸಾರ್ವಭೌಮನೆನಿಸಿದ ರಘು ಮಹಾ-ರಾಜನ ಸಂತತಿ ಸಮೂಹಕ್ಕೆ (ಶೂನ್ಯ ಲಲಾಟಕ್ಕೆ ತಿಲಕದಂತೆ) ಮಂಗಳಕರ ಕಾಂತಿಪ್ರದನಾಗಿದ್ದಾನೆ. ಲಕ್ಷ್ಮಣ, ಭರತ, ಶತ್ರುಘ್ನರ ಜ್ಯೇಷ್ಠ ಭ್ರಾತನೂ, ಪ್ರಾಜ್ಞ-ಶಿಖಾಮಣಿ ಶ್ರೀಹನುಮಂತನಿಂದ ಸೇವ್ಯವಾದ ಚರಣಗಳುಳ್ಳವನೂ (ಲಕ್ಷ್ಮೀ-ಸ್ವರೂಪಳಾದ) ಸೀತೆಯ ನಿಜಭರ್ತನೂ ಆದ ಹೇ ರಾಮಚಂದ್ರ ಪ್ರಭೋ!....

ಪ್ರಮೇಯ ವಿವರಣೆ: (೧) ವಾಕ್ಯ ೧, ಪ್ರ.ವಿ. (೫)ನ್ನು ಇಲ್ಲಿ ನೋಡಬೇಕು. ಅಷ್ಟಮಹಾಮಂತ್ರಗಳ ಜಪ ನಿಯಮಗಳನ್ನು ತಂತ್ರಸಾರದಿಂದಲೂ ಸಂಪ್ರದಾಯಸ್ಥ ಮಂತ್ರಜಾಪಕರಿಂದಲೂ ತಿಳಿದುಕೊಳ್ಳಬೇಕು. ಅಷ್ಟಮಹಾಮಂತ್ರಗಳು ಯಾವು-ವೆಂಬುದನ್ನು ಈ ವಾಕ್ಯವು ತಾತ್ಪರ್ಯ ಭಾಗದಲ್ಲಿ ವಿವರಿಸಲಾಗಿದೆ. ಈ ಮಂತ್ರಗಳ ಜಪಕ್ಕೆ ಅನ್ವಯಿಸುವ ಸಾಮಾನ್ಯ ನಿಯಮಗಳ ಸಂಗ್ರಹವು ಈಗಿದೆ: *'ಯಸ್ಯ ಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ'* ಎಂದು (ತಂತ್ರಸಾರ) ಹೇಳಿರುವಂತೆ, ಎಲ್ಲ ಮಂತ್ರಗಳಿಗೂ ಪಂಚಾಶದ್ವರ್ಣ ರೂಪ ಮಾತೃಕಾಮಂತ್ರದಿಂದಲೂ, ನರಸಿಂಹ ಪ್ರತಿಪಾದ್ಯ ಕ್ಷಕಾರದಿಂದಲೂ, ಉಕ್ತವಿಧಿಯಿಂದ ಅಂಗನ್ಯಾಸ ಮಾಡಿಕೊಳ್ಳಬೇಕು. ಮತ್ತು ಆಯಾ ಮಂತ್ರಗಳಿಗೆ ಪ್ರತ್ಯೇಕವಾಗಿ ಹೇಳಿರುವ ಪಂಚಾಂಗನ್ಯಾಸಗಳನ್ನೂ (ಹೃದಯ-ಶಿರಸ್ಸು-ಶಿಖಾ-ಕವಚ-ಅಸ್ತ್ರ), ಮತ್ತು ಋಷಿ-ದೇವತಾ-ಛಂದಸ್ಸುಗಳನ್ನೂ ಹೇಳಿಕೊಂಡು, ನಂತರ ಜಪಮಾಡಬೇಕು. ಪ್ರತಿಮೆಗಳಲ್ಲಿ ಭಗವಂತನನ್ನು ಆವಾಹಿಸಿ ನಂತರ ಷೋಡಶೋಪಚಾರಾದಿ ಪೂಜೆಗಳನ್ನು ಸಲ್ಲಿಸುವುದು. 'ಪ್ರತಿಮಾರ್ಚನೆ' ಯೆಂದು ಸಾಮಾನ್ಯವಾಗಿ ಕರೆಯಲ್ಪಡುತ್ತದೆ. ಈ ವಿಶಿಷ್ಟ ಪೂಜಾಧಿಕಾರವನ್ನು ಸಂಪಾದಿಸಲು ಅಷ್ಟಮಹಾಮಂತ್ರಗಳ ಜಪವು ಆವಶ್ಯಕ. ಭೂವರಾಹಾದಿ ಇತರ ಭಗವದ್ರೂಪಗಳನ್ನು ಗುರೂಪದೇಶದಿಂದ ಪಡೆದು ಧ್ಯಾನಿಸಿ, ಆ ಮಂತ್ರಗಳನ್ನು ಜಪಿಸಿ ಐಹಿಕ-ಆಮುಷ್ಮಿಕಾದಿ ಸಕಲ ಪುರುಷಾರ್ಥಗಳ ಸಿದ್ಧಿಯನ್ನೂ ದೊರಕಿಸಿಕೊಳ್ಳ-ಬಹುದು. ಈ ಮಂತ್ರಜಪಗಳು ಐಚ್ಛಿಕ-ಸಂಧ್ಯಾಗಾಯತ್ರ್ಯಾದಿಗಳಂತೆ ಜಪಿಸಲೇ-ಬೇಕೆಂಬ ನಿರ್ಬಂಧವಿಲ್ಲ. ಧನ್ವಂತರಿ ಮೊದಲಾದ ಮಂತ್ರಗಳಿಂದ ಐಹಿಕವಾದ ಮಹಾರೋಗಾದಿ ವಿಪತ್ತುಗಳ ಪರಿಹಾರವಾಗುವಂತೆ ಭವರೋಗದ ಪರಿಹಾರವಾಗಿ ಮೋಕ್ಷವು ದೊರೆಯುತ್ತದೆ. ಈ ಮಂತ್ರಜಪ ಕ್ರಮಗಳ ವಿಸ್ತಾರ ವಿವರಣೆಯನ್ನು

ಅವುಗಳಿಂದ ಪ್ರಾಪ್ತವಾಗುವ ಸಿದ್ಧಿಗಳನ್ನು ತಂತ್ರಸಾರದ ಅಭ್ಯಾಸದಿಂದ ತಿಳಿಯ-ಬಹುದು. ಈ ಗ್ರಂಥಕರ್ತರು (ಶ್ರೀಮಂತ್ರಾಲಯ ಪ್ರಭುಗಳು) ತಂತ್ರಸಾರದ ಸಾರ-ವನ್ನು ಈ ಚಿಕ್ಕ ಗ್ರಂಥದಲ್ಲಿ (ಪ್ರಾತಃಸಂಕಲ್ಪಗದ್ಯದಲ್ಲಿ) ಅಳವಡಿಸಿ ಪರಮೋಪಕಾರ ಮಾಡಿರುತ್ತಾರೆ.

(೨) ಭಕ್ತಾಪರಾಧಸಹಿಷ್ಣು: ಶ್ರುತಿಸ್ಮೃತಿಗಳು ಶ್ರೀಹರಿಯ ಆಜ್ಞೆಗಳು— '*ಶ್ರುತಿ-ಸ್ಮೃತೀ ಹರೇರಾಜ್ಞೇ.*' ಇವು ನಾನಾ ವಿಧಿನಿಷೇಧಗಳನ್ನು ನಿರೂಪಿಸುತ್ತವೆ. ಅವು-ಗಳನ್ನು ಅತಿಕ್ರಮಿಸುವುದು ಅಪರಾಧ. ಭೃತ್ಯನು ಸ್ವಾಮಿಯ ಆಜ್ಞೆಯನ್ನು ಉಲ್ಲಂಘಿ-ಸುವುದಕ್ಕಿಂತ ಹೆಚ್ಚಿನ ಅಪರಾಧವುಂಟೇ! ಈ ವಿಧದ ಅಪರಾಧಗಳು ಎಣಿಕೆಗೆ ನಿಲುಕದಷ್ಟು ನಮ್ಮಿಂದ ನಿತ್ಯವೂ, ಜ್ಞಾತಾಜ್ಞಾತವಾಗಿ ಸಂಭವಿಸುತ್ತವೆ. ಸರ್ವಸಾಕ್ಷಿ-ಯಾದ ಶ್ರೀಹರಿಗೆ ತಿಳಿಯದ ನಮ್ಮ ಅಪರಾಧಗಳಿರುವುದುಂಟೇ? ಆತನು ಎಲ್ಲ-ವನ್ನೂ ಪ್ರತ್ಯಕ್ಷ ಕಾಣುವ ಸರ್ವಜ್ಞನು. ನಮ್ಮ ಕರ್ಮಗಳೆಲ್ಲವೂ, ಯಾವುದಾದ-ರೊಂದು ವಿಧ ದೋಷದಿಂದ ಕೂಡಿರುತ್ತದೆ. '*ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ*'—(ಗೀತಾ) ಅಗ್ನಿಯು ಹೊಗೆಯಿಂದಲೆಂಬಂತೆ ಸಕಲ-ಕರ್ಮಗಳೂ ದೋಷದಿಂದ ಆವೃತವಾಗಿರುವುವೆಂದು ಆತನೇ ಹೇಳಿದ್ದಾನೆ. ಈ ಕಾರಣದಿಂದ ಸರ್ವಕರ್ಮತ್ಯಾಗವೇ ಯುಕ್ತವೆಂದು ತಿಳಿಯಬಾರದು. ವಿಧ್ಯುಕ್ತ ಕರ್ಮತ್ಯಾಗರೂಪದ ದೋಷವು ಅಧಿಕವಾದುದು. ಕರ್ಮಗಳನ್ನು ಮಾಡಿದರೆ, ವಿಧಿ ನಿಯಮಗಳನ್ನು ಸಮರ್ಪಕವಾಗಿ ಪಾಲಿಸದ ದೋಷ; ಮಾಡದೇ ಇದ್ದರೆ ಅದಕ್ಕೂ ಹೆಚ್ಚಾದ ತ್ಯಾಗದೋಷ. ಮೇಲಾಗಿ ಕರ್ಮತ್ಯಾಗದಿಂದ, '*ನ ಕರ್ಮಣಾಮನಾರಂ-ಭಾತ್ ನೈಷ್ಕರ್ಮ್ಯಂ ಪುರುಷೋಽಶ್ನುತೇ*'—ನೈಷ್ಕರ್ಮ್ಯವೆಂಬ ಮೋಕ್ಷವು ದೊರೆಯ-ದೆಂದು ಅಲ್ಲಿಯೇ ಶ್ರೀಕೃಷ್ಣನು ಹೇಳಿರುತ್ತಾನೆ. (ನೈಷ್ಕರ್ಮ್ಯವೆಂದರೆ ಬಂಧಕವಲ್ಲದ ಸ್ವೇಚ್ಛಾನುಸಾರ ಕರ್ಮವುಳ್ಳದ್ದು. ಮೋಕ್ಷ—ನಿಷ್ಕ್ರಿಯ ಸ್ಥಿತಿಯಲ್ಲ)...ಗೆ ನಿತ್ಯವೂ ಸಂಭವಿಸುವ ವಿಧಿನಿಷೇಧಗಳ ಅತಿಕ್ರಮಣರೂಪದ ಅಪರಾಧಗಳೊಂದಿಗೆ, ಮುಕ್ತಿ-ಯೋಗ್ಯ ಜೀವರು ಸಹ, ಅಸುರಾವೇಶನಿಮಿತ್ತರಾಗಿ ಅನೇಕ ಪಾಪಕರ್ಮ-ಗಳನ್ನಾಚರಿಸುತ್ತಾರೆ. ಈ ಎಲ್ಲ ಅಪರಾಧಗಳೂ ನಾನಾ ಜನ್ಮಗಳನ್ನೆತ್ತಲು ಕಾರಣ-ವಾಗುತ್ತವೆ. ಪುನಃ, ಹಾಗೆ ಪಡೆಯುವ ಪ್ರತಿ ಮನುಷ್ಯಜನ್ಮದಲ್ಲಿ ಸಂಭವಿಸುವ ಅಂತಹ ಕರ್ಮಗಳು ಪ್ರತ್ಯೇಕವಾಗಿ ನಾನಾ ಜನ್ಮಗಳಿಗೆ ಕಾರಣವಾಗುತ್ತವೆ. ಶ್ರೀಹರಿಯು ಈ ಅಸಂಖ್ಯವಾದ ಅಪರಾಧಗಳನ್ನು ಕ್ಷಮಿಸದಿದ್ದರೆ, ಭೋಗದಿಂದ ಆ ಕರ್ಮಗಳನ್ನು ಪೂರ್ಣ ಕಳೆದುಕೊಂಡು ಮೋಕ್ಷವನ್ನು ಪಡೆಯುವುದು ದುಸ್ಸಾಧ್ಯವೇ ಸರಿ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಶ್ರೀಹರಿಯು ಕರುಣಾಸಮುದ್ರನು—ಆದ್ದರಿಂದಲೇ ಕ್ಷಮಾಸಮುದ್ರನೂ ಆಗಿರುವನು. ಶರಣು ಹೊಂದಿದ ಭಕ್ತರ ಅಪರಾಧಗಳನ್ನು

ಕ್ಷಮಿಸುತ್ತಾನೆ. ಅಪರಾಧಗಳನ್ನು ಸ್ಸಸಿ, ಮಹಾಪಾತಕಗಳಿಗೆ ಸಹ ಅಲ್ಪ ಶಿಕ್ಷೆಯನ್ನು ವಿಧಿಸುತ್ತಾನೆ—ಅನೇಕ ಅಪರಾಧಗಳನ್ನು ಪೂರ್ಣವಾಗಿಯೂ ಕ್ಷಮಿಸುತ್ತಾನೆ. ವಿಧಿ-ಗಳನ್ನು ಆಚರಿಸುವುದರಲ್ಲಿ ಸಂಭವಿಸುವ ದೋಷರೂಪದ ಅಪರಾಧಗಳನ್ನು, ಭಕ್ತಿಪೂರ್ವಕ ತನ್ನ ನಾಮೋಚ್ಚಾರ ಮಾಡುವ ಮಾತ್ರದಿಂದ ಪರಿಹರಿಸಿ, ನ್ಯೂನ-ಕರ್ಮಗಳಿಗೆ ಪೂರ್ಣತ್ವವನ್ನು ದೊರಕಿಸುತ್ತಾನೆ. *'ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಹೋಮಕ್ರಿಯಾದಿಷು। ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ॥'* ಎಂಬ ಸ್ತೋತ್ರವು, ಈ ಪ್ರಮೇಯೋಕ್ತ ಶ್ರೀಹರಿಮಹಿಮೆಯನ್ನೇ ಹೇಳುತ್ತದೆ. *'ಅತೋ ಯದ್ಯಸುರಾವೇಶಾತ್ ಕೃತಮೇ ತೇನ ದುಷ್ಕೃತಂ। ಅನಾದಿ ಭಕ್ತೋ ಯಸ್ಮಾನ್ಮೇ ಮೋಕ್ಷಯಿಷ್ಯೇ ತತಸ್ತ್ವಹಂ॥'* (ಭಾಗ-ತಾ) ಎಂಬಲ್ಲಿ ಮುಕ್ತಿಯೋಗ್ಯರಾದ ತನ್ನ ಭಕ್ತರು ಅಸುರಾವೇಶದಿಂದ ಮಾಡುವ ದುಷ್ಕರ್ಮಗಳಿಂದ ಮೋಚನ ಮಾಡುವನೆಂಬ, ಶ್ರೀಹರಿಯ ಅಭಯವಚನವೂ ನಿರೂಪಿಸಲ್ಪಟ್ಟಿದೆ. ಈ ಕಾರಣದಿಂದಲೇ *'ಅಪರಾಧ ಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ। ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ॥'*, ಪ್ರತಿನಿತ್ಯದಲ್ಲಿ ಮಾಡುವ ಸಹಸ್ರಾರು ಅಪರಾಧಗಳನ್ನು ಕ್ಷಮಿಸೆಂದು ಪ್ರಾರ್ಥಿಸುತ್ತೇವೆ. ಕ್ಷಮಿಸದಿದ್ದರೆ ಅಥವಾ ಕ್ಷಮಿಸುವ ಸಾಮರ್ಥ್ಯವೂ ಸ್ವಾತ್ರಂತ್ಯವೂ ಇಲ್ಲದಿದ್ದರೆ ಶ್ರೀಹರಿಯನ್ನು ..ೀಗೆ ಪ್ರಾರ್ಥಿಸುವುದು ವ್ಯರ್ಥವಲ್ಲವೇ? ದೇವೇಂದ್ರನ ಅಹಲ್ಯಾಜಾರತ್ವ, ಚಂದ್ರನ ಗುರುಪತ್ನೀಸಂಗ, ಭೃಗು ಋಷಿಯ ಪಾದತಾಡನ ಇತ್ಯಾದಿ ಮಹಾಪರಾಧಗಳನ್ನು ತೃಣೀಕರಿಸಿ ಭಕ್ತರನ್ನು ರಕ್ಷಿಸಿದ್ದಾನೆ.

(೩) ಶ್ರೀಹರಿಯೇ ದೇಶಕಾಲಾಧಿಪತಿಯೆಂಬ ಪ್ರಮೇಯ ವಿಷಯದಲ್ಲಿ ವಾ.೨೨, ಪ್ರ.ವಿ.(೩)ನ್ನೂ ಓದಿಕೊಳ್ಳಬೇಕು. ದೇಶಕಾಲಗಳ ಮೇಲಿನ ಶ್ರೀಹರಿಯ ಪ್ರಭುತ್ವವು, *'ಸೂಕ್ಷ್ಮಸೂಕ್ಷ್ಮತಮೇ ಕಾಲೇ ದೇಶೇ ಸೂಕ್ಷ್ಮತಮೇಪಿ ಚ॥ ಪೃಥಕ್ ಪೃಥಕ್ ಕ್ರಮಾತ್ಸ್ರಷ್ಟುಂ ಸಂಸ್ಥಾಪಯಿತುಮಂಜಸಾ। ಸ್ವಶಕ್ತ್ಯೇಕಾಂಶಸ್ವಾಪ್ಯಂಶಾಂಶೇನ ಪ್ರಭುಃ ಸ್ವಯಂ॥'* (ಸ.ರ.ಮಾ) ಎಂಬ ವಾಕ್ಯಗಳಿಂದ ವರ್ಣಿತವಾಗಿದೆ. ಇವುಗಳ ಭಾವಾರ್ಥವೇನೆಂದರೆ: ಸೂಕ್ಷ್ಮತಮ ಕಾಲದಲ್ಲಿ ಸೂಕ್ಷ್ಮತಮ ದೇಶದಲ್ಲಿ (ಅನಂತ ವಿಶ್ವಗಳನ್ನು) ಪ್ರತ್ಯೇಕವಾಗಿ ಸೃಷ್ಟಿಸಿ (ಬಹುಕಾಲದಿಂದ ಮತ್ತು ವಿಶಾಲಪ್ರದೇಶದಲ್ಲಿ ಹೇಗೋ ಹಾಗೆ) ಸ್ಥಾಪಿಸಲು, ಶ್ರೀಹರಿಯು ತನ್ನ ಅಪಾರ ಶಕ್ತಿಯ ಅನಂತಾಂಶಗಳಲ್ಲಿ ಒಂದಂಶದಿಂದ ಸಮರ್ಥನಾಗಿದ್ದಾನೆ.

(೪) ಶ್ರೀಹರಿಯೇ ದೇಹೇಂದ್ರಿಯಾಧಿಪತಿಯು. ಯದ್ಯಪಿ ದೇಹೇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳಿದ್ದಾರೆ. ದೇಹೇಂದ್ರಿಯಗಳ ಮೇಲೆ ಅವರ ಸ್ವಾಮ್ಯವೂ

ಇರುತ್ತದೆ. ಈ ಅಭಿಮಾನಿದೇವತೆಗಳೆಲ್ಲರಲ್ಲಿ ಶ್ರೀಮುಖ್ಯಪ್ರಾಣನಿದ್ದು, ಅವರನ್ನು ನಿಯಾಮನ ಮಾಡುತ್ತಾನೆ; ಈ ಮುಖ್ಯಪ್ರಾಣನ ಅಂತರ್ಯಾಮಿಯಾಗಿ ಶ್ರೀವಿಷ್ಣುವೇ ಆತನನ್ನೂ ನಿಯಮಿಸುತ್ತಾನೆ. ಆದ್ದರಿಂದ ಸರ್ವಾಭಿಮಾನಿಗಳಿಗೆ ಸ್ವಾಮಿಯಾಗಿ ಸರ್ವರನ್ನೂ ಸ್ವತಂತ್ರವಾಗಿ ಆಳುವ ವಿಷ್ಣುವೇ ದೇಹೇಂದ್ರಿಯಗಳಿಗೆ ಮುಖ್ಯಾಧಿಪತಿಯು. *'ಸರ್ವೇಂದ್ರಿಯಾಭಿಮಾನಿಸ್ಥ ಮುಖ್ಯಪ್ರಾಣಸ್ಥ ವಿಷ್ಣುನಾ। ಪ್ರೇರಿತಃ ಶ್ರೀಶತುಷ್ಟ್ಯರ್ಥಂ ಕರಿಷ್ಯೇ ಕರ್ಮಚಾಖಿಲಂ॥'* ಎಂಬ ನಿತ್ಯಸಂಕಲ್ಪದ ವಾಕ್ಯವು ಇದನ್ನೇ ಹೇಳುತ್ತದೆ. *'ದೇಹೇಂದ್ರಿಯಾಸು ಹೃದಯಾನಿ ಚರಂತಿ ಯೇನ। ಸಂಜೀವಿತಾನಿ ತದವೈಹಿ ಪರಂ ನರೇಂದ್ರ॥'* (ಭಾಗವತ) ಎಂದರೆ, 'ಸರ್ವರ ದೇಹ, ಇಂದ್ರಿಯ, ಪ್ರಾಣ, ಮನಸ್ಸು ಮೊದಲಾದವುಗಳನ್ನು ಸ್ವಶಕ್ತಿಯಿಂದ ಉಜ್ಜೀವಿಸಿ, ಅವುಗಳಿಂದ ಕಾರ್ಯಮಾಡಿಸುವ ಸಮಾಧಿರ್ರತ ನಾರಾಯಣನನ್ನೇ (ನಿನ್ನ ಬಿಂಬ) ಸರ್ವರ ಬಿಂಬನನ್ನಾಗಿ ತಿಳಿ, ಹೇ ಜನಕರಾಜ!' ಇಲ್ಲಿ ಶ್ರೀಹರಿಯೇ ದೇಹೇಂದ್ರಿಯ-ಗಳಿಗೆ ಸ್ವತಂತ್ರನಾದ ಅಧಿಪತಿಯೆಂದು ನಿರವಕಾಶ ಶಬ್ದಗಳಿಂದ ಹೇಳಲಾಗಿದೆ.

೨೬. ತ್ವದಾಜ್ಞಯಾ ತ್ವತ್‌ಪ್ರಸಾದಾತ್ ತ್ವತ್‌ಪ್ರೇರಣಯಾ ತ್ವತ್‌ಪ್ರೀತ್ಯರ್ಥಂ ತ್ವಾಂ ಉದ್ದಿಶ್ಯ ತ್ವಾಂ ಅನುಸ್ಮರನ್ನೇವ ತ್ವದಾಜ್ಞಯಾ ನಿಯತೇನ ಮನ್ನಿಯಾಮಕೇನ ಸತ್ತಾಪ್ರದವಾಯುನಾಮಕ, ಚೇಷ್ಟಾಪ್ರದಪ್ರಾಣನಾಮಕ, ಧಾರಣಾಪ್ರದಧರ್ಮ-ನಾಮಕ, ಮುಕ್ತಿಪ್ರದಭಕ್ತಿನಾಮಕರೂಪವಿಶೇಷೈಃ ಮದ್‌ಹೃದಿಸ್ಥಿತೇನ, ಪರಮ-ದಯಾಲುನಾ, ಕ್ಷಮಾಸಮುದ್ರೇಣ, ಭಕ್ತವತ್ಸಲೇನ, ಭಕ್ತಾಪರಾಧಸಹಿಷ್ಣುನಾ, ಸರ್ವಸ್ವಾಮಿನಾ, ಸರ್ವಪ್ರೇರಕೇಣ, ಸರ್ವತಾತ್ವಿಕದೇವತಾ ಪ್ರೇರಕೇಣ, ಸರ್ವ-ತಾತ್ವಿಕಾಸುರ ಭಂಜಕೇನ, ತಥಾ ತತ್ಪ್ರೇರಣಾ ಪ್ರಯುಕ್ತಾಶೇಷ ದುರ್ಮತಭಂಜಕೇನ ಅತ ಏವ ಪ್ರಭಂಜನಶಬ್ದವಾಚ್ಯೇನ....

ಪ್ರತಿಪದಾರ್ಥ: ತ್ವದಾಜ್ಞಯಾ—(ಹೇ ಶ್ರೀರಾಮಚಂದ್ರ!) ನಿನ್ನ ಆಜ್ಞೆಯಿಂದ, ತ್ವತ್ಪ್ರ-ಸಾದಾತ್—ನಿನ್ನ ಪ್ರಸಾದದಿಂದ, ತ್ವತ್ಪ್ರೇರಣಯಾ—ನಿನ್ನ ಪ್ರೇರಣೆಯಿಂದ, ತ್ವತ್ಪ್ರೀತ್ಯರ್ಥಂ —ನಿನ್ನ ಪ್ರೀತ್ಯರ್ಥವಾಗಿ, ತ್ವಾಮುದ್ದಿಶ್ಯ—ನಿನಗೋಸ್ಕರವೇ (ನಿನ್ನನ್ನೇ ಮನಸಾ ಮುಂದಿಟ್ಟು-ಕೊಂಡು), ತ್ವಾಂ—ನಿನ್ನನ್ನೇ, ಅನುಸ್ಮರನ್ನೇವ—ಸ್ಮರಣಯುಕ್ತನಾಗಿಯೇ (ನನ್ನನ್ನಾಳುವ ಪ್ರಭುವೆಂಬುದನ್ನು ಮರೆಯದೆ), ತ್ವದಾಜ್ಞಯಾ—ನಿನ್ನ ಆಜ್ಞೆಯಿಂದಲೇ, (ಶ್ರುತಿಸ್ಮೃತಿ-ರೂಪದಲ್ಲಿರುವ ನಿನ್ನ ಆಜ್ಞೆಗಳಂತೆಯೇ) (ಸಕಲಕರ್ಮಗಳನ್ನು ಮಾಡುವೆನೆಂದು ಕಡೆಯ ವಾಕ್ಯದ 'ಕರಿಷ್ಯೇ' ಮತ್ತು 'ಕಾರಯಿಷ್ಯೇ' ಎಂಬ ಶಬ್ದಗಳೊಂದಿಗೆ ಅನ್ವಯ ಮಾಡಿಕೊಳ್ಳ-ಬೇಕು.); ಅಥವಾ ತ್ವದಾಜ್ಞಯಾ ನಿಯತೇನ—ನಿನ್ನ ಆಜ್ಞೆಯಿಂದ ನಿಯತವಾದ, ಮನ್ನಿ-ಯಾಮಕೇನ—(ನಾನೇ ಮಾಡುವುದಿಲ್ಲ; ನಿನ್ನ ಆಜ್ಞಾನುವರ್ತಿಯಾದ ಮುಖ್ಯಪ್ರಾಣನಿಂದ ಪ್ರೇರಿತವಾಗಿ ಮಾಡುವೆನು ಮತ್ತು ಅನ್ಯರಿಂದ 'ಕಾರಯಿಷ್ಯೇ' ಮಾಡಿಸುವೆನೆಂದು ಹೇಳುತ್ತ,

ಈ ಮುಂದೆ ಪುನಃ ಶ್ರೀಮುಖ್ಯಪ್ರಾಣನ ಮಹಿಮೆಗಳನ್ನೇ ನಿರೂಪಿಸುತ್ತಾರೆ)—ನನ್ನ ನಿಯಾಮಕನಾದ (ಸಂಪೂರ್ಣವಾಗಿ ಅಧೀನವಿಟ್ಟುಕೊಂಡು ಸರ್ವಕರ್ಮಗಳನ್ನು ಮಾಡಿ-ಸುವ), ಸತ್ತಾಪ್ರದ ವಾಯುನಾಮಕ—ನನ್ನ ಅಸ್ತಿತ್ವ (ಇರುವಿಕೆಗೆ) ಕಾರಣನಾದ್ದರಿಂದ ವಾಯುವೆಂಬ ನಾಮವುಳ್ಳ, ಧಾರಣಾಪ್ರದ ಧರ್ಮನಾಮಕ—ಧಾರಕ ಶಕ್ತಿಯನ್ನು ಕೊಡುವ (ಆಶ್ರಯಭೂತನಾಗಿರುವ)ನಾದ್ದರಿಂದ ಧರ್ಮನೆಂದು ಕರೆಯಲ್ಪಡುವ, ಮುಕ್ತಿಪ್ರದ ಭಕ್ತಿ-ನಾಮಕ—ಭಕ್ತಿಪ್ರದನಾಗಿ ತತ್ಫಲನಾದ ಮುಕ್ತಿಯನ್ನು ಕೊಡುವುದರಿಂದ ಭಕ್ತಿಯೆಂಬ ನಾಮ-ವುಳ್ಳ, ರೂಪವಿಶೇಷೈಃ—ಭಿನ್ನಭಿನ್ನ ರೂಪಗಳಿಂದ ಮದ್ಧೃದಿಸ್ಥಿತೇನ—ನನ್ನ ಹೃದಯದಲ್ಲಿ ನಿಂತಿರುವ, ಪರಮದಯಾಳುನಾ—ಉತ್ತಮ ದಯಾವಂತನು, ಕ್ಷಮಾಸಮುದ್ರೇಣ—ಅಪಾರ ಕ್ಷಮಾಗುಣವುಳ್ಳವನೂ, ಭಕ್ತವತ್ಸಲೇನ—ಭಕ್ತಪ್ರೇಮಿಯೂ (ಮಕ್ಕಳಂತೆ ಪ್ರೀತಿಸು-ವವನೂ), ಭಕ್ತಾಪರಾಧಸಹಿಷ್ಣುನಾ—ಭಕ್ತಾಪರಾಧಗಳನ್ನು ಸಹಿಸುವ ಉದಾರಸ್ವಭಾವ-ದವನೂ, ಸರ್ವಸ್ವಾಮಿನಾ—ಸರ್ವಸ್ವಾಮಿಯೂ, ಸರ್ವಪ್ರೇರಕೇಣ—ಸರ್ವಪ್ರೇರಕನೂ, ಸರ್ವ ತಾತ್ವಿಕದೇವತಾ ಪ್ರೇರಕೇಣ—ಸಕಲ ತತ್ವಾಭಿಮಾನಿದೇವತೆಗಳ ಪ್ರೇರಕನೂ, ಸರ್ವತಾತ್ವಿಕಾಸುರಭಂಜಕೇನ—ಸರ್ವತಾತ್ವಿಕ ಅಸುರರನ್ನು ನಿಗ್ರಹಿಸುವವನೂ, ತಥಾ ಮತ್ತು, ತತ್ಪ್ರೇರಣಾಪ್ರಯುಕ್ತ ಅವರ (ಅಸುರರ) ಪ್ರೇರಣೆಯಿಂದಲೇ ಆದ, ಅಶೇಷ ದುರ್ಮತ ಭಂಜಕೇನ—ಸಕಲ ದುರ್ಮತಧ್ವಂಸಕನೂ, (ದುರ್ಮತಿಭಂಜಕೇನ ಎಂಬ ಪಾಠಾಂತರಕ್ಕೆ, ಅಸುರಪ್ರೇರಣೆಯಿಂದಾದ ದುರ್ಬುದ್ಧಿನಾಶಕನೆಂಬರ್ಥವನ್ನು ತಿಳಿಯ-ಬೇಕು), ಅತ ಏವ—ಈ ಕಾರಣದಿಂದಲೇ, ಪ್ರಭಂಜನ ಶಬ್ದವಾಚ್ಯೇನ—ಪ್ರಭಂಜನ ಶಬ್ದದಿಂದ ಕರೆಯಲ್ಪಡುವವನೂ (ಆದ)....

ತಾತ್ಪರ್ಯ: ಹೇ ರಾಮಚಂದ್ರಪ್ರಭೋ! ಶ್ರುತಿಸ್ಮೃತಿಗಳಲ್ಲಿ ಉಕ್ತವಾದ ನಿನ್ನಾಜ್ಞೆ-ಯಂತೆ, ನೀನು ಪ್ರಸನ್ನನಾಗಿ (ನನ್ನನ್ನು ಅನುಗ್ರಹಿಸಲಿಚ್ಛಿಸಿ) ನನ್ನಲ್ಲಿ ನಿಂತು ಪ್ರೇರಣೆ ಮಾಡುವುದರಿಂದ, ನೀನು ಪ್ರೀತನಾಗಬೇಕೆಂಬ ಉದ್ದೇಶ ಮಾತ್ರದಿಂದ ಸರ್ವ-ಕರ್ಮಗಳನ್ನಾಚರಿಸುತ್ತೇನೆ. ಅಂತಃಪ್ರೇರಕನಾದ ನೀನು ಬುದ್ಧಿಸ್ಥನಾಗಿ ಪ್ರೇರಿಸುವುದನ್ನು ಯಾವ ವಿಧದಿಂದಲೂ ವಿರೋಧಿಸಲು ಅಥವಾ ಅತಿಕ್ರಮಿಸುವ ಇಚ್ಛೆ ಅಥವಾ ಯತ್ನವನ್ನು ಮಾಡುವುದಿಲ್ಲ—ಮಾಡಿಸಬೇಡ. ನೀನು ಸರ್ವೇಂದ್ರಿಯಾಭಿಮಾನಿಗಳ ನಿಯಾಮಕನಾದ ಮುಖ್ಯಪ್ರಾಣನ ದ್ವಾರಾ ನನ್ನನ್ನು ಪ್ರೇರಿಸುತ್ತೀ. ಆತನು ನಿನ್ನ ಆಜ್ಞಾಬದ್ಧನಾಗಿಯೇ ವರ್ತಿಸುತ್ತಾನೆ. ಆತನು ನಿನ್ನ ವಿನಹ ಅನ್ಯಸ್ವಾಮಿ ರಹಿತನು. ಈತನೇ ನನ್ನ ನಿಯಾಮಕನು, ಈತನು ಸತ್ತಾಪ್ರದನಾದ್ದರಿಂದ 'ವಾಯು'ವೆಂದೂ, ಸಕಲವಿಧ ಚೇಷ್ಟಾಪ್ರದನಾದ್ದರಿಂದ 'ಪ್ರಾಣ'ನೆಂದೂ, ನನಗೆ ಸರ್ವವಿಧದಿಂದ ಆಶ್ರಯನಾದ್ದರಿಂದ, 'ಧರ್ಮ'ನೆಂದೂ, ನಿನ್ನ ಆಜ್ಞೆಯಿಂದ ಆತನು ಮುಕ್ತಿಪ್ರದನೂ ಆಗಿದ್ದು, ಮುಕ್ತಿಗೆ ಆವಶ್ಯಕವಾದ (ಪ್ರಧಾನ ಸಾಧನವಾದ) ಭಕ್ತಿಯನ್ನು ದಯ-ಪಾಲಿಸುವುದರಿಂದ 'ಭಕ್ತಿ' ಎಂದೂ ಕರೆಯಲ್ಪಡುವನು—ಈ ವಾಯು ಮೊದಲಾದ

ನಾಮಗಳುಳ್ಳ ರೂಪವಿಶೇಷಗಳುಳ್ಳವನಾಗಿರುವನು. ಈತನು, ಪರಮದಯಾಳುವೂ, ಕ್ಷಮಾಸಮುದ್ರನೂ, ಭಕ್ತವತ್ಸಲನೂ ಭಕ್ತಾಪರಾಧ ಸಹನಶೀಲನೂ ಆಗಿರುವನು; ನಿನ್ನ ನಂತರ ಈತನೇ ಸರ್ವಸ್ವಾಮಿಯು— ಸರ್ವಪ್ರೇರಕನು— ಸರ್ವತತ್ವಾಭಿಮಾನಿ ದೇವತೆಗಳ ಪ್ರೇರಕನು— ತಾತ್ವಿಕದೈತ್ಯರನ್ನೂ ನಿಗ್ರಸಿ ಭಕ್ತರಿಗೆ ಸದ್ಬುದ್ಧಿಯನ್ನಿತ್ತು ರಕ್ಷಿಸುವವನು. ಈತನು, ದೈತ್ಯರಿಂದಲೂ ದೈತ್ಯ ಪ್ರೇರಣೆಯಿಂದಲೂ ನಿರ್ಮಿತಗಳಾದ ಸಕಲ ದುರ್ಮತಗಳ ಪ್ರಭಂಜಕನು (ಧ್ವಂಸಕನು— ಖಂಡನೆಯಿಂದ ನಾಶಗೊಳಿಸುವವನು). ಈ ಕಾರಣದಿಂದ 'ಪ್ರಭಂಜನ'ನೆಂಬ ಅನ್ವರ್ಥನಾಮವುಳ್ಳವನಾಗಿದ್ದಾನೆ.

ಪ್ರಮೇಯ ವಿವರಣೆ: (೧) *'ಲೋಕಾನಾಂ ಚೈವ ವೇದಾನಾಂ ಸರ್ವೇಷಾಂ ಪ್ರಾಣಿನಾಮಪಿ। ಸರ್ವಾಧಿಪತಿರ್ಬ್ರಹ್ಮಾ .....'* ಇತ್ಯಾದಿ (ಬೃ.ಭಾ.) ವಾಕ್ಯಗಳು, ಬ್ರಹ್ಮವಾಯುಗಳಿಗೆ, ಲೋಕ-ವೇದಗಳ ಅಭಿಮಾನಿಗಳು ಮತ್ತು ಸಕಲ ಪ್ರಾಣಿಗಳ ಸರ್ವವಿಧದ ಆಧಿಪತ್ಯವುಳ್ಳವರೆಂದು ಹೇಳುತ್ತವೆ. ಈ ಅಧಿಪತ್ಯಕ್ಕೆ ಇವರೇ ಅರ್ಹರು — ಅನ್ಯರಾರೂ ಅಲ್ಲ. ಏಕೆಂದರೆ ಸಮಸ್ತ ಪಾಪಲೇಪ ರಹಿತರಾದ ಇವರು ಸರ್ವಸಲ್ಲಕ್ಷಣಗಳಿಂದ ಪೂರ್ಣರಾಗಿ, ಮುಕ್ತಪ್ರಾಯರಾಗಿದ್ದು, ಜಗನ್ನಿಯಾಮಕರಾಗಿರಲು ಸಮರ್ಥರಾಗಿದ್ದಾರೆ. ಇವರು, ಗಾಯತ್ರ್ಯುಪಾಸನೆಯಲ್ಲಿ ಮುಖ್ಯಾಧಿಕಾರಿಗಳಾದ್ದರಿಂದ, ಸಮಸ್ತ ಪಾಪಗಳ ಅಲೇಪರೂಪದ ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದಾರೆ. *'ಸಮಸ್ತ ಲಕ್ಷಣೈಃ ಪೂರ್ಣಾಃ ಸಮಸ್ತ ಜಗದೀಶ್ವರಾಃ। ಮುಕ್ತಪ್ರಾಯಾಃ ಸದಾ....।'* ಎಂದು (ಸ.ರ.ಮಾ) ಮತ್ತು *'ಬ್ರಹ್ಮಣೋಪಾಸಿತೋ ದದ್ಯಾತ್ ಗಾಯತ್ರ್ಯಾ ಪುರುಷೋತ್ತಮಃ। ಅಲೇಪಂ ಸರ್ವಪಾಪೇಭ್ಯಃ.....'* ಇತ್ಯಾದಿ (ಬೃ.ಭಾ.) ವಾಕ್ಯಗಳು ಉಕ್ತಾರ್ಥವನ್ನು ನಿರೂಪಿಸುತ್ತವೆ. ಶ್ರೀಮುಖ್ಯಪ್ರಾಣನು ಜೀವರಿಗೆ ಸರ್ವಪ್ರಕಾರದಿಂದ ಸತ್ತಾಪ್ರದನು. ಜೀವನು ದೇಹದಲ್ಲಿರಬೇಕಾದರೆ ಅಲ್ಲಿ ಶ್ರೀಮುಖ್ಯಪ್ರಾಣನಿರಲೇಬೇಕು. ಆತನಿಲ್ಲದಿರೆ ಶ್ರೀಹರಿಯೂ ಕ್ಷಣಮಾತ್ರ ಇರನು. ಶ್ರೀಹರಿಯು 'ಪರಿಸರಪದ್ಧತಿ' ಎನಿಸುವನು. *'ಪರಿಸರಃ ಪ್ರಾಣಃ ಪದ್ಧತಿಃ ಮಾರ್ಗಃ ಯಸ್ಯ ಸಃ ಪರಿಸರಪದ್ಧತಿಃ'*— ಮುಖ್ಯಪ್ರಾಣನು ದೇಹಪ್ರವೇಶ ಮಾರ್ಗದಲ್ಲಿ ಶ್ರೀಹರಿಯ ಮುಂದೆ ಹೋಗುವನಾದ್ದರಿಂದ ಶ್ರೀಹರಿಯು 'ಪರಿಸರ ಪದ್ಧತಿ'ಯು. *'ಕಸ್ಮಿನ್ನಹಮುತ್ಕ್ರಾಂತೇ ಉತ್ಕ್ರಾಂತೋ ಭವಿಷ್ಯಾಮಿ' 'ಕಸ್ಮಿನ್ವಾಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ಸಪ್ರಾಣಮಸೃಜತ'* ಎಂಬ ಶ್ರುತಿಯು, ಈ ದೇಹದಿಂದ ಯಾರು ಹೊರಟರೆ ನಾನು ಹೊರಡುವೆನೋ, ಯಾರು ದೇಹದಲ್ಲಿ ನಿಂತರೆ ನಾನೂ ನಿಲ್ಲುವೆನೋ ಅಂಥವನನ್ನು ಸೃಷ್ಟಿಸುವೆನೆಂದು ಸಂಕಲ್ಪಿಸಿ, ಪ್ರಾಣನನ್ನು ಸೃಷ್ಟಿಸಿದನೆಂದು ಹೇಳುತ್ತದೆ. ಇದರಿಂದ ಜೀವದೇಹವನ್ನು ಶ್ರೀಹರಿಯು, ಜೀವಸ್ಥತನಾಗಿ ಪ್ರವೇಶಿಸಲು,

ಶ್ರೀಮುಖ್ಯಪ್ರಾಣನು ಮಾರ್ಗಪ್ರದರ್ಶಕನಾಗಿ ಹೋಗುವನೆಂದು ಸಿದ್ಧವಾಗುತ್ತದೆ. ದೇಹಪ್ರವೇಶದ ನಂತರ ಅಲ್ಲಿರಲು ನಡೆಯಬೇಕಾದ ಶ್ವಾಸೋಚ್ಛ್ವಾಸಗಳೂ ಮುಖ್ಯ-ಪ್ರಾಣಾಧೀನಗಳೇ. ಶ್ವಾಸೋಚ್ಛ್ವಾಸಗಳು ಈತನ ಹಂಸಮಂತ್ರಜಪಗಳು—ಜಪವು ನಿಂತರೆ ಜೀವನಿಗೆ ದೇಹದಲ್ಲಿರುವಿಕೆಯೇ ನಿಲ್ಲುವುದು—ಮೃತನಾಗುವನು. *'ಹಂಸಃ ಸೋऽಹಂ ಸ್ವಾಹಾ'* ಎಂಬುದು ಹಂಸಮಂತ್ರವು. 'ಹಂಸಃ' ವಿರಾಮಕಾಲ; 'ಸೋऽಹಂ' ಉಚ್ಛ್ವಾಸಕಾಲ; 'ಸ್ವಾಹಾ' ನಿಃಶ್ವಾಸಕಾಲ. ಹಂಸಃ—ದೋಷ ದೂರನೂ (ಮಂಗಳ ಸ್ವರೂಪನೂ) ಭಕ್ತರ ದೋಷನಾಶಕನೂ ಆದ ಶ್ರೀಹರಿಯು, ಸೋऽಹಂ—ಆ ಹಂಸನೇ ನನ್ನ ಅಂತರ್ಯಾಮಿಯು, ಸ್ವಾಹಾ—ಆತನಿಗೆ ಆತ್ಮ-ನಿವೇದನರೂಪದ ಅರ್ಪಣಾನಮಸ್ಕಾರವು; 'ನನ್ನ ಅಂತರ್ಯಾಮಿಯಾದ ಹಂಸನನ್ನು ಶರಣುಹೊಂದಿರುವೆನು' ಎಂದರ್ಥ. *'ಅಂತರ್ಯಾಮಿಣಮೀಶೇಶಂ ಅಪೇಕ್ಷ್ಯಾಹಂತ್ವಮಿತ್ಯಪಿ। ಇಮೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇऽಪಿ ವಸ್ತುಷು॥'* (ಭಾಷ್ಯ) ಎಂದರೆ ಅಹಂ, ತ್ವಂ ಶಬ್ದಗಳು ಭಿನ್ನವಸ್ತುವಾಚಕಗಳಾದರೂ ಅಂತರ್ಯಾಮಿ-ಯನ್ನು ಹೇಳಲು ಪ್ರಯೋಗಿಸಲ್ಪಡುತ್ತವೆ. ಈ ಪ್ರಮಾಣದಿಂದ ಹಂಸಮಂತ್ರದ ಉಕ್ತಾರ್ಥವು ಸಾಧುವಾದುದು. ಸ್ವರೂಪ, ಲಿಂಗ, ಅನಿರುದ್ಧ ಮತ್ತು ಸ್ಥೂಲಗಳೆಂಬ (ಪ್ರತಿಜೀವಗಿರುವ) ನಾಲ್ಕೂ ದೇಹಗಳಲ್ಲಿ ಶ್ರೀಮುಖ್ಯಪ್ರಾಣನು ಒಂದೊಂದು ರೂಪದಿಂದಿದ್ದು ಈ ನಾಲ್ಕು ದೇಹಗಳಿಂದಾಗುವ ಸಕಲ ವ್ಯಾಪಾರಗಳನ್ನೂ ನಡೆಸುತ್ತಾ, ಸರ್ವಚೇಷ್ಟಾಪ್ರದನಾದ್ದರಿಂದ ಪ್ರಾಣಶಬ್ದವಾಚ್ಯನಾಗಿದ್ದಾನೆ. ಅಧ್ಯಾತ್ಮಾದಿ-ಗಳಲ್ಲಿ ಸಹ ಮುಖ್ಯಪ್ರಾಣನೇ ಚೇಷ್ಟಕನು. ಈ ಪ್ರಮೇಯದ ಹೆಚ್ಚಿನ ವಿಸ್ತಾರವನ್ನು ವಾಕ್ಯ ೨, ಪ್ರ.ವಿ.(೪)ರಲ್ಲಿ ಕಾಣುತ್ತೀರಿ. *'ತಸ್ಮಿನ್ನೋತಮಿದಂ ಸರ್ವಂ ಚೇತನಾ-ಚೇತನಾತ್ಮಕಂ। ಯಥಾ ಸೂತ್ರೇ ಮಣಿಗಣಾಃ ರಥನಾಭಾವರಾ ಯಥಾ॥'* (ಭಾಗ.ತಾ.)—ಪೋಣಿಸಲಾದ ಸೂತ್ರದಲ್ಲಿ ಮಣಿಗಳ ಸಮೂಹದಂತೆಯೂ, ರಥ-ನಾಭಿಯಲ್ಲಿ (ಗುಂಭದಲ್ಲಿ) ಚಕ್ರದ ಅರಗಳಂತೆಯೂ, ಮುಖ್ಯಪ್ರಾಣನು ಈ ಚೇತನಾಚೇತನಾತ್ಮಕ ಜಗತ್ತನ್ನು ಧರಿಸಿರುವನು—ಆದರಿಂದ ಧರ್ಮನೆನಿಸುವನು. ಈತನು, *'ಪದಪ್ರದಶ್ಚ ದೇವಾನಾಂ ತತ್ತಚ್ಛಕ್ತಿಪ್ರದಸ್ತಥಾ।'* ದೇವತೆಗಳಿಗೆ ಅವರವರ ಅಧಿಕಾರ ಸ್ಥಾನಗಳನ್ನಿತ್ತು, ಆಯಾ ಕಾರ್ಯನಿರ್ವಾಹಕಶಕ್ತಿಗಳನ್ನು ಕೊಡುವುದರಿಂದ ಸಹ ಧರ್ಮನೆನಿಸುತ್ತಾನೆ. ಶ್ರೀಮುಖ್ಯಪ್ರಾಣನೇ ಸರ್ವ ವಿಧದ ಧಾರಣಪ್ರದನೆಂಬಲ್ಲಿ ವಾಕ್ಯ ೨, ಪ್ರ.ವಿ. (೪-೫) ನ್ನು ನೋಡಿರಿ.

(೨) ನಿತ್ಯಾನಂದಸ್ಥಿತಿರೂಪವಾದ ಮೋಕ್ಷವನ್ನು ಹೊಂದಲು ಶ್ರೀವಿಷ್ಣು ಪ್ರಸಾದವೇ ಪ್ರಧಾನಸಾಧನವು. 'ಏನಂ ಮೋಚಯಾಮಿ'—ಈ ಜೀವನನ್ನು ಸಂಸಾರದಿಂದ

ಬಿಡುಗಡೆ ಮಾಡುತ್ತೇನೆಂಬ ಶ್ರೀಹರಿಸಂಕಲ್ಪಕ್ಕೆ ಪಾತ್ರನಾಗಲು ಆತನಲ್ಲಿ ದೊರಕಿಸಿ-ಕೊಳ್ಳುವ ಶ್ರೇಷ್ಠಭಕ್ತಿಯೇ ಸಾಧನವು. ವಸ್ತುಗಳ ಸದ್ಗುಣಗಳ ಜ್ಞಾನದಿಂದ ಯಾವು-ದೊಂದು ವಸ್ತುವಿನಲ್ಲಿ ಪ್ರೇಮವುಂಟಾಗುತ್ತದೆ. ಶ್ರೀಹರಿಯಲ್ಲಿ ಮಾಡುವ ಭಕ್ತಿಯೂ ಪ್ರೇಮರೂಪವಾದುದೇ. ಅದು ನಿರಂತರವೂ ದೃಢವೂ ಆಗಿರಬೇಕು. ಶ್ರೀಹರಿಯು, ಅಚಿಂತ್ಯ ಶಕ್ತಿಯುತನೂ, ಸ್ವತಂತ್ರನೂ, ಕಾರುಣ್ಯ ಔದಾರ್ಯಾದಿ ಗುಣಗಳಿಂದ ಪೂರ್ಣನೂ, ಸರ್ವಜ್ಞನೂ, ಸರ್ವಸಮನೂ, ಭಕ್ತವತ್ಸಲನೂ, ಕ್ಷಮಾವಂತನೂ ಆಗಿರುವನೆಂಬ ಜ್ಞಾನವು ದೃಢವಾಗಿ, ಆತನಲ್ಲಿ ನಿಷ್ಕಾರುಣ್ಯ, ವೈಷಮ್ಯ, ಅಜ್ಞಾನಾದಿ ಯಾವ ದೋಷಗಳ ಲೇಶವೂ ಎಂದೂ ಇಲ್ಲವೆಂಬ ನಿಶ್ಚಯವೂ ಉಂಟಾದರೆ, ಆತನ ಪರಮ ಪ್ರಸಾದಕ್ಕೆ ಕಾರಣವಾಗುವ ಶ್ರೇಷ್ಠಭಕ್ತಿಯು ಲಭಿಸುತ್ತದೆ. ಜ್ಞಾನ-ಪೂರ್ವಕವಾದ ಪ್ರೇಮವೇ ಭಕ್ತಿಯು. ದುಃಖಾಜ್ಞಾನಾದಿ ದೋಷದೂರನಾಗಿ, ಭಕ್ತಿ-ಜ್ಞಾನಗಳೇ ಮೂರ್ತಿವೆತ್ತಂತಿರುವವನು ಶ್ರೀಮುಖ್ಯಪ್ರಾಣನು. ಇತರ ಸರ್ವಜೀವರ ಭಕ್ತಿಜ್ಞಾನಗಳ ನಿಯಾಮಕನು. ಶ್ರೀವಿಷ್ಣುಪ್ರಸಾದಕ್ಕೆ ಸಾಧನವಾದ ಭಕ್ತಿಜ್ಞಾನಗಳು ಈತನಿಂದಲೇ ದೊರೆಯಬೇಕಲ್ಲದೇ ಅನ್ಯಮಾರ್ಗವಿಲ್ಲ. ತನ್ನನ್ನು ಶರಣು ಹೊಂದಿ-ದವರಿಗೆ ಈ ಗುಣಗಳನ್ನು ತಪ್ಪದೇ ಅನುಗ್ರಸುತ್ತಾನೆ. *'ಸತ್ ಜ್ಞಾನಾನಂದ ಭಕ್ತ್ಯಾದಿ ಗುಣಮಾನೀ ಸ ಏಕಲಃ। ಆನಂದಾನುಭವಸ್ಯಾಪಿವಿಮುಕ್ತೇರಪಿ ಸ ಪ್ರಭುಃ॥'* (ಸ.ರ.ಮಾ) ಎಂದರೆ, ಮೋಕ್ಷಸಾಧಕ ಭಕ್ತ್ಯಾದಿ ಸಕಲ ಸದ್ಗುಣಗಳಿಗೂ, ಮೌಕ್ತಿಕ ಆನಂದಾನುಭವಕ್ಕೂ ಮುಖ್ಯಪ್ರಾಣನು, ನಿಯಾಮಕನಾಗಿರುವ ಮುಖ್ಯಾಭಿಮಾನಿ-ಯೆಂದು ಹೇಳಲಾಗಿದೆ. *'ವಿಷ್ಣುರ್ಹಿಮೋಕ್ಷಸ್ಯ ದಾತಾ ವಾಯುಶ್ಚ ತದನುಜ್ಞಯಾ'*— ವಿಷ್ಣುವೇ ಮೋಕ್ಷದಾತನು; ಆತನ ಅನುಜ್ಞೆಯಿಂದ ಶ್ರೀವಾಯುದೇವನೂ ಮುಕ್ತಿಪ್ರದನೆಂದೂ ಹೇಳಲಾಗಿದೆ. ಮುಕ್ತಿಪ್ರದಭಕ್ತಿಯನ್ನು ಕೊಡುವವನೂ, ಶ್ರೀಹರಿಯೇ ಕೊಟ್ಟಿರುವ ಅಧಿಕಾರದಿಂದ ಮುಕ್ತಿಯನ್ನು ಕೊಡುವಾತನಾದ್ದರಿಂದ, ಶ್ರೀಮುಖ್ಯಪ್ರಾಣನು 'ಭಕ್ತಿ' ಶಬ್ದವಾಚ್ಯನೇ ಸರಿ.

ಮುಕ್ತಿಪ್ರದಭಕ್ತಿಯ ಸ್ವರೂಪವನ್ನು, ಮಾಹಾತ್ಮ್ಯಜ್ಞಾನಪೂರ್ವಕ ಸದೃಢಪ್ರೇಮ-ವೆಂದು ನಿರೂಪಿಸಲಾಯಿತಷ್ಟೆ. ಭಕ್ತಿಯ ಪ್ರಕಾರಗಳನ್ನು ತಿಳಿದರೆ, ಸಮಾಗಮ-ಯೋಗ್ಯರಾದ ಸಜ್ಜನರ ಭಕ್ತಿಭಾವವನ್ನು ಗುರ್ತಿಸಲು ಸಹಾಯಕವಾಗುವುದಲ್ಲದೇ ಸ್ವಯಂ ವಿವಿಧ ಭಕ್ತಿಭಾವನೆಗಳಿಂದ ಆನಂದಿಸಬಹುದು. ಭಕ್ತಿಯು ನವವಿಧವೆಂದು ಹೇಳಲಾಗಿದೆ. ಅವು ಯಾವುವೆಂದರೆ:

*'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ। ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ॥'* (ಭಾಗವತ) ಹರಿಕಥೆಗಳ (ಮಹಿಮೆಗಳ) ಶ್ರವಣ,

ಹರಿಗುಣಗಳ ಕೀರ್ತನೆ, ಹರಿಸ್ಮರಣೆ, ಹರಿಪಾದಸೇವೆ, ಹರಿಮೂರ್ತಿಗಳ ಪೂಜೆ, ಹರಿನಮಸ್ಕಾರ, ಹರಿದಾಸನೆಂಬ ನಿತ್ಯಭಾವನೆ, ಹರಿಯೇ ನಿತ್ಯಸಖನೆಂಬ ಅನು-ಸ್ಮರಣೆ, ಆತ್ಮನಿವೇದನ (ಸ್ವಸ್ವರೂಪವು ಸಹ ಶ್ರೀಹರಿಯ ನಿತ್ಯಾಧೀನವೆಂದು ತಿಳಿದು ಸ್ವತಂತ್ರ ಕರ್ತೃತ್ವಾಭಿಮಾನವನ್ನು ಪೂರ್ಣವಾಗಿ ತ್ಯಜಿಸುವುದು—ತನ್ನ ಸ್ವರೂಪವನ್ನೇ ಶ್ರೀಹರಿಯಲ್ಲಿ ಅರ್ಪಿಸುವುದು—ಆತ್ಮಸಮರ್ಪಣೆ), ಇವು ಒಂಬತ್ತು ವಿಧವಾದ ಭಕ್ತಿಗಳು. ಯದ್ಯಪಿ, ಈ ಎಲ್ಲವೂ ವಿಷ್ಣುಪ್ರಸಾದಪ್ರಾಪ್ತಿಗೆ ಎಲ್ಲರಿಗೂ ಅವಶ್ಯಕ. ಆದರೂ ಇವುಗಳಲ್ಲಿ ಒಂದು ಅಥವಾ ಒಂದಕ್ಕಿಂತ ಹೆಚ್ಚಾದ ಭಕ್ತಿಪ್ರಕಾರಗಳು ಇತರ ಭಕ್ತಿಗಳಿಗಿಂತ ಅಧಿಕವಾಗಿರಬಹುದು. ಜೀವರ ಯೋಗ್ಯತೆಗಳನ್ನನುಸರಿಸಿ, ಭಿನ್ನ ಜೀವರಲ್ಲಿ ಭಿನ್ನಪ್ರಕಾರದ ಭಕ್ತಿಯ ಪ್ರಾಚುರ್ಯವಿರುತ್ತದೆ. ಈ ಎಲ್ಲ ವಿಧ ಭಕ್ತಿಗಳು ಶುದ್ಧವಾಗಿರಬೇಕು. ಶುದ್ಧಭಕ್ತಿಯೆಂದರೆ ನವವಿಧ ದ್ವೇಷಗಳ ಸ್ಪರ್ಶವಿಲ್ಲದಿರಬೇಕು. ನವವಿಧದ್ವೇಷಗಳಾವುವೆಂದರೆ: *'ಜೀವಾಭೇದೋನಿರ್ಗುಣತ್ವಂ ಅಪೂರ್ಣಗುಣತಾ ತಥಾ। ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ॥ ಪ್ರಾದುರ್ಭಾವ ವಿಪರ್ಯಾಸಃ ತದ್ಭಕ್ತದ್ವೇಷ ಏವ ಚ। ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ॥'* (ಭಾ-ತಾ) ಎಂದರೆ (೧) ಜೀವನು ಶ್ರೀಹರಿಯಿಂದ ಅಭಿನ್ನನೆಂದು ತಿಳಿಯುವುದು; (೨) ಶ್ರೀಹರಿಯು (ಆನಂದಾದಿ) ಗುಣಶೂನ್ಯನೆಂದು ತಿಳಿಯುವುದು; (೩) ಗುಣಗಳಿದ್ದರೂ ಅವು ಅಪೂರ್ಣಗಳೆಂದು ತಿಳಿಯುವುದು; (೪) ರಮಾ, ಬ್ರಹ್ಮ, ರುದ್ರಾದಿಗಳಿಗೆ ಶ್ರೀಹರಿಸಾಮ್ಯವನ್ನು ತಿಳಿಯುವುದು; (೫) ಅಥವಾ ಅವರೆಲ್ಲರೂ ಅಥವಾ ಯಾರೊಬ್ಬರು ಶ್ರೀಹರಿಸಮರೆಂದು ತಿಳಿಯುವುದು; (೬) ಶ್ರೀಹರಿಯ ರೂಪಗಳಲ್ಲಿ ಪರಸ್ಪರವಾಗಿ ಅಥವಾ ಪ್ರತಿರೂಪಕ್ಕೂ ಅದರ ಕರಚರಣಾದಿ ಅವಯವಗಳಿಗೂ, ಗುಣಕ್ರಿಯಾದಿಗಳಲ್ಲಿ ಪರಸ್ಪರ ಅಥವಾ ಶ್ರೀಹರಿಯಿಂದ ಭೇದವನ್ನು ತಿಳಿಯುವುದು; (೭) ಶ್ರೀಹರಿಯ ಅವತಾರಗಳನ್ನು ಮನುಷ್ಯಾದಿ ಪ್ರಾಕೃತರೂಪಗಳೆಂದು ತಿಳಿಯುವುದು; (೮) ಹರಿಭಕ್ತರನ್ನು ದ್ವೇಷಿಸುವುದು; (೯) ವೇದಾದಿ ಪ್ರಮಾಣಗಳನ್ನು ನಿಂದಿಸುವುದು (ತಿರಸ್ಕರಿಸುವುದು—ಅಪ್ರಮಾಣಗಳೆಂದು ತಿಳಿದು ವಾದಿಸುವುದು); ಇವು ಒಂಬತ್ತು ವಿಧ ಭಾವನೆಗಳು ಶ್ರೀಹರಿದ್ವೇಷಗಳೆನಿಸು-ತ್ತವೆ. ದ್ವೇಷಸಂಪರ್ಕವಿಲ್ಲದ ಶುದ್ಧ ಭಕ್ತಿಪ್ರದನಾದ ಶ್ರೀವಾಯುದೇವರು ಭಕ್ತಿಶಬ್ದ-ವಾಚ್ಯರೂ ಆಗಿರುವರು.

(೩) ಶ್ರೀವಾಯುದೇವರೂ ಭಕ್ತವತ್ಸಲರು—ಕೃಪಾಪೂರ್ಣರು, ಆದರೆ ಶ್ರೀಹರಿ-ಯಲ್ಲಿ ಈ ಗುಣಗಳು ಅನಂತಮಡಿ ಅಧಿಕವಾಗಿವೆ. ಶ್ರೀಹರಿಯ ಮುಖ್ಯ ಪ್ರತಿ-ಬಿಂಬರಾದ್ದರಿಂದ ಶ್ರೀವಾಯುದೇವರಲ್ಲಿ ಶ್ರೀಹರಿಗುಣಗಳ ಸಾದೃಶ್ಯವು ಎಲ್ಲ ಜೀವರಿ-

ಗಿಂತ ಅಧಿಕವಾಗಿದೆ. ..ೀಗಿದ್ದರೂ ಭಕ್ತಾಪರಾಧಸಹಿಷ್ಣುತೆಯಲ್ಲಿ ಶ್ರೀಹರಿಯಷ್ಟು ಔದಾರ್ಯವನ್ನು ಇವರಲ್ಲಿ ಅಪೇಕ್ಷಿಸಲಾಗದು. ಭಕ್ತರನ್ನು ಉಗ್ರವಾದ ಪರೀಕ್ಷೆಗೊಳ-ಪಡಿಸಿ, ನಿಷ್ಠುರತೆಯಿಂದ ಅವರ ಯೋಗ್ಯತೆಯನ್ನು ನಿರ್ಧರಿಸಿ, ಶ್ರೀಹರಿಯಲ್ಲಿ ಪ್ರಸಾದಾರ್ಥವಾಗಿ ಅವರ ಪರವಾಗಿ ವಿಜ್ಞಾಪಿಸಿಕೊಳ್ಳುತ್ತಾರೆ. ಶ್ರೀವಾಯುದೇವರು ರುದ್ರಾದಿಗಳಂತೆ ಶೀಘ್ರಪ್ರಸನ್ನರಾಗಿ ಐಹಿಕಾದಿ ವರಗಳನ್ನು ಕೊಡುವವರಲ್ಲ. ಈ ವೈಲಕ್ಷಣ್ಯವನ್ನು ಮನಸ್ಸಿನಲ್ಲಿಟ್ಟು, ವಾಕ್ಯ ೨, ಪ್ರ.ವಿ. (೫) ಮತ್ತು ವಾಕ್ಯ ೨೫, ಪ್ರ.ವಿ. (೫) ಮತ್ತು ವಾಕ್ಯ ೧೧, ಪ್ರ.ವಿ. (೧)ನೇ ಭಾಗಗಳನ್ನು ಇಲ್ಲಿ ನೋಡಿಕೊಳ್ಳಬಹುದು.

**(೪) ನಮ್ಮೆಲ್ಲರ ದೇಹಗಳ ತತ್ವಗಳು ೨೪; ೨೫-೨೬ನೇ ತತ್ವಗಳೇ ಜೀವ-ಪರಮಾತ್ಮರು.** ದೇಹೇಂದ್ರಿಯಾದಿಗಳ ಅಭಿಮಾನಿಗಳಾದ ತಾತ್ವಿಕ ದೇವತೆಗಳನ್ನೂ ತಾತ್ವಿಕ ಅಸುರರನ್ನೂ ತಿಳಿಯಬೇಕಾದುದು ಆವಶ್ಯಕ. ಈ ವಾಕ್ಯದಲ್ಲಿ ಶ್ರೀಮುಖ್ಯ-ಪ್ರಾಣನು, ತಾತ್ವಿಕದೇವತೆಗಳ ಪ್ರೇರಕನೂ, ತಾತ್ವಿಕ ಅಸುರಭಂಜಕನೂ ಎಂದು ಹೇಳಲಾಗಿದೆ. ಸುಜೀವರಲ್ಲಿದ್ದು ದುಷ್ಕರ್ಮ ಪ್ರಚೋದಕರಾದ ತಾತ್ವಿಕ ಅಸುರರನ್ನು ನಿಗ್ರಹಿಸಿ, ದೇವತೆಗಳ ಕೈ ಮೇಲಾಗುವಂತೆ ಶ್ರೀಮುಖ್ಯಪ್ರಾಣನು ತನ್ನನ್ನಾಶ್ರಯಿಸಿದ ಸುಜೀವರನ್ನು ಅನುಗ್ರಹಿಸುತ್ತಾನೆ. ಭೂಮಿ, ಜಲ, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳಿಗೆ ಕ್ರಮದಿಂದ, ಧರಣೀದೇವಿ, ವರುಣ, ಅಗ್ನಿ, ಪ್ರವಹವಾಯು ಮತ್ತು ಗಣಪತಿ ಇವರುಗಳೂ; ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ ಪಂಚತನ್ಮಾತ್ರೆಗಳಿಗೆ, ಸೌಪರ್ಣಿ (ಗರುಡಪತ್ನಿ), ವಾರುಣಿ (ಶೇಷಪತ್ನಿ) ಮತ್ತು ಉಮಾ (ರುದ್ರಪತ್ನಿ), ಈ ಮೂವರೂ; ಹಸ್ತ, ಪಾದ, ವಾಕ್, ಪಾಯು (ಗುದ) ಮತ್ತು ಉಪಸ್ಥ (ಗುಹ್ಯ)ಗಳೆಂಬ ಪಂಚ ಕರ್ಮೇಂದ್ರಿಯಗಳಿಗೆ, ಕ್ರಮದಿಂದ, ಇಂದ್ರ, ಜಯಂತ, ಅಗ್ನಿ, ಯಮ ಮತ್ತು ದಕ್ಷ ಇವರುಗಳೂ; ಚಕ್ಷು, ಶ್ರೋತ್ರ, ತ್ವಕ್, ಘ್ರಾಣ ಮತ್ತು ರಸನಗಳೆಂಬ ಪಂಚ ಜ್ಞಾನೇಂದ್ರಿಯಗಳಿಗೆ ಕ್ರಮದಿಂದ ಸೂರ್ಯ, ಚಂದ್ರ, ಕುಬೇರ, ಅಶ್ವಿನೀದೇವತೆಗಳು ಮತ್ತು ವರುಣ ಇವರುಗಳೂ; ಮನಸ್ಸು ಮತ್ತು ಅಹಂಕಾರ ತತ್ವಗಳಿಗೆ, ಗರುಡ, ಶೇಷ, ರುದ್ರರೂ; ಮಹತ್ತತ್ವಕ್ಕೆ ಮತ್ತು ಅದರ ಪ್ರಭೇದವಾದ ವಿಜ್ಞಾನತತ್ವ—ಬುದ್ಧಿತತ್ವಕ್ಕೆ ಬ್ರಹ್ಮವಾಯುಗಳು ಮತ್ತು ಸರಸ್ವತೀ ಭಾರತೀಯರೂ; ಅವ್ಯಕ್ತತತ್ವಕ್ಕೆ—ರಮಾದೇವಿಯೂ; (ಅವ್ಯಕ್ತತತ್ವದ ಪ್ರಭೇದ-ಗಳೆನ್ನಬಹುದಾದ ಸತ್ವ, ರಜ, ತಮಗಳಿಗೆ ಕ್ರಮದಿಂದ ರಮಾದೇವಿಯ ಶ್ರೀ, ಭೂ, ದುರ್ಗಾನಾಮಕರೂಪಗಳೂ) ಅಭಿಮಾನಿಗಳು. ಅವ್ಯಕ್ತತತ್ವವನ್ನುಳಿದು ಇವರ ತತ್ವಗಳಿಗೆ ಅಭಿಮಾನಿಗಳಾದ ಎಲ್ಲ ದೇವತೆಗಳಿಗೂ, ನಿಯಾಮಕನಾದ ಪ್ರಭುವು ಶ್ರೀಮುಖ್ಯಪ್ರಾಣನೇ. ವಾಯು ಬ್ರಹ್ಮರು ಸಮರು. ಬ್ರಹ್ಮನೂ ತತ್ವಾಭಿಮಾನಿಗಳ

ಸ್ವಾಮಿಯೇ. ಸತ್ಯಲೋಕಾಧಿಪತ್ಯದಲ್ಲಿರುವ ಬ್ರಹ್ಮನು ಜೀವರಿಗೆ ಅವರವರ ಅದೃಷ್ಟಾನುಸಾರವಾದ ಸ್ಥೂಲದೇಹಗಳನ್ನು ಹೊಂದಿಸುವುದೆಂಬ ಸೃಷ್ಟಿಕಾರ್ಯದಲ್ಲಿ ವಿಶೇಷ ನಿರತನಾಗಿರುತ್ತಾನೆ. ಆ ದೇಹಗತ ತತ್ವಗಳನ್ನು ನಿಯಮಿಸುವ ಅಭಿಮಾನಿ-ದೇವತೆಗಳ ವಿಶೇಷ ನಿಯಾಮಕನಾಗಿ ದೇಹದಲ್ಲಿರುವ ಶ್ರೀಮುಖ್ಯಪ್ರಾಣನೇ ಶ್ರೀವಾಯುದೇವರು. ವಿಜ್ಞಾನ-ಮಹತ್ತತ್ವಗಳನ್ನು ಬಿಟ್ಟು ಉಳಿದ ತತ್ವಗಳನ್ನು ಆಶ್ರಯಿಸಿ (ಅಧಿಷ್ಠಾನಮಾಡಿಕೊಂಡು ಅಲ್ಲಿದ್ದು) ಕಾಮ, ಕ್ರೋಧಾದಿಗಳ ಉತ್ಪಾದ-ಕರೂ, ದುಷ್ಕರ್ಮ ಪ್ರೇರಕರೂ ಆದ ದೈತ್ಯಾಭಿಮಾನಿಗಳೂ ಈ ದೇಹದಲ್ಲಿರುವರು. ಈ ತಾತ್ವಿಕ ದೇವದೈತ್ಯರುಗಳು ಈಶ್ವರಾಚಿಂತ್ಯಶಕ್ತಿಯಿಂದ, ಅನಂತಾಂಶಗಳಿಂದ ವಿಭಕ್ತರಾಗಿ ಪ್ರಾಣಿದೇಹಗಳಲ್ಲಿದ್ದು ಜೀವಪ್ರೇರಕರಾಗಿರುತ್ತಾರೆ. ಈ ಪ್ರೇರಕವ್ಯಾಪಾರ-ದಿಂದ ಅವರವರ ಮೂಲರೂಪಗಳಿಗೆ ಆಗಬೇಕಾದ ಸಾಧನೆಗಳಾಗುತ್ತವೆ. ತತ್ವಾಭಿ-ಮಾನಿದೇವತೆಗಳ ಸಾಧನೆಯಿಂದ, ಮೊದಲೇ ಅಪರೋಕ್ಷಿಗಳಾದ ಅವರಿಗೆ, ಅಪರೋಕ್ಷಸ್ಫುಟತೆಯೂ ಶ್ರೀಹರಿಯ ಬಹುರೂಪಗಳ ಸಾಕ್ಷಾತ್ಕಾರವೂ, ಮೋಕ್ಷದಲ್ಲಿ ಆನಂದಾತಿಶಯವೂ ದೊರೆಯುತ್ತವೆ. ತಾತ್ವಿಕದೈತ್ಯರಿಗೆ ಅಧಿಕ ಹರಿದ್ವೇಷಕ್ಕೂ, ಮೋಕ್ಷದಲ್ಲಿ ದುಃಖಾತಿಶಯಕ್ಕೂ ಈ ಪ್ರೇರಕವ್ಯಾಪಾರವು ಹೇತುವಾಗುತ್ತದೆ. ದೇವತೆಗಳು, *'ಈಶ್ವರಾಚಿಂತ್ಯಶಕ್ತ್ಯೈವ ವಿಭಕ್ತಾಂಶೈರನಂತಕೈಃ। ಪ್ರೇರಕಾಃ ಸರ್ವ-ಜೀವಾನಾಂ ಸ್ವೋತ್ತಮೈಃ ಪ್ರೇರಿತಾಃ ಸದಾ॥'* (ಸ.ರ.ಮಾ.) ದೇಹಗತ ಮನ ಮೊದಲಾದ ಇಂದ್ರಿಯಗಳಲ್ಲಿದ್ದು, ಸ್ವೋತ್ತಮರಿಂದ ಪ್ರೇರಿತರಾಗಿ, ಜೀವನ ಪೂರ್ವ-ಸಂಸ್ಕಾರ, ಅದೃಷ್ಟಾದಿಗಳನ್ನು ತಿಳಿದು ಆಯಾ ಕಾಲದಲ್ಲಿ ಯೋಗ್ಯ ಪುಣ್ಯಪಾಪಾದಿ-ಕರ್ಮಗಳಲ್ಲಿ ಪ್ರೇರಿಸುತ್ತಾರೆ. ಭಗವದಾಜ್ಞೆಯನ್ನು ಪರಿಪಾಲಿಸುತ್ತಿರುವೆವೆಂಬ ನಿತ್ಯ-ವಾದ ಅನುಸಂಧಾನ ಉಳ್ಳವರಾಗಿ, ಪ್ರೇರಕಕಾರ್ಯದಲ್ಲಿ ರಾಗದ್ವೇಷರಹಿತರಾಗಿ-ರುವ ಕಾರಣ, ಅವರಿಗೆ ಪಾಪಗಳ ಲೇಪವು ಸರ್ವಥಾ ಇಲ್ಲ; ಪುಣ್ಯಫಲವನ್ನು ಯಥಾಯೋಗ್ಯವಾಗಿ (ಜೀವನಿಗಿಂತ ಅಧಿಕವಾಗಿ) ಹೊಂದಿ ಈ..ಂದೆ ಹೇಳಿದಂತೆ ತಮ್ಮ ಸಾಧನೆಯನ್ನು ಮಾಡಿಕೊಳ್ಳುತ್ತಾರೆ. ಪಾಪಪ್ರೇರಕರಾದರೂ, ದೇವತೆಗಳು ತಾತ್ವಿಕ ದೈತ್ಯರದ್ವಾರಾ ಪ್ರೇರಕರಾಗಿರುವುದರಿಂದ, ಅವರಿಗೆ ಅವರ ಲೇಪವಿಲ್ಲ. ತಾತ್ವಿಕ ದೈತ್ಯರಿಗೆ..ಂದೆ ಹೇಳಿದಂತೆ ಸಾಧನೆಯಾಗುತ್ತದೆ. ಜೀವಯೋಗ್ಯತೆ ಮತ್ತು ಅದೃಷ್ಟಾದಿಗಳ ಜ್ಞಾನವು ತಾತ್ವಿಕದೈತ್ಯರಿಗೆ ಸಾಮಾನ್ಯವಾಗಿ ಇರುವುದಿಲ್ಲ—ಅವರು ದೇವತೆಗಳಂತೆ ಮಹಾಜ್ಞಾನವುಳ್ಳವರಲ್ಲ—ಅದಕ್ಕೆ ಅರ್ಹರೂ ಅಲ್ಲ. ತಾತ್ವಿಕದೇವತೆ-ಗಳ ಕಾರ್ಯನಿರ್ವಹಣೆಯು..ೀಗೆ ನಿರೂಪಿಸಲಾಗಿದೆ:

*'ವಾಸುದೇವಾಜ್ಞಯಾ ಚೈವ ಪೂರ್ವಕರ್ಮಾನುಸಾರತಃ। ಪ್ರೇರಯಂತಿ ಹಿ ತೇ ಜೀವಾನ್ ಪುಣ್ಯಪಾಪೇಷು ನಿತ್ಯಶಃ। ಅರಾಗದ್ವೇಷತಶ್ಚೈವ ಕಥಂ ದೋಷಾನವಾಪ್ನುಯುಃ। ಹರಿಪೂಜೇತಿ ಚೋದ್ದೇಶಾತ್ ಕಥಂ ನ ಶುಭಮಾಪ್ನುಯುಃ॥'* (ಅನು-ವ್ಯಾ)—ಈ ಶ್ಲೋಕಭಾಗಗಳಲ್ಲಿ ಶ್ರೀಮದಾಚಾರ್ಯರು ತಾತ್ವಿಕ ದೇವತೆಗಳ ಕಾರ್ಯವನ್ನೂ ಅವರಿಗೆ ಲಭಿಸುವ ಫಲವನ್ನೂ ವಿಶದಗೊಳಿಸಿದ್ದಾರೆ. ಈ ನಿರ್ಣಯಗಳ ಭಾವವನ್ನೇ ಈ..ಂದಿನ ಕೆಲವು ವಾಕ್ಯಗಳಲ್ಲಿ ನಿರೂಪಿಸಲಾಗಿದೆ. ..ೀಗೆ ಅಚಿಂತ್ಯಮ್ಮಮರಾದ ತಾತ್ವಿಕ ದೇವತೆಗಳನ್ನೂ ಅಂತರ್ನಿಯಾಮಕನಾಗಿ ಆಳುವ ಪ್ರಭು—ಶ್ರೀಮುಖ್ಯಪ್ರಾಣನು—ಅಪಾರಮ್ಮಮನೆಂದು ಹೇಳಲೇನಿದೆ!

ತಾತ್ವಿಕದೈತ್ಯರು ಯಾರೆಂದರೆ: ಮಧುಕೈಟಭರು, ಕಾಲನೇಮಿ, ವಿಪ್ರಚಿತ್ತಿ, ಅಲಕ್ಷ್ಮೀ (ಕಲಿಪತ್ನಿ) ಮತ್ತು ಕಲಿ. ಇವರು ಕ್ರಮವಾಗಿ ಒಬ್ಬರಿಂದೊಬ್ಬರು ಅಧಮರು; ಎಲ್ಲರಿಗಿಂತ ನೀಚನು (ಅಧಮಾಧಮನು) ಕಲಿ. ಅಜ್ಞಾನ, ಭ್ರಮೆ, ಪ್ರಮಾದಗಳಿಗೆ ಕಲಿಯು ಅಭಿಮಾನಿ; ದುಷ್ಟಕಾಮಾದಿಗಳಿಗೆ ಕಾಲನೇಮಿಯೂ, ಇತರ ನಾನಾ ದುರ್ಭಾವನೆಗಳಿಗೆ ಮತ್ತು ತನ್ನಿಮಿತ್ತ ದುಷ್ಕರ್ಮಗಳಿಗೆ ಭಿನ್ನ ಭಿನ್ನ ದೈತ್ಯರು ಅಭಿಮಾನಿಗಳು. ಈ ಸಂಬಂಧವಾದ ವಿವರಗಳನ್ನು ಶಾಸ್ತ್ರಾಭ್ಯಾಸದಿಂದ ತಿಳಿಯಬೇಕು. ಇಲ್ಲಿ ಗಮನಿಸಬೇಕಾದ ಮುಖ್ಯಾಂಶವೆಂದರೆ: ಶ್ರೀಮುಖ್ಯಪ್ರಾಣನು ದೇವದೈತ್ಯರೆಂಬ ಉಭಯ ತಾತ್ವಿಕರಿಗೂ ಪ್ರಧಾನಪ್ರೇರಕನು. ಈ..ಂದೆ ಉದಹರಿಸಿದ ಪ್ರಮಾಣದಂತೆ ಪುಣ್ಯಪಾಪಗಳಿಗೆ—ಉಭಯಕ್ಕೂ—ಪ್ರೇರಕರೆಂಬ ದೇವತೆಗಳಿಗೇ ಪಾಪಲೇಪವಿಲ್ಲದಿರಲು, ಮುಖ್ಯಪ್ರಾಣನಿಗೆ ಪಾಪಲೇಪವು ಸರ್ವಥಾ ಇಲ್ಲವೆಂದು ಹೇಳಬೇಕೇ? ಮುಕ್ತಿಯೋಗ್ಯರಾದ ಸುಜೀವರು ಸಹ ಪೂರ್ವಸಂಸ್ಕಾರ ಮತ್ತು ಅದೃಷ್ಟಾನುಸಾರವಾಗಿ, ದುಷ್ಕರ್ಮಗಳಲ್ಲಿ ಪ್ರವೃತ್ತರಾಗುತ್ತಾರೆ. ಪ್ರಧಾನ ಪ್ರೇರಕನಾದ ಶ್ರೀಮುಖ್ಯಪ್ರಾಣನೇ ಇದಕ್ಕೂ ಪ್ರೇರಕನಾಗಿದ್ದರೂ, ತನ್ನನ್ನು ಶರಣುಹೊಂದಿದ ಭಕ್ತರನ್ನು ಅನುಗ್ರಸಿ, ಅವರಿಂದ ಪಾಪಕರ್ಮಗಳು ಸಂಭವಿಸದಂತೆಯೂ, ಪ್ರಬಲಕರ್ಮಾನುಸಾರ ಸಂಭವಿಸಲೇಬೇಕಾದಾಗ ಅವುಗಳ ತೀವ್ರತೆ ಮತ್ತು ಉಗ್ರತೆಗಳನ್ನು ಬಹುಮಟ್ಟಿಗೆ ಕಡಿಮೆ ಮಾಡಿಯೂ, ರಕ್ಷಿಸುತ್ತಾನೆ. ಮನಸ್ಸನ್ನು ಆಶ್ರಯಿಸಿರುವ ತಾತ್ವಿಕದೈತ್ಯರು, ಅಲ್ಲಿನ ಸೂಕ್ಷ್ಮ ವಿಕಾರಗಳನ್ನು ಲಕ್ಷಿಸಿ, ಪಾಪ ಕರ್ಮಗಳಲ್ಲಿ ಜೀವನು ಪ್ರವೃತ್ತನಾಗುವಂತೆ ಮಾಡುವ ಯತ್ನಗಳನ್ನು ಈತನೇ ವಿಫಲಗೊಳಿಸುತ್ತಾನೆ. ಈ ಕಾರಣದಿಂದ, ಎಂದರೆ ಪಾಪಪ್ರೇರಕಯತ್ನಗಳನ್ನು ಭಂಜಿಸಿ ಭಕ್ತರನ್ನು ರಕ್ಷಿಸುವುದರಿಂದ, ಮುಖ್ಯಪ್ರಾಣನು 'ಪ್ರಭಂಜನ' ನಾಮದಿಂದ ಪ್ರಸಿದ್ಧನಾಗಿದ್ದಾನೆ. ಶ್ರೀಮುಖ್ಯಪ್ರಾಣಾನುಗ್ರಹವೆಂಬ ವಜ್ರಕವಚವನ್ನು ಧರಿಸಿದ ಪುಣ್ಯಜೀವಿಯೇ ಧನ್ಯನು. ಸಂಸಾರಿಕ ಭಯದುಃಖಾದಿಗಳಿಂದ, ಈತನು, ಲೇಶವೂ ಚಿಂತಿಸುವ ಕಾರಣವಿಲ್ಲ.

೨೭. ಪ್ರತಿದಿನಂ ಪ್ರತಿಕ್ಷಣಂ ಬುದ್ಧಿಶೋಧಕೇನ, ಸರ್ವಕರ್ಮಕರ್ತ್ರಾ, ಸರ್ವ-ಕರ್ಮಕಾರಯಿತ್ರಾ, ಸರ್ವಕರ್ಮಸ್ವಾಮಿನಾ, ಸರ್ವಕರ್ಮಸಮರ್ಪಕೇಣ, ಸರ್ವ-ಕರ್ಮಫಲಭೋಕ್ತ್ರಾ, ಸರ್ವಕರ್ಮಫಲಭೋಜಯಿತ್ರಾ, ಸರ್ವಕರ್ಮಪ್ರೇರಕೇಣ, ಸರ್ವಕರ್ಮೋದ್ಬೋಧಕೇನ, ಸರ್ವಕರ್ಮಶುದ್ಧಿಪ್ರದೇನ, ಸರ್ವಕರ್ಮಸಿದ್ಧಿಪ್ರದೇನ, ಸರ್ವಕರ್ಮನಿಷ್ಠೇನ, ಸರ್ವಕರ್ಮಸಾಕ್ಷಿಣಾ, ಸರ್ವಕರ್ಮನಿಷ್ಠಭಗವದ್ರೂಪೋಪಾಸ-ಕೇನ.....

ಪ್ರತಿಪದಾರ್ಥ: ಪ್ರತಿದಿನಂ (ಅಹೋರಾತ್ರಿ ಸ್ಗತ) ಪ್ರತಿದಿನವೂ, ಪ್ರತಿಕ್ಷಣಂ— ಪ್ರತಿಕ್ಷಣದಲ್ಲಿ, ಬುದ್ಧಿಶೋಧಕೇನ— ಮನಸ್ಸನ್ನು ಶುದ್ಧಗೊಳಿಸಿ, ಸರ್ವಕರ್ಮಕರ್ತ್ರಾ— ಸಕಲ ಕರ್ಮಗಳನ್ನು ಮಾಡುವವನೂ, ಸರ್ವಕರ್ಮಕಾರಯಿತ್ರಾ— ಸರ್ವಕರ್ಮಗಳನ್ನು (ಜೀವನಿಂದ) ಮಾಡಿಸುವವನೂ, (ತಾನೂ ಮಾಡಿ ತನ್ನೊಂದಿಗೆ ಜೀವನೂ ಮಾಡುವಂತೆ ಮಾಡುವ, ಅವನಿಂದ ಮಾಡಿಸುವ), ಸರ್ವಕರ್ಮಸ್ವಾಮಿನಾ— ಸಕಲಕರ್ಮ ಸ್ವಾಮಿಯೂ, ಸರ್ವಕರ್ಮ ಸಮರ್ಪಕೇಣ— ಸರ್ವಕರ್ಮಗಳನ್ನು (ೀಗೆ ತಾನು ಮಾಡುವ ಸಕಲ ಕರ್ಮಗಳನ್ನು ಶ್ರೀಹರಿಯಲ್ಲಿ) ಸಮರ್ಪಿಸುವವನೂ, ಸರ್ವಕರ್ಮಫಲ ಭೋಕ್ತ್ರಾ— ಸರ್ವಕರ್ಮಫಲ ಭೋಕ್ತನೂ, ಸರ್ವಕರ್ಮಫಲ ಭೋಜಯಿತ್ರಾ— ಸಕಲಕರ್ಮಗಳ ಫಲ-ಗಳನ್ನು (ಜೀವರು) ಭೋಗಿಸುವಂತೆ ಮಾಡುವವನೂ, ಸರ್ವಕರ್ಮಪ್ರೇರಕೇಣ— ಸರ್ವ-ಕರ್ಮ ಪ್ರೇರಕನೂ, ಸರ್ವಕರ್ಮೋದ್ಬೋಧಕೇನ— ಸರ್ವಕರ್ಮಗಳ ಉದ್ಬೋಧಕನೂ (ಕರ್ಮಕಾರಣಗಳಾದ ಸಂಸ್ಕಾರಗಳನ್ನು ಜಾಗ್ರತಗೊಳಿಸಿ ತದನುಸಾರ ಕರ್ಮಗಳಲ್ಲಿ ತೊಡಗುವಂತೆ ಮಾಡುವವನೂ), ಸರ್ವಕರ್ಮಶುದ್ಧಿಪ್ರದೇನ— ಸರ್ವಕರ್ಮಗಳಿಗೆ ಪರಿ-ಶುದ್ಧಿಯನ್ನುಂಟುಮಾಡುವವನೂ, ಸರ್ವಕರ್ಮಸಿದ್ಧಿಪ್ರದೇನ— ಸಕಲ ಕರ್ಮಗಳಿಗೆ ಫಲ-ದಾಯಕ ಪರಿಪೂರ್ಣತೆಯನ್ನುಂಟುಮಾಡುವವನೂ, ಸರ್ವಕರ್ಮನಿಷ್ಠೇನ— ಎಲ್ಲ ಕರ್ಮಾ-ಚರಣೆಯಲ್ಲಿ ಪೂರ್ಣ ಶ್ರದ್ಧೆಯುಳ್ಳವನೂ, ಸರ್ವಕರ್ಮ ಸಾಕ್ಷಿಣಾ— ಸರ್ವರ ಸರ್ವಕರ್ಮ-ಗಳನ್ನು ಸಾಕ್ಷಾತ್ತಾಗಿ ನೋಡುವ, ಸರ್ವಕರ್ಮನಿಷ್ಠ ಭಗವದ್ರೂಪೋಪಾಸಕೇನ— ಸರ್ವ-ಕರ್ಮಗಳಿಗೆ ಶಕ್ತಿಪ್ರದವಾಗಿ..ಂಬದಿಯಲ್ಲಿ ಸ್ಥಿತವಾದ (ಕ್ರಿಯಾತ್ಮಕ) ಭಗವದ್ರೂಪಗಳನ್ನು ಚಿಂತಿಸುವವನೂ, ಆದ ಶ್ರೀಮುಖ್ಯಪ್ರಾಣನಿಂದ ಪ್ರೇರಿತನಾಗಿ ಇತ್ಯಾದಿ ಉತ್ತರವಾಕ್ಯ-ಗಳಿಂದ ಅನ್ವಯವನ್ನು ತಿಳಿಯಬೇಕು.

ತಾತ್ಪರ್ಯ: ಪ್ರತಿದಿನವೂ ಪ್ರತಿಕ್ಷಣದಲ್ಲಿ ಸರ್ವಜೀವರಿಂದ ಸಂಭವಿಸುವ ಸರ್ವಕರ್ಮಗಳನ್ನು ಸ್ವಯಂ ಮಾಡಿ, ತನ್ನೊಂದಿಗೆ ಜೀವರಿಂದಲೂ ಮಾಡಿಸುವವನು ಶ್ರೀಮುಖ್ಯಪ್ರಾಣನು; ಈತನೇ ಸರ್ವರ ಸರ್ವಕರ್ಮಗಳ ಮೇಲೆ (ರಮಾ ನಾರಾಯಣರನ್ನುಳಿದು) ಸರ್ವಪ್ರಕಾರದ ಸ್ವಾಮಿತ್ವವುಳ್ಳವನು; ಸರ್ವಜೀವರ ಸರ್ವ-ಕರ್ಮಗಳನ್ನು ಶ್ರೀಹರಿಯಲ್ಲಿ ಅರ್ಪಿಸುವ ಅಧಿಕಾರವುಳ್ಳವನು; ಈ ಅಧಿಕಾರವನ್ನು

ಶ್ರೀಹರಿಯೇ ಕೊಟ್ಟಿರುವನು. ಸರ್ವರ ಶುಭಕರ್ಮಗಳ ಫಲಭೋಕ್ತನು ಮತ್ತು ಯಥಾಯೋಗ್ಯವಾಗಿ ಜೀವನಿಂದ ಭೋಗಿಸಲ್ಪಡುವಂತೆ ಮಾಡುವವನೂ ಆಗಿದ್ದಾನೆ. ಸರ್ವರ (ಅಸಂಖ್ಯರಾದ ಜೀವರ) ಸರ್ವಪೂರ್ವಕರ್ಮಗಳನ್ನೂ ಸಂಸ್ಕಾರ ಅದೃಷ್ಟಾದಿ-ಗಳನ್ನೂ ತಿಳಿದು, ಯಥಾಕಾಲದಲ್ಲಿ ಸಂಸ್ಕಾರಗಳನ್ನು ಉದ್ಬೋಧಿಸಿ (ಮನಸ್ಸಿನಲ್ಲಿ ಅಡಗಿರುವವುಗಳನ್ನು ಮೇಲೆ ತಂದು), ತದನುಸಾರವಾದ ಕರ್ಮಗಳಲ್ಲಿ ಪ್ರೇರಿಸುವ ತತ್ವಾಭಿಮಾನಿಗಳಲ್ಲಿ ನಿಂತು ಮುಖ್ಯಪ್ರೇರಕನಾಗಿರುತ್ತಾನೆ. ಸುಜೀವರ ಶುಭಕರ್ಮ-ಗಳಿಗೆ ಶುದ್ಧಿಪ್ರದನೂ ಈತನೇ. ಫಲಾಶೆ ಮತ್ತು ಕರ್ತೃತ್ವಾಭಿಮಾನಗಳನ್ನು ತ್ಯಜಿಸಿ, ಕರ್ಮಗಳನ್ನಾಚರಿಸುವುದು, ಕರ್ಮಕ್ಕೆ ಶ್ರೀಹರಿ ಸಮರ್ಪಣೆಗೆ ಅರ್ಹತೆಯನ್ನೀಯುವ ಶುದ್ಧತೆಯು. ಸರ್ವಕರ್ಮಸಿದ್ಧಿಪ್ರದನೂ ಶ್ರೀಮುಖ್ಯಪ್ರಾಣನೇ— ಜ್ಞಾನ, ಭಕ್ತಿ, ವೈರಾಗ್ಯ, ಹರಿಪ್ರಸನ್ನತೆ ಮೊದಲಾದ ಫಲಗಳ ಪ್ರಾಪ್ತಿಯೇ ಸಿದ್ಧಿಯು. ಶ್ರೀಪ್ರಾಣದೇವನೇ ಸರ್ವಕರ್ಮನಿಷ್ಠನು— ಎಂದರೆ, ಸರ್ವರ ಸರ್ವವಿಧ ಕರ್ಮಗಳನ್ನು ಶ್ರೀಹರಿಪ್ರೀತ್ಯರ್ಥ-ವಾಗಿ, ಶ್ರೀಹರಿಪೂಜೆಯೆಂದೇ ತಿಳಿದು ಮಾಡುತ್ತಾನೆ. ದೈತ್ಯದಾನವರಲ್ಲಿದ್ದು ಅನಿಲ-ದೇವನು ಅಯೋಗ್ಯ ಕರ್ಮಗಳನ್ನು ಮಾಡಿ, ಆದರಿಂದ ಮಾಡಿಸುವುದೂ ಈ ನಿಷ್ಠೆ-ಯಿಂದಲೇ. ಆರಂಭಿಸಿದ ಕರ್ಮಗಳನ್ನು ನ್ಯೂನಾತಿರೇಕಗಳಿಲ್ಲದಂತೆ, ಪೂರ್ತಿ-ಗೊಳಿಸುವುದರಲ್ಲಿ ತೋರುವ ಆದರೋತ್ಸಾಹಗಳು ನಿಷ್ಠೆಯು. ಈ ವಿವಕ್ಷೆಯಿಂದ ಶ್ರೀಮುಖ್ಯಪ್ರಾಣನಿಗಿಂತ ಅಧಿಕ ನಿಷ್ಠೆಯುಳ್ಳವನು ಮತ್ತೊಬ್ಬನಿಲ್ಲ. ಈತನು, ಸರ್ವರ ಸರ್ವಕ್ರಿಯೆಗಳನ್ನು ಸದಾ ನೋಡುತ್ತಿರುವನು; ಸರ್ವರ ಸರ್ವಕ್ರಿಯೆಗಳ..ಂದಿರುವ (ತನ್ನೊಂದಿಗಿದ್ದು ಆ ಕ್ರಿಯೆಗಳನ್ನು ಸ್ವತಂತ್ರವಾಗಿ ತಾನೂ ಮಾಡುವ) ಶ್ರೀಹರಿಯ ಕ್ರಿಯಾತ್ಮಕ ರೂಪವಿಶೇಷಗಳನ್ನು ನಿಯಮೇನ (ತಪ್ಪದೇ) ತನ್ನ ವಿಶಿಷ್ಟಪ್ರವೃತ್ತಿಗಳಲ್ಲಿ ಚಿಂತಿಸುವವನು; (ತನ್ನ ಸ್ವಾಮಿಯೂ ಸರ್ವಸ್ವಾಮಿಯೂ ಆಗಿರುವವನು ಶ್ರೀಹರಿಯು ಎಂಬುದನ್ನು ಎಂದೂ ಮರೆಯನು).

ಪ್ರಮೇಯ ವಿವರಣೆ: (೧) ಬುದ್ಧಿಶೋಧಕ— ಮನಸ್ಸೆಂದು ಸಾಮಾನ್ಯವಾಗಿ ವ್ಯವಹರಿಸುವ ಅಂತರಿಂದ್ರಿಯವು ಅಂತಃಕರಣವೆಂದೂ ಕರೆಯಲ್ಪಡುತ್ತದೆ. ಇದು ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಮತ್ತು ಚೇತನಗಳೆಂಬ ಐದು ವಿಧದ ಪ್ರವೃತ್ತಿ-ಗಳುಳ್ಳದ್ದು, ಸಂಕಲ್ಪ-ವಿಕಲ್ಪರೂಪದ ಪ್ರವೃತ್ತಿಯು ಮನಸ್ಸಿನದು; ಸರಿ-ತಪ್ಪುಗಳನ್ನು ವಿವೇಕಿಸುವುದು ಬುದ್ಧಿ; ನಾನು ಸ್ವತಂತ್ರನಾಗಿ ಕರ್ಮಗಳನ್ನು ಮಾಡುತ್ತೇನೆಂಬ ಭಾವನೆಯನ್ನುಂಟುಮಾಡುವುದು ಅಹಂಕಾರ; ಸ್ಮರಣಶಕ್ತಿಯು ಚಿತ್ತ; ಬಹುಸ್ಮರಣ (ದೀರ್ಘಕಾಲದ ಅಥವಾ ಜನ್ಮಾಂತರಗಳ ಅನುಭವಗಳನ್ನು ಜ್ಞಾಪಕಕ್ಕೆ ತಂದು-ಕೊಡುವ) ಶಕ್ತಿಯು ಚೇತನ. ಅಂತಃಕರಣದ ಪ್ರಭೇದಗಳಾದ ಬುದ್ಧಿ ಮತ್ತು ಅಹಂಕಾರಗಳನ್ನು ತನ್ನಾಮಕ ಪ್ರತ್ಯೇಕ ತತ್ವಗಳೆಂದು ಭ್ರಮಿಸಲಾಗದು. ಬುದ್ಧಿತತ್ವವು

ಮಹತ್ತತ್ವದ ಪ್ರಭೇದವಾದುದು— ವಿಜ್ಞಾನತತ್ವವೆಂದೂ ಕರೆಯಲ್ಪಡುತ್ತದೆ. ಅಹಂಕಾರ-ತತ್ವವೆಂಬುದು, ಇಂದ್ರಿಯಾಭಿಮಾನಿಗಳು, ಮನಸ್ಸು— ಇಂದ್ರಿಯಗಳು— ಪಂಚ-ಭೂತಗಳ ಉತ್ಪತ್ತಿಗೆ ಕಾರಣವಾದ, ವೈಕಾರಿಕ-ತೈಜಸ-ತಾಮಸಭೇದದಿಂದ ಮೂರು ಪ್ರಕಾರವಾಗಿರುವ, ಮಹತ್ತತ್ವದಿಂದ ಹುಟ್ಟಿದ (ಅದರ ವಿಕಾರವಾದ) ತತ್ವವು. ಬುದ್ಧಿಶೋಧಕರೆಂದರೆ ಮನಃಪ್ರಭೇದವಾದ ಬುದ್ಧಿಯನ್ನು ಶುದ್ಧಿಗೊಳಿಸುವವ-ರೆಂದರ್ಥ. ಶುದ್ಧಿಗೊಳಿಸುವುದೆಂದರೆ, ಅಂತಃಕರಣದಲ್ಲಿರುವ ರಾಗದ್ವೇಷರೂಪದ ಮಲವನ್ನು ಕಳೆದು ವಿವೇಕ ಸಾಮರ್ಥ್ಯವು ಅಧಿಕವಾಗುವಂತೆ ಮಾಡುವುದು.

(೨) **ಕರ್ತಾ-ಕಾರಯಿತಾ**— ಶ್ರೀಹರಿಯೇ ಮುಖ್ಯಸರ್ವಕರ್ತಾ ಮತ್ತು ಸರ್ವ-ಜೀವರಿಂದ ಕಾರಯಿತಾ (ಮಾಡಿಸತಕ್ಕವನು). ಶ್ರುತಿಗಳು ಶ್ರೀಹರಿಯನ್ನು, *'ಕರ್ತಾ-ಕಾರಯಿತಾ ಚೈವ...,' 'ತೇನ ವಿನಾ ತೃಣಮಪಿ ನ ಚಲತಿ'* ಇತ್ಯಾದಿ ಧರ್ಮ-ಗಳುಳ್ಳವನೆಂದು ಸಾರುತ್ತವೆ. ಕರ್ತಾ ಕಾರಯಿತಾ ಎಂಬುದರ ವಿವರಣೆಯು ಶಾಂಡಿಲ್ಯತತ್ವದಲ್ಲಿ ಹೀಗೆ ಮಾಡಲಾಗಿದೆ:

*'ಯದಾಶ್ನಾತಿ ತದಾಶ್ನಾತಿ ಯದಾವಕ್ತಿ ತದೈವ ಸಃ। ಕಿಮತ್ರಬಹುನೋಕ್ತೇನ-ನಾಽಕೃತಂ ಕ್ರಿಯತೇ ಜನ್ಯೈಃ'* ಎಂದರೆ, ಬಿಂಬನು ಉಣ್ಣಲು ಪ್ರತಿಬಿಂಬನು ಉಂಬುವನು, ಬಿಂಬನು ಮಾತನಾಡಲು, ಪ್ರತಿಬಿಂಬನು ಮಾತನಾಡುವನು; ಹೆಚ್ಚು ಹೇಳಲೇನು! ಬಿಂಬ ಮಾಡದ ಏನನ್ನೂ ಪ್ರತಿಬಿಂಬ ಮಾಡನು. ಪ್ರತಿಬಿಂಬನಾದ ಜೀವನು ಸಮಸ್ತ ಕ್ರಿಯೆಗಳು ಬಿಂಬನಾದ ಶ್ರೀಹರಿಯ ಕ್ರಿಯಾನುಸಾರಿಗಳೇ ಆಗಿರು-ತ್ತವೆ. ಪ್ರತಿಬಿಂಬದ ಕ್ರಿಯೆಯು ಬಿಂಬಕ್ರಿಯಾಪ್ರವೇಶವುಳ್ಳದ್ದು. *'ಪ್ರತಿಬಿಂಬ ಕ್ರಿಯಾಯಾಃ ಬಿಂಬಕ್ರಿಯಾನುಸ್ಯೂತತಾ'* ಎಂದೂ ಅಲ್ಲಿಯೇ ಹೇಳಲಾಗಿದೆ— ಎಂದರೆ, ಪ್ರತಿಬಿಂಬದ ಕ್ರಿಯೆಗೆ ಬಿಂಬಕ್ರಿಯೆಯ ಅನಸ್ಯೂತತ್ವವಿದೆ— ಪ್ರತಿಬಿಂಬದ (ಜೀವನ) ಕ್ರಿಯೆಯಲ್ಲಿ ಶ್ರೀಹರಿಕ್ರಿಯೆಯು ಒಳಸೂಸಿರುತ್ತದೆಂಬ ಭಾವ. ಶ್ರೀಹರಿಯ ಮುಖ್ಯಪ್ರತಿಬಿಂಬನಾಗಿ, ಆತನೊಬ್ಬನ ಅಧೀನಮಾತ್ರನಾಗಿ ಆತನೊಂದಿಗೆ ಜಗದ್ವ್ಯಾಪಾರಗಳೆಲ್ಲವನ್ನೂ ಮಾಡುವ ಮುಖ್ಯಪ್ರಾಣನ ಸರ್ವಕ್ರಿಯೆಗಳೂ, ಸರ್ವ-ಜೀವರಲ್ಲಿ ಪ್ರತಿಬಿಂಬಿಸುವುದೆಂದು ಭ್ರಮಿಸಲಾಗದು. ಆಯಾಜೀವರ ಯೋಗ್ಯತೆಗೆ ಅನುಗುಣವಾದ ಕ್ರಿಯೆಗಳು ಮಾತ್ರ ಆ ಜೀವರಲ್ಲಿ ನಡೆಯುತ್ತವೆಯಲ್ಲದೇ, ಸರ್ವ-ಕ್ರಿಯೆಗಳಲ್ಲ. ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸುವ ಶ್ರೀಹರಿಯಿಂದ ಕೂಡಿ, ಅವೆಲ್ಲ-ವನ್ನೂ ತಾನು ನಿರ್ವಹಿಸುವ ಶ್ರೀಮುಖ್ಯಪ್ರಾಣನ ಸಾಮರ್ಥ್ಯವು ಅತ್ಯದ್ಭುತವಾದುದೇ ಸರಿ. *'ಯಾನಿ ಯಾನೀಹ ಕರ್ಮಾಣಿ ಜಗತಿಸ್ಫೂರಮಾಪತೇಃ। ಪ್ರಾಯಃ ಪ್ರಾಣಾಧಿಪೇತಾನಿ ಸಮಸ್ತಾನಿ ನ ಸಂಶಯಃ॥'* (ಸ.ರ.ಮಾ.) ಎಂಬ ವಾಕ್ಯದಲ್ಲಿ,

'ಪ್ರಾಯಃ' ಶಬ್ದದಿಂದ ಶ್ರೀಹರಿಯಿಂದಾಗುವ ಶುದ್ಧಸೃಷ್ಟಿ, ಪರಾಧೀನವಿಶೇಷಾವಾಪ್ತಿ-ರೂಪದ ಸೃಷ್ಟಿಗಳು ವ್ಯಾವರ್ತಿಸಲಾಗಿವೆಯೆಂದು ತಿಳಿಯಬೇಕು. ಬ್ರಹ್ಮಾಂಡದೊಳ-ಗಿನ ಸೃಷ್ಟ್ಯಾದಿ ಅಷ್ಟಕಗಳಲ್ಲಿ ಶ್ರೀಹರಿಯೊಂದಿಗೆ ಹರ್ಯಧೀನನಾಗಿ ಪ್ರವರ್ತಿಸುವನೆಂದು ಆ ವಾಕ್ಯದ ತಾತ್ಪರ್ಯವಾಗಿದೆ. ಇಲ್ಲಿ ವಾಕ್ಯ ೨೬, ಪ್ರ.ವಿ. (೧)ನ್ನು ನೋಡಬಹುದು.

(೩) ಭೋಕ್ತಾ ಭೋಜಯಿತಾ: ವಾಕ್ಯ ೨೬, ಪ್ರ.ವಿ. (೪) ನ್ನು ನೋಡಿರಿ. ತಾತ್ವಿಕ ದೇವತೆಗಳಿಗೂ ತಾತ್ವಿಕ ಅಸುರರಿಗೂ ದೇಹೇಂದ್ರಿಯಗಳ ಪ್ರೇರಕವ್ಯಾಪಾರ-ದಿಂದ ಪ್ರಾಪ್ತವಾಗುವ ಸಾಧನವಿಶೇಷವನ್ನು ಈ ..ಂದೆ ಸೂಚಿಸಲಾಗಿದೆ. ಈ ಉಭಯರೂ ಸ್ವಸ್ವಸಾಧನಪರಿಪೂರ್ತಿಗಾಗಿ ಪ್ರತ್ಯೇಕ ದೇಹಗಳನ್ನು ಹೊಂದುವು-ದುಂಟು—ಅಂಶಗಳಿಂದ ಅವತರಿಸಿ ಪ್ರಾರಬ್ಧವನ್ನು ಭೋಗಿಸಿ, ಆ ದೇಹಗಳಲ್ಲಿ ಮಾಡುವ ಫಲರೂಪವಾಗಿ, ಮೋಕ್ಷದಲ್ಲಿ ಆನಂದಾತಿಶಯವನ್ನೂ, ತಮಸ್ಸಿನಲ್ಲಿ ದುಃಖಾತಿಶಯವನ್ನೂ ದೊರಕಿಸಿಕೊಳ್ಳುತ್ತಾರೆ. ತತ್ವಾಭಿಮಾನಿ ದೇವತೆಗಳು ಇಂದ್ರಿಯಗಳಿಗೂ, ಇಂದ್ರಿಯಗಳಿಂದ ಭೋಜ್ಯವಾದ ವಿಷಯಗಳಿಗೂ ಅಭಿಮಾನಿ-ಗಳಾದ್ದರಿಂದ, ಇಂದ್ರಿಯಗಳಿಂದಾಗುವ ಭೋಗದಲ್ಲಿ ಭೋಕ್ತಾರರೂ ಭೋಜ್ಯರೂ ಆಗಿರುತ್ತಾರೆ. ಅನಂತ ಜೀವರಲ್ಲಿ, ಶ್ರೀಹರಿಯ ಅಚಿಂತ್ಯಶಕ್ತಿಯ ಪ್ರಭಾವದಿಂದ, ಅನಂತಾಂಶಗಳಿಂದ ವಿಭಕ್ತರಾಗಿ, ದೇಹೇಂದ್ರಿಯಗಳ ನಿಯಾಮಕರಾಗಿ ವಾಸಿಸುವುದ-ರಿಂದ, ಇವರು ಸರ್ವವಿಧ ಭೋಕ್ತೃಗಳು—ಸರ್ವಭೋಕ್ತಾರರು. ಇವರಿಗೆ ದುಃಖಭೋಗದ ಲೇಶವೂ ಇಲ್ಲ—ಪೂರ್ಣಸುಖಿಗಳು. ಇವರೆಲ್ಲರ ಅಂತರ್ಯಾಮಿ-ಯಾದ ಶ್ರೀಮುಖ್ಯಪ್ರಾಣನು, ಸರ್ವಸುಖಭೋಗವುಳ್ಳವನೆಂಬುದು ಇದರಿಂದಲೇ ಸಿದ್ಧ. ದುಃಖಭೋಗವಿಲ್ಲದವನು ಸರ್ವಭೋಕ್ತನು ಹೇಗೆಂಬ ಸಂಶಯವು ಸಹಜ-ವಾಗಿ ಉದ್ಭವಿಸುತ್ತದೆ. ದುಃಖಭೋಗವು ದೇಹಾಭಿಮಾನಿ ಜೀವನಿಗೆ ಉಂಟಾಗ-ಲೆಂದು ಇಚ್ಛಿಸಿ, ದುಃಖವನ್ನು ವೀಕ್ಷಿಸುವುದೇ ಮುಖ್ಯಪ್ರಾಣನ, ಹಾಗೂ ಅಂತರ್ಯಾಮಿಯಾದ ಶ್ರೀಹರಿಯ ದುಃಖಭೋಗಪ್ರಕಾರವು—ರಾಜನು ಪ್ರಜೆಗಳಿಂದ ಅರ್ಪಿತವಾದ ಫಲಪುಷ್ಪಾದಿಗಳನ್ನು ದೃಷ್ಟಿಮಾತ್ರದಿಂದ ಸ್ವೀಕರಿಸುವಂತೆ, ಸಂಕಲ್ಪ-ಮಾತ್ರದಿಂದ, ಜೀವನಿಗೆ ದುಃಖಾನುಭವವನ್ನುಂಟು ಮಾಡುವುದು ಶ್ರೀಹರಿ-ವಾಯುಗಳ ಭೋಗ. *'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್'* —ಎಂಬ ಶ್ರುತಿಯೂ, *'ಉತ್ಕ್ರಾಮಂತಂ ಸ್ಥಿತಂವಾಪಿ ಭುಂಜಾನಂ ವಾ ಗುಣಾನ್ವಿತಂ।'* (ಗೀತೆ) ಎಂಬ ಸ್ಮೃತಿಯೂ ಶ್ರೀಹರಿಯು ಸರ್ವಭೋಕ್ತನಾದರೂ ಕೇವಲ ಶುಭ-ಗುಣಗಳನ್ನೇ ಸ್ವೀಕರಿಸುವನೆಂದು ಹೇಳುತ್ತವೆ. *'ಸರ್ವತ್ರವಿನಿವಿಷ್ಟಃ ಸನ್ ಸರ್ವ-ಭೋಕ್ತಾಚತುರ್ಮುಖಃ।... ನಾಸ್ತಿ ದುಃಖಂ ಕಥಂಚನ॥'* (ಬೃ-ಭಾ) ಎಂಬ

ಪ್ರಮಾಣವು ಬ್ರಹ್ಮ, ವಾಯುಗಳಿಗೆ ದುಃಖರ್ರತ ಸರ್ವಭೋಕ್ತೃತ್ವವನ್ನು ಹೇಳುತ್ತದೆ.

ಬ್ರಹ್ಮಪದವಿಯು ಸಹಭೋಗವೆಂದು ಕರೆಯಲ್ಪಡುತ್ತದೆ. ಸಹಭೋಗವೆಂಬುದು ಸರ್ವಶುಭಭೋಕ್ತನಾದ ಶ್ರೀಹರಿಯು ಭೋಗಿಸುವ ಸರ್ವಭೋಗಗಳೂ, ಬ್ರಹ್ಮನಿಗೆ ದೊರೆಯಲೆಂದು (ತನ್ನೊಂದಿಗೆ ಆ ಪದವಿಯಲ್ಲಿದ್ದು ಅನುಭವಿಸಲೆಂದು) ಶ್ರೀಹರಿಯೇ ಸಂಕಲ್ಪಿಸಿ, ಹಾಗೆ ವಿಧಿಸಿದ್ದಾನೆ. *'ಭೋಗಾಶ್ಚ ಯೇ ಯಾನಿ ಚ ಕರ್ಮಜಾತಾನ್ಯನಾದ್ಯಂತಾನಿ ಮಮೇಹ ಸಂತಿ। ಮದಾಜ್ಞಯಾ ತಾನ್ಯಖಿಲಾನಿ ಸಂತಿ ಧಾತುಃಪದೇ....'* (ಭಾ-ತಾ) ಎಂಬ ವಾಕ್ಯವು, 'ಸರ್ವಭೋಕ್ತನಾದ ನನಗೆ ವಿಶ್ವವ್ಯಾಪಾರನಿರ್ವಹಣೆಯಲ್ಲಿ ಹೊಂದುವ ಅನಾದ್ಯನಂತ ಸುಖಭೋಗಗಳು ಮತ್ತು ಕರ್ಮಗಳು, ಯಾವ್ಯಾವುವು ಇವೆಯೋ, ಅವೆಲ್ಲವೂ ನನ್ನ ಆಜ್ಞೆಯಿಂದ ಬ್ರಹ್ಮಪದವಿಯಲ್ಲಿರುವ ಜೀವನಿಗೆ ದೊರೆಯಲಿ' ಎಂಬುದಾಗಿ ಶ್ರೀಹರಿಯು ಆಜ್ಞಾಪಿಸಿರುವನೆಂದು ಹೇಳುತ್ತದೆ. ಅನಾದ್ಯಪರೋಕ್ಷಿಗಳಾದ ತಾತ್ವಿಕ ದೇವತೆಗಳು, *'ನಿಸ್ಸೀಮಾಷ್ಟ ಮಹಾಸಿದ್ಧಿ ಸಂಪೂರ್ಣಾಃ ಸರ್ವದೈವತು। ಅತಃ ಪೂರ್ಣಗುಣಾಃ ಸರ್ವೇ ನಿಸ್ಸೀಮಾನಂದ ಭೋಜಿನಃ॥'* (ಸ.ರ.ಮಾ) ಇತ್ಯಾದಿ ವಾಕ್ಯಗಳು, 'ಅಪಾರವಾದ ಅಣಿಮಾದಿ ಅಷ್ಟಮಹಾಸಿದ್ಧಿಗಳಿಂದ ಪೂರ್ಣರೂ, ಅತ ಏವ ಗುಣಪೂರ್ಣರೂ, ಅಮಿತಾನಂದ ಭೋಗವುಳ್ಳವರೂ ಆಗಿರುವರು' ಎಂದು ಹೇಳುತ್ತವೆ. ಸರ್ವಭೋಕ್ತನಾದ ಶ್ರೀಮುಖ್ಯಪ್ರಾಣನು ಇಂದ್ರಿಯಾಭಿಮಾನಿಗಳಲ್ಲಿದ್ದು, ಜೀವರಿಗೆ ಭೋಗಶಕ್ತಿಪ್ರದನೂ ಆಗಿರುವುದರಿಂದ, *'ಭೋಕ್ತಾಭೋಜಯಿತಾ'* ಎನಿಸುತ್ತಾನೆ.

(೪) ಸರ್ವಕರ್ಮ ಪ್ರೇರಕತ್ವಾದಿ: ಸರ್ವರ ಸರ್ವಕರ್ಮ ಪ್ರೇರಕನಿಗೆ, ಸರ್ವರ (ಅನಂತಜೀವರ) ಪೂರ್ವಸಂಸ್ಕಾರ ಮತ್ತು ಅದೃಷ್ಟ, ಹಾಗೂ ಜೀವಸ್ವರೂಪಯೋಗ್ಯತೆಗಳ ಪೂರ್ಣಜ್ಞಾನವಿರಬೇಕು. ಈ ಜ್ಞಾನದ ಯಥಾಯೋಗ್ಯವಾದ ವಿಶೇಷಾಂಶಗಳನ್ನು, ತನ್ನ ಅಧೀನರಾದ ಇತರ ತತ್ವಾಭಿಮಾನಿದೇವತೆಗಳಿಗೆ, ಯಥಾಕಾಲದಲ್ಲಿ ತಿಳಿಸಿಕೊಟ್ಟು (ಅದೃಷ್ಟಾದಿಗಳ ಜ್ಞಾನವನ್ನು ಅವರಿಗುಂಟುಮಾಡಿ) ಅವರು ತಮ್ಮ ನಿಯಮನಕ್ಕೊಳಪಟ್ಟ ಇಂದ್ರಿಯಗಳನ್ನು ತದನುಸಾರವಾಗಿ ಪ್ರೇರಿಸುವಂತೆ ಶ್ರೀಮುಖ್ಯಪ್ರಾಣನು ಮಾಡುತ್ತಾನೆ. ..ೀಗೆ ಸರ್ವಕರ್ಮಪ್ರೇರಕನಾದ ಈತನು, ಸುಜೀವಿಗಳು ಶ್ರದ್ಧಾಭಕ್ತಿಗಳಿಂದಾಚರಿಸುವ ಕರ್ಮಗಳನ್ನು ಶುದ್ಧಗೊಳಿಸಿ, ಅವರ ಪರವಾಗಿ ತಾನೇ ಶ್ರೀಹರಿಯಲ್ಲಿ ಅರ್ಪಿಸುತ್ತಾನೆ. ಫಲಾಶೆ ಮತ್ತು ಸ್ವತಂತ್ರ ಕರ್ತೃತ್ವಾಭಿಮಾನಗಳನ್ನು ತ್ಯಜಿಸಿ ಕರ್ಮಗಳನ್ನಾಚರಿಸುವ ಮನೋಭಾವವನ್ನು ಅನುಗ್ರಸುವವನೂ ಮುಖ್ಯಪ್ರಾಣನೇ. ಈ ಮನೋಭಾವದಿಂದ ಆಚರಿಸುವ

ಕರ್ಮವೇ ಶುದ್ಧಕರ್ಮವು. ಸಾಮಾನ್ಯವಾಗಿ, ಅಜ್ಞಾನಾವಸ್ಥೆಯಲ್ಲಿರುವ ಸುಜೀವರು ಆಚರಿಸುವ ವಿಧ್ಯುಕ್ತಕರ್ಮಗಳು ಸಹ, 'ಲೋಪದೋಷಗಳಿಂದ ಸ್ಖತವಾದ ಬಹುಪರಿಯ ದೋಷಯುಕ್ತವಾಗಿರುತ್ತವೆ. ನಿರ್ದುಷ್ಟ ಕರ್ಮಗಳನ್ನಾಚರಿಸುವವರೆಂದರೆ ಬ್ರಹ್ಮವಾಯುಗಳು ಮಾತ್ರ. *'ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ'* (ಗೀತಾ)—ಎಲ್ಲ ಕರ್ಮಗಳು, ಅಗ್ನಿಯು ಧೂಮದಿಂದ ಎಂಬಂತೆ ಸಹಜವಾಗಿ ದೋಷಯುಕ್ತವಾಗಿರುತ್ತವೆಂದು ಶ್ರೀಕೃಷ್ಣನು ಹೇಳಿರುವನು. ಸ್ವಾಭಾವಿಕವಾದ ಈ ದೋಷಗಳ ಪರಿಹಾರಕ್ಕೆ, *'ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃಸಂಧ್ಯಾಕ್ರಿಯಾದಿಷು ನ್ಯೂನಂ ಸಂಪೂರ್ಣತಾಂ ಯಾತಿ....'* ಮತ್ತು *'ಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯಜಪಂ ಕರಿಷ್ಯೇ'* ಇತ್ಯಾದಿ ವಾಕ್ಯಗಳು ವಿಧಿಸುವಂತೆ, ಶ್ರೀಹರಿಯ ದಿವ್ಯನಾಮ ಸಂಕೀರ್ತನವೇ ಮುಖ್ಯಸಾಧನ. ಆದರೆ ಶ್ರೀಹರಿಯ ಪ್ರಸನ್ನತೆಗೆ ಕಾರಣವಾಗಬೇಕಾದ ವಿಧ್ಯುಕ್ತಕರ್ಮಗಳನ್ನು ಶ್ರೀಮುಖಪ್ರಾಣನು ಶ್ರೀಹರಿಯಲ್ಲಿ ಅರ್ಪಣೆ ಮಾಡಲು ಅವಶ್ಯಕವಾದ ಕರ್ಮಶುದ್ಧಿಯು, ಈ ಮೇಲೆ ಹೇಳಿದಂತೆ ಫಲಾಶೆ ಮತ್ತು ಕರ್ತೃತ್ವಾಭಿಮಾನಗಳ ತ್ಯಾಗದಿಂದ ಮಾತ್ರ ದೊರೆಯುತ್ತದೆಂಬುದನ್ನು ಗಮನದಲ್ಲಿಡಬೇಕು. ಕರ್ಮಕರಣದಲ್ಲಿ, ಕರ್ಮಶುದ್ಧಿಗೆ ಕಾರಣವಾಗುವ ಈ ಅನುಸಂಧಾನವು ದೊರೆಯಬೇಕಾದರೆ, ಭಕ್ತಿ ವೈರಾಗ್ಯಗಳು ಆವಶ್ಯಕ. ಇವುಗಳನ್ನು ಕರುಣಿಸುವವನು ಮುಖ್ಯಪ್ರಾಣನೇ. ..ೀಗೆ ಆಚರಿಸುವ ಕರ್ಮವೇ ಜ್ಞಾನಯುಕ್ತಕರ್ಮವೆಂದೂ, ಯೋಗವೆಂದೂ, ನಾನಾ ನಾಮಗಳಿಂದ ಕರೆಯಲ್ಪಡುತ್ತದೆ.

*'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ!'* (ಗೀತಾ)— ಜ್ಞಾನಾಗ್ನಿಯು ಸರ್ವಕರ್ಮಗಳನ್ನು ಧ್ವಸಿ ಭಸ್ಮವನ್ನಾಗಿ ಮಾಡುತ್ತದೆಂಬಲ್ಲಿ ಹೇಳಿರುವ, ಜ್ಞಾನವು ಇದೇ. ಕರ್ಮದಹನವೆಂದರೆ, ಜನ್ಮಾಂತರಗಳನ್ನೆತ್ತಲು ಕಾರಣವಾಗಿ ನಾನಾವಿಧ ಸುಖದುಃಖರೂಪದ ಫಲಪ್ರಾಪಕವಾಗದಂತೆ ನಿರ್ವೀರ್ಯಗೊಳಿಸುವುದು. ಆಚರಿಸುವ ಪ್ರತಿಕರ್ಮವೂ ..ೀಗೆ ಜ್ಞಾನಸಹಕೃತವಾದರೆ, ಕರ್ಮವು ಬಂಧಕವಾಗುವುದಿಲ್ಲ. ಸರ್ವ ಪೂರ್ವಕರ್ಮಗಳನ್ನೂ ಏಕಕಾಲಕ್ಕೆ ಧ್ವಸುವ ಅಪರೋಕ್ಷ ಜ್ಞಾನವು (ಶ್ರೀಹರಿಸಾಕ್ಷಾತ್ಕಾರವು) ಈ ಶ್ಲೋಕದಲ್ಲಿನ ಜ್ಞಾನಾಗ್ನಿಶಬ್ದದಿಂದ ಮುಖ್ಯವಿವಕ್ಷಿತವು. ಶ್ರೀಮುಖ್ಯಪ್ರಾಣನು ತಾನು ಮಾಡುವ ಮತ್ತು ಅಸಂಖ್ಯಜೀವರಲ್ಲಿದ್ದು ಮಾಡಿ ಮಾಡಿಸುವ ಸರ್ವಕರ್ಮಗಳನ್ನು ಶ್ರೀಹರಿಯ ಅಧೀನನಾಗಿ ಆತನ ಪ್ರೇರಣೆಯಿಂದಲೇ ಮಾಡುತ್ತಾನೆ. ಶ್ರೀಹರಿಯೆ ಮುಖ್ಯಸರ್ವಕರ್ತನು. ಶ್ರೀಹರಿಯು ತನ್ನ ಸರ್ವಗುಣಕ್ರಿಯೆಗಳಿಂದ ಅಭಿನ್ನನು. ತನ್ನ ಸರ್ವಕ್ರಿಯೆಗಳಿಗೆ ಸ್ವತಂತ್ರ ಕಾರಣಗಳಾದ ಶ್ರೀಹರಿಯ ಅನಂತಕ್ರಿಯಾತ್ಮಕ ರೂಪಗಳ ಸ್ಮರಣೆಪೂರ್ವಕ ಶ್ರೀಮುಖ್ಯಪ್ರಾಣನು ಸರ್ವಕರ್ಮಗಳನ್ನು ಮಾಡುತ್ತಾನೆ ಮತ್ತು ಅನ್ಯರಿಂದ ಮಾಡಿಸುತ್ತಾನೆ.

೨೮. (ಅತ ಏವ) ಅಶೇಷಜೀವನಿಃಸಂಖ್ಯ-ಅನಾದಿಕಾಲೀನ ಧರ್ಮಾಧರ್ಮದ್ರಷ್ಟೃ ಸ್ವೇಚ್ಛಯಾ ಉದ್ಬೋಧಕೇನ, ತದ್ವಾಚಕ (ತತ್ವಾಚಕ) ಕಪಿಲೋಪಾಸಕೇನ ರಮಾವ್ಯತಿರಿಕ್ತ-ಪೂರ್ವಪ್ರಸಿದ್ಧ-ವ್ಯತಿರಿಕ್ತ-ಅನಂತವೇದ-ಪ್ರತಿಪಾದ್ಯಮುಖ್ಯತಮ-ಅನಂತಗುಣ ಪರಿಪೂರ್ಣೇನ, ಸರ್ವದೋಷದೂರೇಣ, ತ್ವಚ್ಚಿತ್ತಾಭಿಜ್ಞೇನ, ತ್ವಚ್ಚಿತ್ತಾನುಸಾರಿಚಿತ್ತೇನ, ತ್ವತ್ಪರಮಾನುಗ್ರಹಪಾತ್ರಭೂತೇನ, ಮದ್ಯೋಗ್ಯತಾಭಿಜ್ಞೇನ, ಶ್ರೀಭಾರತೀರಮಣೇನ, ರುದ್ರಾದ್ಯಶೇಷತಾತ್ವಿಕದೇವತೋಪಾಸಿತಚರಣೇನ, ಮಮ ಸರ್ವಾಸ್ವವಸ್ಥಾಸು ಚಿತ್ರಧಾ ವಿಚಿತ್ರಧಾ ತ್ವದುಪಾಸಕೇನ ಶ್ರೀಮುಖ್ಯಪ್ರಾಣೇನ ಪ್ರೇರಿತಃ ಸನ್.....

ಪ್ರತಿಪದಾರ್ಥ: [ಅತ ಏವ—ಆದ್ದರಿಂದಲೇ (ಸರ್ವಕರ್ತನಾದ ಶ್ರೀಹರಿಯ ಅನಂತ ಕ್ರಿಯಾತ್ಮಕ ರೂಪಗಳನ್ನು ಚಿಂತಿಸಿ ಸರ್ವಕರ್ಮಗಳನ್ನು ಮಾಡಲು ಶಕ್ತನಾದ್ದರಿಂದಲೇ) ಮುಖ್ಯಪ್ರಾಣನು,] ಅಶೇಷಜೀವನಿಃಸಂಖ್ಯಾನಾದಿಕಾಲೀನ—ಸಮಸ್ತಜೀವರ, ಅಸಂಖ್ಯವೂ ಅನಾದಿಕಾಲದಿಂದಿರುವುದೂ ಆದ, ಧರ್ಮಾಧರ್ಮದ್ರಷ್ಟುಸ್ವೇಚ್ಛಯೋದ್ಬೋಧಕೇನ—ಪುಣ್ಯಪಾಪರೂಪ ಅದೃಷ್ಟಗಳನ್ನು (ಸೂಕ್ಷ್ಮವೂ ಅತೀಂದ್ರಿಯವೂ ಆದವುಗಳನ್ನು) ಸಾಕ್ಷಾತ್ತಾಗಿ ಕಂಡು ತನ್ನ ಇಚ್ಛಾನುಸಾರ ಉದ್ಬೋಧಿಸುವ (ಫಲೋನ್ಮುಖವನ್ನಾಗಿ ಮಾಡುವ), ತದ್ವಾಚಕ ಕಪಿಲೋಪಾಸಕೇನ—ಈ ಅರ್ಥವನ್ನು ಹೇಳುವ (ಶ್ರೀಮುಖ್ಯಪ್ರಾಣನ ಈ ಮಹಿಮೆಯನ್ನು ಕೇಳುವ) ಕಪಿಲನೆಂಬ ನಾಮವುಳ್ಳ ಶ್ರೀಹರಿಯನ್ನು ಉಪಾಸಿಸುವ, ರಮಾವ್ಯತಿರಿಕ್ತ ಪೂರ್ವಪ್ರಸಿದ್ಧ ವ್ಯತಿರಿಕ್ತ—ರಮಾದೇವಿಯಲ್ಲಿಯೇ (ರಮಾದೇವಿಯನ್ನು ಹೇಳುತ್ತವೆಂದು), ಪ್ರಸಿದ್ಧವಾದ ಮತ್ತು ಅನಾದಿ ಪ್ರಸಿದ್ಧ (ಅಥವಾ ಪೂರ್ವಶಬ್ದವಾಚ್ಯ-ನಾದ ನಾರಾಯಣವಾಚಕ) ಶಬ್ದಗಳಿಂದ ಭಿನ್ನಗಳಾದ (ವ್ಯತಿರಿಕ್ತವಾದ) ಅನಂತ ವೇದಪ್ರತಿ-ಪಾದ್ಯಮುಖ್ಯತಮೇನ—ಅನಂತ ವೇದಶಬ್ದಗಳಿಂದ, ಪ್ರತಿಪಾದ್ಯರಾದವರಲ್ಲಿ ಮುಖ್ಯ-ತಮನಾದ, ಅನಂತ ಗುಣಪರಿಪೂರ್ಣೇನ—ಅಸಂಖ್ಯಗುಣಗಳಿಂದ ಪೂರ್ಣನೂ, ಸರ್ವ-ದೋಷದೂರೇಣ—ಸರ್ವದೋಷದೂರನೂ, ತ್ವಚ್ಚಿತ್ತಾಭಿಜ್ಞೇನ—ನಿನ್ನ ಚಿತ್ತವನ್ನು ತಿಳಿದವನೂ (ಆಯಾಕಾಲದ ಭಗವತ್ಸಂಕಲ್ಪಗಳನ್ನು ತಿಳಿಯುವವನೂ), ತ್ವಚ್ಚಿತ್ತಾನುಸಾರಿಚಿತ್ತೇನ—ನಿನ್ನ ಚಿತ್ತಾನುಸಾರದ ಚಿತ್ತವುಳ್ಳವನೂ, ತ್ವತ್ಪರಮಾನುಗ್ರಹ ಪಾತ್ರಭೂತೇನ—ನಿನ್ನ ಪರಮ-ಪ್ರಸಾದ ಮುಖ್ಯಪಾತ್ರನೂ, ಮದ್ಯೋಗ್ಯತಾಭಿಜ್ಞೇನ—ನನ್ನ ಯೋಗ್ಯತೆಯನ್ನು ಚೆನ್ನಾಗಿ ತಿಳಿದಿರುವವನೂ, ಭಾರತೀರಮಣೇನ—ಭಾರತೀಪತಿಯೂ, ರುದ್ರಾದ್ಯಶೇಷ ತಾತ್ವಿಕ-ದೇವತೋಪಾಸಿತ ಚರಣೇನ—ರುದ್ರನೇ ಮೊದಲಾದ ಸಕಲ ತತ್ವಾಭಿಮಾನಿ ದೇವತೆ-ಗಳಿಂದ ಸೇವಿಸಲ್ಪಟ್ಟ ಚರಣಗಳುಳ್ಳವನೂ, ಮಮ—ನನ್ನ, ಸರ್ವಾಸು—ಎಲ್ಲ, ಅವಸ್ಥಾಸು—ಜಾಗ್ರದಾದಿ ಅವಸ್ಥೆಗಳಲ್ಲಿ, ಚಿತ್ರಧಾ ವಿಚಿತ್ರಧಾ—ಚಿತ್ರ ವಿಚಿತ್ರ ಪ್ರಕಾರದಿಂದ, ತ್ವದುಪಾಸಕೇನ—ನಿನ್ನನ್ನು ಉಪಾಸಿಸುವವನೂ (ಆದ), ಶ್ರೀಮುಖ್ಯಪ್ರಾಣೇನ— ಶ್ರೀಮುಖ್ಯ-ಪ್ರಾಣನಿಂದ, ಪ್ರೇರಿತಃಸನ್—ಪ್ರೇರಿತನಾಗಿ, ಕರಿಷ್ಯೇ ಎಂಬ ಮುಂದಿನ ವಾಕ್ಯಭಾಗದಿಂದ ಅನ್ವಯವು.

ತಾತ್ಪರ್ಯ: ಶ್ರೀಹರಿಯು ಸರ್ವರ ಸರ್ವಕರ್ಮಗಳ ಕರ್ತನು. ಆತನು ಮಾಡದ ಕರ್ಮವನ್ನು ಅನ್ಯರಾರೂ ಎಂದೂ ಮಾಡಲಾರರು. ಶ್ರೀಹರಿಯು ತನ್ನ ಗುಣ, ರೂಪ, ಕ್ರಿಯೆಗಳಿಂದ ಅತ್ಯಂತ ಅಭಿನ್ನನು. ಸರ್ವಕ್ರಿಯೆಗಳು ಆತನಲ್ಲಿ ಶಕ್ತ್ಯಾತ್ಮನಾ ಇದ್ದು, ಯೋಗ್ಯಕಾಲದಲ್ಲಿ ಮತ್ತು ಯೋಗ್ಯ ಅಧಿಷ್ಠಾನಗಳಲ್ಲಿ ಸಹ, ವ್ಯಕ್ತಗೊಳಿಸಲ್ಪಡುತ್ತವೆ. ಈ ಬ್ರಹ್ಮಾದಿ ಜೀವ ಕರ್ಮಗಳ ಸ್ವತಂತ್ರಕರ್ತನಾದ ಶ್ರೀಹರಿಯ ಕ್ರಿಯಾಕಾರಕ, ಕ್ರಿಯಾತ್ಮಕ ರೂಪಗಳು ಅಸಂಖ್ಯವಾಗಿವೆ. ಈ ರೂಪವನ್ನು ಚಿಂತಿಸಿ, ಆಯಾ ಕರ್ಮಗಳನ್ನು, ತಾನೂ ಮಾಡಿ ಇತರರಿಂದಲೂ ಮಾಡಿಸುವುದರಲ್ಲಿ, ಶ್ರೀಮುಖ್ಯಪ್ರಾಣನು ಸಮರ್ಥನಾಗಿದ್ದಾನೆ. ಶ್ರೀಹರಿಯ ಅನುಗ್ರಹದಿಂದ ಸಮಸ್ತ ಜೀವರ ಸಂಚಿತ ಕರ್ಮರಾಶಿಗಳನ್ನು (ಕರ್ಮಜನಿತ ಪುಣ್ಯಾಪಾಪರೂಪ ಅದೃಷ್ಟಗಳನ್ನು) ಬಲ್ಲವನಾಗಿ ಸ್ವೇಚ್ಛಾನುಸಾರ, ಅವುಗಳನ್ನು ಫಲೋನ್ಮುಖನಾಗಿ ಮಾಡುವ ಮತ್ತು ತದ್ಯುಪಯುಕ್ತ ಕರ್ಮಗಳಲ್ಲಿ ಪ್ರೇರಿಸಿ ಮಾಡಿಸುವ ಸರ್ವಜ್ಞತ್ವವನ್ನೂ ಉಳ್ಳವನಾಗಿದ್ದಾನೆ. ಜಗದ್ರಕ್ಷಕನಾಗಿದ್ದು, ಈ ಬಗ್ಗೆ ತನ್ನನ್ನು ಅನುಗ್ರಸಿರುವ ಕಪಿಲನಾಮಕ ಶ್ರೀಹರಿಯನ್ನು, ಸದಾ ಉಪಾಸಿಸುತ್ತಾನೆ. ಅನಂತವೇದಗಳು ಪರಮ ಮುಖ್ಯವೃತ್ತಿಯಿಂದ ಶ್ರೀಹರಿಯನ್ನೇ ಪ್ರತಿಪಾದಿಸಿದರೂ, ನಾರಾಯಣನಲ್ಲಿ ಮಾತ್ರ ಪ್ರಸಿದ್ಧವಿರುವ (ಅನ್ಯವಾಚಕವಲ್ಲವೆಂಬ ಪ್ರಸಿದ್ಧಿಯನ್ನು ಅನಾದಿಯಿಂದ ಉಳ್ಳವುಗಳಾದ ನಾರಾಯಣಾದಿ ನಾಮಗಳನ್ನುಳಿದು) ಸರ್ವವೇದಗಳು ರಮಾದೇವಿಯನ್ನು ಪ್ರತಿಪಾದಿಸುತ್ತವೆ. ರಮಾದೇವಿಯನ್ನು ಬಿಟ್ಟು ವೇದಪ್ರತಿಪಾದ್ಯರಾದ ಅಗ್ನ್ಯಾದಿ ಇತರ ದೇವತೆಗಳ ಮಧ್ಯದಲ್ಲಿ ಶ್ರೀಮುಖ್ಯಪ್ರಾಣನು ಮುಖ್ಯತಮನು; ರಮಾನಾರಾಯಣರಲ್ಲಿಯೇ ಪ್ರಸಿದ್ಧಗಳಾದ ಕೆಲವು ಶಬ್ದಗಳನ್ನೇ ಬಿಟ್ಟು, ಸರ್ವವೇದ ಮುಖ್ಯಪ್ರತಿಪಾದ್ಯನಾಗಿದ್ದಾನೆ— ಇತರ ದೇವತೆಗಳು ಸ್ವಯೋಗ್ಯತಾನುಸಾರ, ವೇದಗಳ ಏಕದೇಶಗಳಿಂದ (ಕೆಲವು ಭಾಗಗಳಿಂದ), ಅಮುಖ್ಯವೃತ್ತಿಯಿಂದ ಪ್ರತಿಪಾದ್ಯರಾಗಿರುವರು— ಅಗ್ನಿಸೂಕ್ತಾದಿಗಳಿಂದ ಅಗ್ನಿ ಮೊದಲಾದ ದೇವತೆಗಳು ಪ್ರತಿಪಾದ್ಯರಾಗುವಂತೆ. ..ೀಗೆ ಸಕಲ ವೇದಪ್ರತಿಪಾದ್ಯನಾದ ಶ್ರೀಮುಖ್ಯಪ್ರಾಣನು ಸರ್ವಗುಣಪೂರ್ಣನಾಗಿದ್ದಾನೆ — ಜೀವಯೋಗ್ಯ ಸದ್ಗುಣಗಳಾದ ಜ್ಞಾನಭಕ್ತ್ಯಾದಿ ಸರ್ವಗುಣಗಳಿಂದ ಪೂರ್ಣನಾಗಿರುವನು. ಈಶಕೋಟಿಯಲ್ಲಿರುವ ರಮಾನಾರಾಯಣರ ವಿಲಕ್ಷಣಗುಣಗಳನ್ನಾಗಲಿ, ಅವರಂತೆ ಅನಂತಗುಣಗಳನ್ನಾಗಲಿ ಹೊಂದಿದವನಲ್ಲ. ಶ್ರೀಮುಖ್ಯಪ್ರಾಣನು ದುಃಖಾಜ್ಞಾನಾದಿ ಸಕಲ ದೋಷದೂರನೂ ಆಗಿದ್ದಾನೆ. ಅಮುಕ್ತಜೀವರಾಶಿಗಳಲ್ಲಿ ಇವರಂತೆ ದೋಷದೂರರಾದವರು ಯಾರೂ ಇಲ್ಲ— ರುದ್ರಾದಿಗಳಲ್ಲಿ ಅಲ್ಪ ದೋಷಗಳಿಗೆಡೆಯಿದೆ. ಹೇ ರಾಮಚಂದ್ರ ಪ್ರಭೋ! ಆಯಾಕಾಲದ ನಿನ್ನ ಸಂಕಲ್ಪಗಳನ್ನು ತಿಳಿದು,

ನಿನ್ನ ಇಚ್ಛಾನುಸಾರ ವರ್ತಿಸುವ ಚಿತ್ತವುಳ್ಳವನೂ, ನಿನ್ನ ಪರಮಾನುಗ್ರಹಕ್ಕೆ ಪಾತ್ರನೂ, ನನ್ನ ಯೋಗ್ಯತೆಯನ್ನು (ಜೀವರ ಯೋಗ್ಯತೆಯನ್ನು) ಪೂರ್ಣವಾಗಿ ತಿಳಿದವನೂ, ಶ್ರೀಭಾರತೀರಮಣನೂ, ರುದ್ರಾದಿಸಕಲ ತಾತ್ವಿಕದೇವತೆಗಳಿಂದ ಸೇವ್ಯವಾದ ಚರಣಗಳುಳ್ಳವನೂ, ನನ್ನ (ಸರ್ವಜೀವರ) ಜಾಗ್ರದಾದಿ ಸರ್ವಾವಸ್ಥೆಗಳ ನಿಯಾಮಕನಾಗಿ ನನ್ನಲ್ಲಿದ್ದು, ಚಿತ್ರವಿಚಿತ್ರ ರೀತಿಯಲ್ಲಿ ನಿನ್ನನ್ನು ಸೇವಿಸುವ ಶ್ರೀಮುಖ್ಯಪ್ರಾಣನಿಂದ ಪ್ರೇರಿತನಾಗಿ... ಕರಿಷ್ಯೇ ಎಂಬುದರಿಂದ ವಾಕ್ಯಪೂರ್ತಿಯನ್ನು ತಿಳಿಯಬೇಕು.

ಪ್ರಮೇಯ ವಿವರಣೆ: (೧) ಧರ್ಮವೆಂದರೆ ಪುಣ್ಯ; ಸತ್ಕರ್ಮಗಳನ್ನು ಆಚರಿಸುವುದರಿಂದ ಹುಟ್ಟುವ ಕಾಲಾಂತರದಲ್ಲಿ ಅಥವಾ ಜನ್ಮಾಂತರದಲ್ಲಿ ಸುಖಪ್ರಾಪ್ತಿಗೆ ಕಾರಣವಾಗುವ ಅದೃಷ್ಟವಿಶೇಷವು ಪುಣ್ಯವೆನಿಸುತ್ತದೆ. ಅಧರ್ಮವೆಂಬುದು ಇದರ ವಿರುದ್ಧವಾದುದು—ಪಾಪ, ದುಷ್ಕರ್ಮಗಳಿಂದ ಹುಟ್ಟುವ ಭವಿಷ್ಯತ್ಕಾಲದಲ್ಲಿ ದುಃಖಪ್ರಾಪ್ತಿಗೆ ಕಾರಣವಾಗುವ ಶಕ್ತಿವಿಶೇಷವು (ಅದೃಷ್ಟ—ಅತೀಂದ್ರಿಯ ಶಕ್ತಿಯು) ಪಾಪವೆನಿಸುತ್ತದೆ. ..ೀಗೆ ಧರ್ಮಾಧರ್ಮಗಳು ಇಂದ್ರಿಯಗೋಚರವಲ್ಲವೆಂಬ ಕಾರಣದಿಂದ ಅವುಗಳನ್ನು ತಿರಸ್ಕರಿಸಲು ಬಾರದು. ಈಗಿನ ಕರ್ಮಗಳು ಕಾಲಾಂತರದಲ್ಲಿ ಫಲಪ್ರದಗಳಾಗುವುವೆಂಬುದು ಲೌಕಿಕಾನುಭವದಿಂದಲೂ ಸಿದ್ಧವಾಗುತ್ತದೆ. ಯಾವ ಕರ್ಮವೂ, ಸಾಮಾನ್ಯವಾಗಿ, ಕರ್ಮ ಕರಣ ಕ್ಷಣದಲ್ಲಿ ಫಲವನ್ನು ಕೊಡುವುದಿಲ್ಲ. ಪ್ರತಿಜೀವನೂ ಅಸಂಖ್ಯಜನ್ಮಗಳನ್ನು ಹೊಂದುತ್ತಾನೆ—ಒಂದೊಂದು ಜನ್ಮದಲ್ಲಿಯೂ ಅಸಂಖ್ಯಕರ್ಮಗಳನ್ನು ಮಾಡುತ್ತಾನೆ. ಮಾನವ ಜನ್ಮಗಳನ್ನೇ, ಸಹಸ್ರಾರು ಪಡೆಯುತ್ತಾನೆ. ಈ ದೇಹಗಳಲ್ಲಿ ಆಚರಿಸಿದ ಅಸಂಖ್ಯಕರ್ಮಗಳಿಂದ ಉತ್ಪಾದಿತ ಧರ್ಮಾಧರ್ಮ ರೂಪದ ಅದೃಷ್ಟ ವಿಶೇಷಗಳೂ—ಸೂಕ್ಷ್ಮಮನೋಸಂಸ್ಕಾರಗಳೂ, ಅನಂತವಾಗಿರುತ್ತವೆ. ಇಲ್ಲಿ ವಾಕ್ಯ ೨, ಪ್ರ.ವಿ. (೩)ನ್ನು ಓದಿಕೊಳ್ಳಬಹುದು. ..ೀಗಿರಲು ಸಮಸ್ತ ಜೀವರ ಅದೃಷ್ಟಾದಿ ಅತೀಂದ್ರಿಯ ವಸ್ತುಜ್ಞಾನವುಳ್ಳವನಾಗಿ, ಅವುಗಳಲ್ಲಿ ಯಾವುದನ್ನು ಯಾವ ಕಾಲದಲ್ಲಿ ಉದ್ಬೋಧಿಸಿ ಜೀವರನ್ನು ತದ್ಯೋಗ್ಯಕರ್ಮಗಳಲ್ಲಿ ಪ್ರವೃತ್ತರಾಗುವಂತೆ ಮಾಡಬೇಕೆಂಬುದನ್ನು ನಿರ್ಣಯಿಸಿ, ಆಯಾ ಕ್ರಿಯೆಗಳಲ್ಲಿ ಪ್ರೇರಿಸುವ ಕಾರ್ಯವು ಅಚಿಂತ್ಯಾದ್ಭುತ ಸರ್ವಜ್ಞತ್ವವುಳ್ಳವನಿಂದ ಮಾತ್ರ ಸಾಧ್ಯವಾಗಬಹುದೆಂಬುದನ್ನು ಸುಲಭವಾಗಿ ಮನಗಾಣಬಹುದು. ಈ ಎಲ್ಲವನ್ನು ನಿರ್ವಹಿಸುವ ಸ್ವತಂತ್ರಪ್ರಭು, ಸರ್ವಜ್ಞನಾದ ಶ್ರೀಹರಿಯೇ, ಆತನ ಅನುಗ್ರಹದಿಂದ ಆತನ ಸಂಕಲ್ಪಗಳನ್ನು ಆಯಾ ಕಾಲದಲ್ಲಿ ತಿಳಿದು, ಆತನೊಬ್ಬನ ಅಧೀನನಾಗಿ, ತದನುಸಾರಜೀವರನ್ನು ಪ್ರೇರಿಸುವ ಶ್ರೀಮುಖ್ಯಪ್ರಾಣನೂ, ಜೀವ ಪ್ರೇರಣಕಾರ್ಯಕ್ಕೆ ಅವಶ್ಯಕವಾದ ಸಮಸ್ತ (ಅದೃಷ್ಟಾದಿ) ವಿಶೇಷಗಳನ್ನು ಆತನ ಅನುಗ್ರಹಬಲದಿಂದಲೇ ತಿಳಿದ

ಸರ್ವಜ್ಞನು. *'ಅತಃ ಪೂರ್ಣಾಗುಣಾಃ ಸರ್ವೇ ನಿಸ್ಸೀಮಾನಂದ ಭೋಜಿನಃ। ಅಕ್ಷೀಣಪೂರ್ಣವಿಜ್ಞಾನಾಃ ಸತ್ಯ ಕಾಮಾಶ್ಚ ಸರ್ವಶಃ॥* (ಸ.ರ.ಮಾ) ಇತ್ಯಾದಿ ವಾಕ್ಯಗಳು ನಿರೂಪಿಸುವಂತೆ, ತಾತ್ವಿಕ ದೇವತೆಗಳು ಸಹ, ಗುಣಪೂರ್ಣರೂ, ನಷ್ಟಗೊಳ್ಳದ ಪೂರ್ಣವಿಜ್ಞಾನವುಳ್ಳವರೂ ಆಗಿರುವಾಗ, ಅವರೆಲ್ಲರ ನಿಯಾಮಕನಾದ ಶ್ರೀಮುಖ್ಯಪ್ರಾಣನು ಗುಣಪೂರ್ಣನೂ ಮಹಾಸರ್ವಜ್ಞನೂ ಎಂದು ಹೇಳಲೇನು! ಸಮಸ್ತ ಜೀವರ ಸಕಲ ಕರ್ಮಪ್ರೇರಕವಾದ ಶ್ರೀಹರಿಯ ಅನಂತ ಕ್ರಿಯಾತ್ಮಕ ರೂಪವಿಶೇಷಗಳನ್ನು ತಿಳಿದು, ಪ್ರತಿರೂಪದ ಮುಖ್ಯಪ್ರತಿಬಿಂಬನಾಗಿ ಸಮಸ್ತ-ಕ್ರಿಯೆಗಳ ಪ್ರೇರಕನೂ—ಪ್ರಚೋದಕನೂ—ಕರ್ತನೂ ಆಗಿರುವ ಶ್ರೀಮುಖ್ಯ-ಪ್ರಾಣನೂ ಅನಂತಜೀವರ ನಿಯಮನಕ್ಕೆ ಕಾರಣವಾದ ಅನಂತರೂಪಗಳುಳ್ಳವನು. ಶ್ರೀಹರಿಯ ನಂತರ ವಿಚಿತ್ರವಾದ ಅದ್ಭುತ ಅಚಿಂತ್ಯ ಮ್ಮಮನು ಶ್ರೀಮುಖ್ಯ-ಪ್ರಾಣನೇ. *'ಏಕೋ ಹಿ ಕರ್ತಾ ಸರ್ವಸ್ಯ ರಮಾನಾಥಪ್ರಸಾದತಃ। ಪದಪ್ರದಶ್ಚ ದೇವಾನಾಂ ತತ್ತಚ್ಛಕ್ತಿ ಪ್ರದಸ್ತಥಾ। ಅನಂತಾನಂತರೂಪೇಣ ಜಗದ್ಯಮಯತೀಶ್ವರಃ। ಜಾಗ್ರತ್ಸ್ವಪ್ನಸುಷುಪ್ತ್ಯಾದಿ ಸರ್ವಾವಸ್ಥಾನಿಯಾಮಕಃ॥* (ಸ.ರ.ಮಾ) ಇತ್ಯಾದಿ ವಾಕ್ಯ-ಗಳಲ್ಲಿ ಈತನ ಅದ್ಭುತ ಮ್ಮಮೆಯು ನಿರೂಪಿಸಲ್ಪಟ್ಟಿದೆ.

ಈ ಶ್ಲೋಕಗಳ ತಾತ್ಪರ್ಯಾರ್ಥ ..ೀಗಿದೆ: 'ರಮಾನಾಥನ ಅನುಗ್ರಹದಿಂದ, ಮುಖ್ಯಪ್ರಾಣನು ಅನಂತಾನಂತರೂಪಗಳನ್ನು ಸ್ವೀಕರಿಸಿ ಅನಂತಜೀವರಲ್ಲಿದ್ದು ಸರ್ವ-ವನ್ನೂ ಮಾಡಿ ಮಾಡಿಸುವ ಕರ್ತನಾಗಿದ್ದಾನೆ; ದೇವತೆಗಳಿಗೆ ಅವರವರ ಪದಗಳನ್ನು ಕೊಟ್ಟು, ಆ ಪದಗಳಲ್ಲಿದ್ದು ತಮ್ಮ ಕಾರ್ಯಗಳನ್ನು ನಿರ್ವ:ಸುವ ಶಕ್ತಿಯನ್ನು ಕೊಡು-ವವನೂ ಆತನೇ ಆಗಿದ್ದಾನೆ; ಸರ್ವರ ಜಾಗ್ರದಾದಿ ಸರ್ವಾವಸ್ಥೆಗಳ ನಿಯಾಮಕನೂ ಆಗಿದ್ದಾನೆ.' ಅಚಿಂತ್ಯಾದ್ಭುತಮ್ಮಮನೆಂದು ಶಬ್ದಗಳಿಂದ ಹೇಳಬಹುದಲ್ಲದೇ, ಮುಖ್ಯಪ್ರಾಣನ ಮ್ಮಮೆಯನ್ನು ಬುದ್ಧಿಯಿಂದ ಗ್ರಸುವುದು (ಮನಸಾ ಕಲ್ಪಿಸಿ-ಕೊಳ್ಳುವುದು ಸಹ) ದುಸ್ಸಾಧ್ಯವೇ ಸರಿ. ಈತನ ಮ್ಮಮೆಯೇ ..ೀಗಿರಲು, ಅನಂತಮಡಿ ಅಧಿಕವಾದ ಅಚಿಂತ್ಯಾದ್ಭುತ ಮ್ಮಮನಾದ ಶ್ರೀಹರಿ ಮ್ಮಮೆಯು ಅವಾಙ್ಮಾನಸಗೋಚರವೆಂದೂ, ಶ್ರೀಮಹಾಲಕ್ಷ್ಮಿಯೂ ಏಕಾಂಶವನ್ನು ಮಾತ್ರ ತಿಳಿದಿರುವಳೆಂದೂ, ಶ್ರೀಹರಿಯನ್ನು ನಿತ್ಯನೂತನನನ್ನಾಗಿಯೇ ಕಾಣುತ್ತಿರುವಳೆಂದೂ ನಿರೂಪಿಸುವುದನ್ನು ಅಸಂಭಾವಿತವೆನ್ನಲಾದೀತೇ? ಸರ್ವಥಾ ಇಲ್ಲ.

(೨) ಶ್ರೀಬ್ರಹ್ಮ-ವಾಯುಗಳು, ರಮಾನಾರಾಯಣರ ನಂತರ ಸರ್ವವೇದ ಪ್ರತಿಪಾದ್ಯರೆಂಬ ಪ್ರಮೇಯದ ವಿವರಣೆಯನ್ನು ವಾಕ್ಯ ೨, ಪ್ರ.ವಿ (೩)ರಲ್ಲಿ ನೋಡಿ ತಿಳಿಯಬೇಕು.

(೩) 'ತದ್ವಾಚಕ ಕಪಿಲೋಪಾಸಕೇನ' ಎಂಬಲ್ಲಿ ಉಕ್ತವಾದ ಪ್ರಮೇಯವನ್ನು ಹೀಗೆ ತಿಳಿಯಬಹುದು: ಸುಖರೂಪತ್ವಾತ್‌ಕಃ, ಪಾಲ್ಯತೇ ಜಗತ್ ಅನೇನೇತಿ ಪಿಃ-ಕಪಿಃ; 'ಲಾ' ದಾನೇ ಎಂದಿರುವುದರಿಂದ ಈ ಕಪಿತ್ವವನ್ನು ಕೊಡುವನಾದ್ದರಿಂದ 'ಕಪಿಲ'ನು ಮಾರುತಿಯನ್ನು ಅನುಗ್ರಸುವವನೆಂದರ್ಥ, ಸುಖರೂಪನೂ, ಜಗದ್ರಕ್ಷಕನೂ ಆದ್ದರಿಂದ ಶ್ರೀಹರಿಯು 'ಕಪಿ' ಎನಿಸುತ್ತಾನೆ. ಶ್ರೀಮುಖ್ಯಪ್ರಾಣನೂ ಸುಖರೂಪನು (ದುಃಖರಹಿತನು—ಮುಕ್ತಪ್ರಾಯನು); ಶ್ರೀಹರಿಯ ಆಜ್ಞೆಯಿಂದ ಜಗತ್ತನ್ನೂ ರಕ್ಷಿಸುತ್ತಾನೆ. ಈ ಶಕ್ತಿಯನ್ನು ಮುಖ್ಯಪ್ರಾಣನಿಗೆ ಅನುಗ್ರಸುವುದರಿಂದ ಶ್ರೀಹರಿಯು ಕಪಿಲನು. ಹೀಗೆ ತಿಳಿದು ಕಪಿಲನನ್ನು ಉಪಾಸಿಸುವವನು, ಶ್ರೀಮುಖ್ಯ-ಪ್ರಾಣನು.

(೪) ಈ ವಾಕ್ಯದ ಪ್ರ.ವಿ. (೧) ರಲ್ಲಿ ಶ್ರೀಮುಖ್ಯಪ್ರಾಣನು, ಸರ್ವರ ಜಾಗ್ರದಾದಿ ಅವಸ್ಥೆಗಳ ನಿಯಾಮಕನೆಂದು ಹೇಳಿದೆಯಷ್ಟೆ. ಅದರ ವಿವರವು ಹೀಗಿದೆ: ಮನುಷ್ಯ-ಸಾಮಾನ್ಯರಿಗೆ ಅನುಭವಸಿದ್ಧವಾದ ಅವಸ್ಥೆಗಳು ಮೂರು. ಜಾಗ್ರತ್, ಸ್ವಪ್ನ, ಸುಷುಪ್ತಿ (ನಿದ್ರೆ)ಗಳೆಂಬುದೇ ಆ ಮೂರು. ಧ್ಯಾನಸಿದ್ಧಿ ಪಡೆದ ಕೆಲವರಿಗೆ, ತುರೀಯವೆಂದು ಕರೆಯಲ್ಪಡುವ ನಾಲ್ಕನೆಯ ಒಂದು ಅವಸ್ಥೆಯ ಅನುಭವವೂ ಇರುತ್ತದೆ. ಇದನ್ನು ಅಸಂಪ್ರಜ್ಞಾತ ಸಮಾಧಿಯೆನ್ನುವರು. ಮನಸ್ಸು ಏಕತ್ರ ನಿಲ್ಲದೆ, ಧ್ಯಾನಗುರಿಯನ್ನು ಬಿಟ್ಟು, ಪುನಃ ಪುನಃ ಚಲಿಸುತ್ತಿದ್ದರೆ (ಮನೋಧಾರೆಯಲ್ಲಿ ವಿಚ್ಛಿತ್ತಿ-ಛಿದ್ರ ಉಂಟಾಗು-ತ್ತಿದ್ದರೆ) ಮನಸ್ಸಿನ ಈ ಸ್ಥಿತಿಯನ್ನು 'ಧಾರಣ'ವೆಂದೂ, ಯತ್ನಪೂರ್ವಕವಾಗಿ ಏಕತ್ರ ಬಹುಕಾಲ ಚಲಿಸದೆ ನಿಂತರೆ 'ಧ್ಯಾನ'ವೆಂದೂ, ಪ್ರಯತ್ನವಿಲ್ಲದೇ (ಅವರವರ ಯೋಗ್ಯತೆಯಿರುವಷ್ಟು ದೀರ್ಘಕಾಲ) ಏಕತ್ರ ನಿಂತರೆ ಅದನ್ನು 'ಸಮಾಧಿ'ಯೆಂದೂ ಕರೆಯಲಾಗುತ್ತದೆ. ಸಮಾಧಿಯು, ಸಂಪ್ರಜ್ಞಾತ ಮತ್ತು ಅಸಂಪ್ರಜ್ಞಾತಗಳೆಂದು ಎರಡು ವಿಧ. ಸಂಪ್ರಜ್ಞಾತ ಸಮಾಧ್ಯವಸ್ಥೆಯಲ್ಲಿರುವಾಗ ಬಾಹ್ಯ ಶಬ್ದಾದಿಗಳ ಆಧಿಕ್ಯ-ದಿಂದ ಮನಸ್ಸು ಧ್ಯಾನದ ಗುರಿಯಿಂದ ಚಲಿಸುತ್ತದೆ ಮತ್ತು ಬಾಹ್ಯ ಜ್ಞಾನಸಹಿತವಾದ ಧ್ಯಾನವಸ್ತುವಿನ ಜ್ಞಾನವೂ ಇರಬಹುದು. ಆದರೆ ಅಸಂಪ್ರಜ್ಞಾತ ಸಮಾಧಿಯಲ್ಲಿ ಬಾಹ್ಯ ಪ್ರಬಲಕಾರಣಗಳಿಂದ ಸಹ (ಸಿಡಿಲು-ವಿಷಜಂತುಗಳು ಕಚ್ಚುವಿಕೆ ಮೊದ-ಲಾದ್ದರಿಂದ ಸಹ) ಮನಸ್ಸು ಚಲಿಸಿ ಜಾಗ್ರದವಸ್ಥೆಗೆ ತಿರುಗುವುದಿಲ್ಲ. ಈ ನಾಲ್ಕು ಅವಸ್ಥೆಗಳಿಗೆ, ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯಗಳೆಂಬ ಶ್ರೀಹರಿಯ ರೂಪಗಳು ನಿಯಾಮಕಗಳು (ಮಾಂಡೂಕೋಪನಿಷತ್ತು ಈ ರೂಪಗಳ ಮಹಿಮೆ ಮತ್ತು ನಿಯಾಮಕ ವ್ಯಾಪಾರಗಳನ್ನು ನಿರೂಪಿಸುತ್ತದೆ). ಈ ಭಗವದ್ರೂಪ-ಗಳೊಂದಿಗೆ ಇದ್ದು, ಶ್ರೀಮುಖ್ಯಪ್ರಾಣನು, ಈ ಅವಸ್ಥೆಗಳ ನಿಯಾಮಕನಾಗಿ

ಭಗವತ್ಕಾರ್ಯ ನಿರ್ವಾಹಕನಾಗಿರುತ್ತಾನೆ. ಜಗತ್ಸಂಬಂಧವನ್ನು ಪೂರ್ಣವಾಗಿ ತೊರೆದು ಸ್ವರೂಪಸ್ಥಿತಿಯಲ್ಲಿರುವ ಮುಕ್ತಜೀವರ ಸ್ಥಿತಿಯೇ ಮುಖ್ಯವಾಗಿ ತುರೀಯ ಶಬ್ದದಿಂದ ಹೇಳಲ್ಪಡುತ್ತದೆ. ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಜೀವನು, 'ಜೀವನ್ಮುಕ್ತ'ನೆಂದೇ ಕರೆಯಲ್ಪಡುತ್ತಾನೆ. ಸಮಾಧಿಯು ಮುಕ್ತಾವಸ್ಥೆಗೆ ಸದೃಶವಾದುದು— ಮುಕ್ತನಿಯಾಮಕ ಭಗವಂತನೇ ಈ ಅವಸ್ಥೆಗೂ ನಿಯಾಮಕನು. 'ಜಾಗ್ರತ್ಸ್ವಪ್ನ ಸುಷುಪ್ತ್ಯಾದಿ' ಎಂಬಲ್ಲಿರುವ ಆದಿಶಬ್ದದಿಂದ ಮೂರ್ಛೆ, ಮರಣಾವಸ್ಥೆ (ಮುಮೂರ್ಷಾ) ಮೊದಲಾದ ವಿವಿಧಲಕ್ಷಣಗಳುಳ್ಳ ಅವಸ್ಥೆಗಳನ್ನು ಇಟ್ಟುಕೊಳ್ಳಬೇಕು. ಇವೆಲ್ಲಕ್ಕೂ ಶ್ರೀಮುಖ್ಯಪ್ರಾಣನೆ ನಿಯಾಮಕನು. ಈ ವಾಕ್ಯದಲ್ಲಿ ಪ್ರಸಕ್ತವಾಗಿರುವ ಇತರ ಪ್ರಮೇಯಗಳು ಈ..ಂದೆ ಇತರ ವಾಕ್ಯಗಳಲ್ಲಿ ಪ್ರಸಕ್ತಿ ಬಂದಾಗ ಬಹುವಾಗಿ ವಿವರಿಸಲ್ಪಟ್ಟಿವೆ.

**೨೯. ತ್ವತ್‌ಸಂಸ್ಮೃತಿಪೂರ್ವಕಂ ಶಯನಾತ್ ಸಮುತ್ಥಾಯ ಅದ್ಯತನಂ ಸ್ವವರ್ಣಾಶ್ರಮೋಚಿತಂ ದೇಶಕಾಲಾವಸ್ಥೋಚಿತಂ ನಿತ್ಯನೈಮಿತ್ತಿಕಕಾಮ್ಯಭೇದೇನ ತ್ರಿವಿಧಂ ತ್ವತ್ಪೂಜಾತ್ಮಕಂ ಕರ್ಮ ಯಥಾಶಕ್ತಿ ಯಥಾಜ್ಞಪ್ತಿ ಯಥಾವೈಭವಂ ಕರಿಷ್ಯೇ, ಮದಾಜ್ಞಾಕಾರಿಭಿಃ ವಿದ್ಯಾಸಂಬಂಧಿಭಿಃ ದೇಹಸಂಬಂಧಿಭಿಶ್ಚ ತ್ವದೀಯೈಃ ಅಶೇಷೈರ್ಜನೈಃ ತತ್‌ಸರ್ವಕರ್ಮಕರ್ತೃತ್ವ ಕಾರಯಿತೃತ್ವಾದ್ಯನುಸಂಧಾನಪೂರ್ವಕಂ ಕಾರಯಿಷ್ಯೇ ಚ॥**

ಪ್ರತಿಪದಾರ್ಥ: ತ್ವತ್ಸಂಸ್ಮೃತಿಪೂರ್ವಕಂ— ನಿನ್ನ ಸ್ಮರಣೆಯನ್ನೇ ಮುಂದೆ ಮಾಡಿಕೊಂಡು (ಹರಿಸ್ಮರಣಯುಕ್ತನಾಗಿ), ಶಯನಾತ್— ಹಾಸಿಗೆಯಿಂದ, ಸಮುತ್ಥಾಯ— ಎಚ್ಚರಗೊಂಡು ಮೇಲೆದ್ದು, ಅದ್ಯತನಂ— ಈ ದಿನವೆಲ್ಲ (ವರ್ತಮಾನ ದಿನದಲ್ಲಿ), ಸ್ವವರ್ಣಾಶ್ರಮೋಚಿತಂ — ನನ್ನ ವರ್ಣ ಮತ್ತು ಆಶ್ರಮಕ್ಕೆ ಉಚಿತವಾದ, ದೇಶಕಾಲಾವಸ್ಥೋಚಿತಂ— ದೇಶ, ಕಾಲ, ಅವಸ್ಥೆಗಳಿಗೆ ಯೋಗ್ಯವಾದ, ನಿತ್ಯನೈಮಿತ್ತಿಕಕಾಮ್ಯಭೇದೇನ— ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಗಳೆಂಬ ವ್ಯತ್ಯಾಸದಿಂದ, ತ್ರಿವಿಧಂ— ಮೂರು ವಿಧವಾಗಿರುವ, ತ್ವತ್ಪೂಜಾತ್ಮಕಂ— ನಿನ್ನ ಪೂಜಾರೂಪವಾದ, ಕರ್ಮ— ಕರ್ಮವನ್ನು, ಯಥಾಶಕ್ತಿ— ನನ್ನ ಶಕ್ತಿಯಿದ್ದಷ್ಟು, ಯಥಾಜ್ಞಪ್ತಿ— ಜ್ಞಾನವಿದ್ದಷ್ಟು, ಯಥಾ ವೈಭವಂ— ದ್ರವ್ಯಾದಿ ಸಂಪದನುಸಾರವಾಗಿ, ಕರಿಷ್ಯೇ— ಮಾಡುತ್ತೇನೆ, ಮದಾಜ್ಞಾಕಾರಿಭಿಃ— ನನ್ನ ಆಜ್ಞಾನುವರ್ತಿಗಳಿಂದಲೂ, ವಿದ್ಯಾ-ಸಂಬಂಧಿಭಿಃ— ವಿದ್ಯಾನಿಮಿತ್ತವಾದ ನನ್ನ ಸಂಬಂಧಿಗಳಿಂದಲೂ (ಶಿಷ್ಯಾದಿಗಳಿಂದಲೂ), ದೇಹಸಂಬಂಧಿಭಿಶ್ಚ— ದೇಹನಿಮಿತ್ತವಾದ ಸಂಬಂಧವುಳ್ಳವರಿಂದಲೂ (ಬಂಧು ಜನ-ರಿಂದಲೂ), ತ್ವದೀಯೈಃ— ನಿನ್ನವರಾದ (ನಿನ್ನಲ್ಲಿ ಭಕ್ತಿಯುಳ್ಳ), ಅಶೇಷೈಃ ಜನೈಃ— ಸಮಸ್ತ ಜನರಿಂದಲೂ, ತ್ವತ್ಸರ್ವಕರ್ತೃತ್ವ ಕಾರಯಿತೃತ್ವಾದ್ಯನುಸಂಧಾನ ಪೂರ್ವಕಂ— ನೀನೇ ಸರ್ವಕರ್ತನೂ ಸರ್ವರಿಂದ ಸರ್ವವನ್ನು ಮಾಡಿಸತಕ್ಕವನೂ ಎಂಬ ಮುಂತಾದ ಅನುಸಂಧಾನಯುಕ್ತನಾಗಿ (ಅವರೆಲ್ಲರೂ ಹೇಗೆ ಈ ಅನುಸಂಧಾನ ಪೂರ್ವಕ ಕರ್ಮಗಳನ್ನು ಮಾಡಬೇಕೋ ಹಾಗೆ), ಕಾರಯಿಷ್ಯೇ— ಮಾಡಿಸುತ್ತೇನೆ; ಚ— ನಾನು ಮಾಡುವುದಲ್ಲದೇ ಅವರಿಂದಲೂ ಮಾಡಿಸುತ್ತೇನೆ.

ತಾತ್ಪರ್ಯ: ಶ್ರೀರಾಮಚಂದ್ರಪ್ರಭೋ! (ನಿತ್ಯವೂ) ಎಚ್ಚರವಾದೊಡನೆ ನಿನ್ನ ಸ್ಮರಣೆ ಸ್ವತನಾಗಿಯೇ ಹಾಸಿಗೆಯಿಂದ ಮೇಲೆದ್ದು, ಅಲ್ಲಿಂದ ಮೊದಲ್ಗೊಂಡು ಈ ದಿನವೆಲ್ಲ, ನನ್ನ ವರ್ಣಾಶ್ರಮೋಚಿತವಾದ (ವಿಧ್ಯುಕ್ತ) ಕರ್ಮಗಳನ್ನು ಯಥೋಚಿತ-ವಾಗಿ ಮಾಡುತ್ತೇನೆ; ಅವುಗಳನ್ನು ದೇಶ, ಕಾಲ, ಅವಸ್ಥೆಗಳನ್ನನುಲಕ್ಷಿಸಿ ಯಥಾ-ಯೋಗ್ಯವಾಗಿ ಆಚರಿಸುತ್ತೇನೆ; ನನ್ನಿಂದ ಆಚರಿಸಲ್ಪಡುವ ಆ ಕರ್ಮಗಳು, ನಿತ್ಯ ನೈಮಿತ್ತಿಕ ಮತ್ತು ಕಾಮ್ಯಗಳೆಂಬ ಭೇದ—ತ್ರಿವಿಧವಾಗಿರುತ್ತದೆ. ಇವೆಲ್ಲವನ್ನು ನಿನ್ನ ಪೂಜೆಯೆಂದು ತಿಳಿದೇ ಆಚರಿಸುತ್ತೇನೆ. ನಿನ್ನ ಅನುಗ್ರಹದಿಂದ ನನಗಿರುವ ಶಕ್ತಿ, ಜ್ಞಾನ ಮತ್ತು ಸಂಪದಾದಿಗಳನ್ನು ಉಚಿತವಾದ ರೀತಿಯಲ್ಲಿ ಆಚರಿಸುತ್ತೇನೆ; ನಾನು ಆಚರಿಸುವುದು ಮಾತ್ರವಲ್ಲ—ನನ್ನ ಆಜ್ಞಾನುವರ್ತಿಗಳಾದ ಶಿಷ್ಯರಿಂದಲೂ, ಬಂಧು-ವರ್ಗದ ಜನರಿಂದಲೂ, ನಿನ್ನಲ್ಲಿ ಭಕ್ತಿಯುಳ್ಳ ಜನರಿಂದಲೂ ನೀನೇ ಸ್ವತಂತ್ರನಾಗಿ ಸರ್ವವನ್ನು ಮಾಡಿ ಮಾಡಿಸುವಿ ಎಂಬ ಮುಂತಾದ ಸದ್ಭಾವನೆಗಳುಳ್ಳವರಾಗಿ, ಆಚರಿಸುವಂತೆ ಮಾಡುತ್ತೇನೆ.

ಪ್ರಮೇಯ ವಿವರಣೆ: (೧) ಶ್ರೀಮದಾಚಾರ್ಯರು, ಸದ್ಭಕ್ತರ ಅನುಷ್ಠಾನಕ್ಕಾಗಿ ಪ್ರತಿದಿನದ ಕರ್ತವ್ಯಗಳನ್ನು ನಿರೂಪಿಸುವ ತಮ್ಮ *'ಸದಾಚಾರ ಸ್ಮೃತಿ'* ಎಂಬ ಗ್ರಂಥದಲ್ಲಿ, *'ಸ್ಮೃತ್ವಾವಿಷ್ಣುಂ ಸಮುತ್ಥಾಯ ಕೃತಶೌಚೋಯಥಾವಿಧಿ'* ಎಂದು ಆರಂಭವಾಗುವ ವಾಕ್ಯಸಮೂಹಗಳಿಂದ, ಹಾಸಿಗೆಯಿಂದ ಎದ್ದ ಕ್ಷಣದಿಂದ ಆಚರಿಸ-ಬೇಕಾದ ನಿಯಮಗಳನ್ನು ಹೇಳಿದ್ದಾರೆ. *'ಸ್ಮೃತ್ವಾವಿಷ್ಣುಂ ಸಮುತ್ಥಾಯ'* ಎಂಬುದ-ರಿಂದ, ಎಚ್ಚರವಾದೊಡನೆ ಮೊದಲಿನ ಮನೋವ್ಯಾಪಾರವು ಹರಿಸ್ಮರಣೆಯಾಗಿರ-ತಕ್ಕದ್ದೆಂದು ಸೂಚಿಸುತ್ತ ಹರಿಸ್ಮರಣಪೂರ್ವಕವಾಗಿಯೇ ಹಾಸಿಗೆಯಿಂದೇಳ-ಬೇಕೆಂದಿದ್ದಾರೆ.

(೨) ದೇಹೇಂದ್ರಿಯಾದಿಗಳಿಂದ ಸಂಭವಿಸುವ ಸರ್ವ ಕ್ರಿಯೆಗಳನ್ನೂ ಶ್ರೀಹರಿ -ಪೂಜೆಯೆಂದು ತಿಳಿಯುವುದು ಆವಶ್ಯಕ. ಈ ಅನುಸಂಧಾನವು ಉತ್ತಮ ಜ್ಞಾನಿ-ಗಳಿಗೆ ಮಾತ್ರ ಸಿದ್ಧಿಸಿರುತ್ತದೆ. ಅಪರೋಕ್ಷಜ್ಞಾನವಾಗುವ ಮೊದಲು, ಅದಕ್ಕಾಗಿ ಸಾಧನದಲ್ಲಿ ತೊಡಗಿರುವ ಮೋಕ್ಷಾಪೇಕ್ಷೆಗಳು ಅಂತಃಕರಣ ಶುದ್ಧಿಯದ್ವಾರಾ ಅಪ-ರೋಕ್ಷ ದರ್ಶನಕ್ಕೆ ಕಾರಣವಾಗುವ ಶ್ರೀಹರಿಪ್ರಸಾದವನ್ನು ದೊರಕಿಸುವ, ವಿಧ್ಯುಕ್ತ-ವರ್ಣಾಶ್ರಮೋಚಿತ ಕರ್ಮಗಳನ್ನು ತಪ್ಪದೇ ಆಚರಿಸಬೇಕು. ಇದು ಶ್ರೇಷ್ಠ-ಭಗವತ್ಪೂಜೆಯು. ಗೀತಾತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು, *'ಸ್ವವಿಹಿತ-ವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋಧರ್ಮಃ ತದ್ವಿರುದ್ಧಃ ಸರ್ವೋಽಪ್ಯ-ಧರ್ಮಃ'*—ಸ್ವವಿಹಿತಕರ್ಮಗಳನ್ನು (ತನ್ನ ವರ್ಣ ಮತ್ತು ಆಶ್ರಮಗಳಿಗೆ ಶಾಸ್ತ್ರಗಳಲ್ಲಿ

ವಿಧಿಸಲ್ಪಟ್ಟಿರುವ ಕರ್ಮಗಳನ್ನು) ಆಚರಿಸಿ, ನಿಷೇಧಿಸಲ್ಪಟ್ಟಿರುವ ಕರ್ಮಗಳನ್ನು ತ್ಯಜಿಸಿ, ಶ್ರೀಹರಿಪ್ರೀತಿಯನ್ನು ಮಾತ್ರ ಉದ್ದೇಶಿಸಿ, ಆತನಲ್ಲಿ ಅರ್ಪಿಸುವುದೇ ಪರಮ-ಧರ್ಮವೆಂದು ಹೇಳಿರುವರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ವರ್ಣಗಳು ನಾಲ್ಕು. ಬ್ರಹ್ಮಚರ್ಯ, ಗಾರ್ಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂದು ಆಶ್ರಮಗಳು ನಾಲ್ಕು. ಆಯಾ ವರ್ಣ ಮತ್ತು ಆಶ್ರಮಗಳಿಗೆ ಉಚಿತವಾದ ಕರ್ಮಗಳಾವುವೆಂಬು-ದನ್ನು ಧರ್ಮಶಾಸ್ತ್ರಗ್ರಂಥಗಳಿಂದ ತಿಳಿಯಬೇಕು. ವಿಧಿ ನಿಷೇಧಗಳನ್ನು ವಿಧಿಸುವ ಶ್ರುತಿಸ್ಮೃತಿಗಳು ಮತ್ತು ವರ್ಣಾಶ್ರಮ ಧರ್ಮಗಳನ್ನು ನಿರೂಪಿಸುವ ಧರ್ಮಶಾಸ್ತ್ರ-ಗಳು ಶ್ರೀಹರಿಯ ಆಜ್ಞಾರೂಪವಾದವುಗಳು. ವಿಹಿತ ಕರ್ಮಗಳನ್ನು ನಿಷ್ಕಾಮನಾಗಿ ಆಚರಿಸಿ, ಭಕ್ತಿಪೂರ್ವಕ ಶ್ರೀಹರಿಯಲ್ಲಿ ಅರ್ಪಿಸುವುದು ಶ್ರೇಷ್ಠ ವಿಷ್ಣುಪೂಜೆ. ಸ್ವಾಮಿಯ ಪ್ರಸನ್ನತೆಯನ್ನು ಪಡೆಯಲು ಭೃತ್ಯನಿಗೆ ಆತನ ಆಜ್ಞಾಪರಿಪಾಲನೆಗಿಂತ ಉತ್ತಮ ಸಾಧನವಿಲ್ಲ.

(೩) ಭಿನ್ನವರ್ಣ ಭಿನ್ನ ಆಶ್ರಮಗಳಿಗೆ ಭಿನ್ನ ಭಿನ್ನಗಳಾದ (ಪ್ರತ್ಯೇಕ) ಕರ್ಮಗಳು ವಿಧಿಸಲ್ಪಟ್ಟಿವೆ. ವಿಧ್ಯುಕ್ತಕರ್ಮಗಳು, ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಗಳೆಂದು ಮೂರು ವಿಧವಾಗಿವೆ. ನಿತ್ಯವೂ ತಪ್ಪದೇ ಆಚರಿಸಲೇಬೇಕಾದ ಸ್ನಾನ, ಸಂಧ್ಯಾವಂದನೆ, ದೇವತಾರ್ಚನೆ, ಗೃಹಸ್ಥರ ಬ್ರಹ್ಮಯಜ್ಞ, ವೈಶ್ವದೇವಾದಿಗಳು ನಿತ್ಯಕರ್ಮಗಳು; ಇವು-ಗಳನ್ನು ಆಚರಿಸುವುದರಿಂದ ಐಹಿಕ ಸಂಪದಾದಿ ಅಭಿವೃದ್ಧಿಗೆ ಕಾರಣವಾಗುವ ಪುಣ್ಯ-ವಿಲ್ಲ—ತ್ಯಜಿಸಿದರೆ ನರಕಾದಿ ದುಃಖಕ್ಕೆ ಕಾರಣವಾಗುವ ಪ್ರತ್ಯವಾಯವಿದೆ. ಕಾಲವಿಶೇಷಗಳಲ್ಲಿ ಮಾತ್ರ ಆಚರಿಸಬೇಕಾದ ಕರ್ಮಗಳು ನೈಮಿತ್ತಿಕ ಕರ್ಮಗಳೆನಿಸು-ತ್ತವೆ. ಗ್ರಹಣ, ಪರ್ವ ಮೊದಲಾದ ಕಾಲಗಳಲ್ಲಿ ಆಚರಿಸಬೇಕಾದ ಪಿತೃತರ್ಪಣ ದಾನಾದಿ ಕರ್ಮಗಳು ಈ ಗುಂಪಿಗೆ ಸೇರುತ್ತವೆ. ನಿರ್ದಿಷ್ಟಫಲಗಳನ್ನು ಕೋರಿ ಮಾಡುವ ಕರ್ಮಗಳು ಕಾಮ್ಯಗಳು, ಉದಾಹರಣೆ: ಸಂತಾನಾಪೇಕ್ಷೆಯಿಂದ, ವೃಷ್ಟಿಗಾಗಿ (ಮಳೆಗಾಗಿ) ಆಚರಿಸುವ ನಾಗಪ್ರತಿಷ್ಠೆ—ಪುತ್ರಕಾಮೇಷ್ಟಿ ಅಥವಾ ಕಾರೀರ್ಯಾದಿ ಯಾಗಗಳು ಮತ್ತು ನಾನಾ ವ್ರತವಿಶೇಷಗಳು. ಇದು, ತ್ರಿವಿಧಕರ್ಮಗಳ ಸಾಧಾರಣ ಸ್ವರೂಪನಿರೂಪಣೆ ಮಾತ್ರ. ವಿವರಗಳನ್ನು ಧರ್ಮಶಾಸ್ತ್ರಾದಿ ಗ್ರಂಥ-ಗಳಿಂದ ತಿಳಿಯಬಹುದು. ಒಂದು ಕರ್ಮವು, ಕರ್ಮವನ್ನಾಚರಿಸುವ ವ್ಯಕ್ತಿಯ ಮನೋಭಾವನೆಯನ್ನನುಸರಿಸಿ, ಸಕಾಮವಾಗಲಿ ನಿಷ್ಕಾಮವಾಗಲಿ ಆಗಿರಬಹುದು. ಕರ್ತೃವಿನ ಸಂಕಲ್ಪವನ್ನನುಸರಿಸಿ, ಕರ್ಮವು ಫಲಭೇದವುಳ್ಳದ್ದಾಗುತ್ತದೆ. *'ಸ್ವರ್ಗ-ಕಾಮೋ ಯಜೇತ'*—'ಸ್ವರ್ಗವನ್ನು ಆಶಿಸುವವನು ಯಜ್ಞವನ್ನು ಮಾಡಬೇಕು' ಎಂದು ಶ್ರುತಿಯು ಹೇಳುತ್ತದೆ. ಯಜ್ಞರೂಪದ ಅದೇ ಕರ್ಮವನ್ನು ಸ್ವರ್ಗದಾಶೆಯಿಲ್ಲದೆ

ಶ್ರೀಹರಿ ಪ್ರೀತ್ಯರ್ಥವಾಗಿ ಆಚರಿಸಲೂ ಬರುತ್ತದೆ—ಆಗ ಅದು ನಿಷ್ಕಾಮ ಕರ್ಮವೇ ಆಗುತ್ತದೆ. ಉತ್ತಮರು, ವ್ರತಾದಿ ಕಾಮ್ಯಕರ್ಮಗಳನ್ನು ಶ್ರೀವಿಷ್ಣುಪ್ರೀತ್ಯರ್ಥವಾಗಿ ಆಚರಿಸಿ, ಅಜ್ಞರು ಫಲಾಪೇಕ್ಷೆಯಿಂದಾದರೂ ಸತ್ಕರ್ಮಗಳನ್ನು ಆಚರಿಸಲು ಮಾರ್ಗ ದರ್ಶಕರಾಗುತ್ತಾರೆ—ಗಣಪತಿ ಮೊದಲಾದ ಇತರ ದೇವತೆಗಳನ್ನು (ಅಲ್ಪರನ್ನು) ಆಶ್ರಯಿಸದಂತೆಯೂ ಆಗಬೇಕು. ಆದರೆ ಕ್ಷುದ್ರ ದೇವತೆಗಳನ್ನಾದರೂ, ಅವರ ಅಂತರ್ಯಾಮಿಯಾದ (ವಿಶ್ವಂಭರಾದಿ) ವಿಷ್ಣುರೂಪಗಳ ಪೂಜೆಯೆಂದು ತಿಳಿದಿರ-ಬೇಕೆಂದು ಎಚ್ಚರಿಸಬೇಕು.

ಬ್ರಾಹ್ಮಣಗೃಹಸ್ಥನ ನಿತ್ಯಕರ್ಮಗಳಲ್ಲಿ, ವೈಶ್ವದೇವಕರ್ಮವು ದೇವಯಜ್ಞರೂಪ-ವಾದುದು; ಬ್ರಹ್ಮಯಜ್ಞವು ಋಷಿಯಜ್ಞವು; ತರ್ಪಣಶ್ರಾದ್ಧಾದಿಗಳು ಪಿತೃಯಜ್ಞವು. ದೇವಋಣ, ಋಷಿಋಣ, ಪಿತೃಋಣಗಳ ಪರಿಹಾರಕ್ಕಾಗಿ ಇವು ವಿಧಿಸಲ್ಪಟ್ಟಿವೆ. ಬ್ರಾಹ್ಮಣನು ಈ ಮೂರು ಋಣಗಳ ಪರಿಹಾರವನ್ನು ಆವಶ್ಯಕವಾಗಿ ಸಾಧಿಸಬೇಕು. ಯಜ್ಞವೆಂದರೆ ವಿಷ್ಣುಪೂಜಾತ್ಮಕ ಕರ್ಮವು. ವೈಶ್ವದೇವಾದಿಗಳನ್ನು ಶ್ರೀಹರಿ ಸ್ಮರಣೆ-ಪೂರ್ವಕವಾಗಿ ಆಚರಿಸಿದರೆ ಮಾತ್ರ ಅವು ಫಲಪ್ರದಗಳಾಗುತ್ತವೆ. ನಿಷ್ಕಾಮನಾಗಿ ಇವುಗಳನ್ನು ಆಚರಿಸಿದರೆ, ಕೇಳಿಕೊಳ್ಳದಿರುವ ಋಣಪರಿಹಾರಫಲವು ಹೇಗೆ ದೊರೆಯುವುದೆಂಬ ಶಂಕೆ ಬೇಡ. ಕೇವಲ ಶ್ರೀವಿಷ್ಣುಪ್ರೀತ್ಯರ್ಥವಾಗಿ ಆಚರಿಸಲ್ಪಡುವ ನಿಷ್ಕಾಮಕರ್ಮಗಳಿಂದ ಅಪ್ರಾರ್ಥಿತವಾದ ಅನ್ಯಫಲಗಳು ದೊರೆಯುತ್ತವೆ. *'ಕೃಷೇರಿವಪಲಾಲಕುಲಂ'*, ಎಂದಂತೆ, ಧಾನ್ಯವನ್ನು ಮಾತ್ರ ಅಪೇಕ್ಷಿಸಿ ಕೃಷಿಕರ್ಮ-ಗಳನ್ನು ಮಾಡುವ ರೈತನಿಗೆ, ಆತನು ಅಪೇಕ್ಷಿಸದಿರುವ, ಕಡ್ಡಿ-ಕಳೆ-ಹೊಟ್ಟು ಮೊದಲಾದ ಅನ್ಯವಸ್ತುಗಳು ದೊರೆಯುವಂತೆ, ಶ್ರೀವಿಷ್ಣುಪ್ರೀತ್ಯರ್ಥವಾಗಿ ಮಾತ್ರ ಆಚರಿಸಲ್ಪಡುವ ಕರ್ಮಗಳಿಂದ ಐಹಿಕ-ಆಮುಷ್ಮಿಕ ಸಂಪತ್ತು (ಸ್ವರ್ಗಾದಿಗಳು) ಅಪ್ರಾರ್ಥಿತವಾಗಿ ದೊರೆಯುತ್ತವೆ. ಆದ್ದರಿಂದ ತ್ರಿವಿಧಕರ್ಮಗಳನ್ನು ಶ್ರೀಹರಿಸ್ಮರಣೆ ಪೂರ್ವಕ ತಪ್ಪದೇ ಆಚರಿಸುತ್ತ, ಶ್ರೀವಿಷ್ಣುಪ್ರಸನ್ನತೆಯನ್ನು ಯಾಚಿಸಬೇಕು.

(೪) ಯಾವ ಕರ್ಮಗಳಲ್ಲಿ ತೊಡಗಬೇಕಾದರೂ, ಕರ್ತನು, ತನ್ನ ದೇಹಬಲ, ಬುದ್ಧಿಬಲ ಮತ್ತು ಐಶ್ವರ್ಯಬಲಗಳನ್ನು ಅನುಲಕ್ಷಿಸಬೇಕು. ದೇಹಬಲವಿಲ್ಲದವನು, ದೇಹಶಕ್ತಿಯಿಂದ ಮಾತ್ರ ಸಾಧ್ಯವಾಗುವ ತೀರ್ಥ ಕ್ಷೇತ್ರಾದಿಗಳ ಯಾತ್ರೆಗಾಗಿ ಯತ್ನಿಸ-ಕೂಡದು. ಹಾಗೆಯೇ ತನ್ನ ಜ್ಞಾನಶಕ್ತಿಗನುಸಾರವಾಗಿ ಭಗವದ್ಗುಣಧ್ಯಾನಾದಿಗಳಲ್ಲಿ ತೊಡಗಬೇಕು. ಜ್ಞಾನ ಸಾಮರ್ಥ್ಯವನ್ನು ಅತಿಕ್ರಮಿಸಿ, ವೇದಾದ್ಯರ್ಥಗಳನ್ನು ಕಲ್ಪಿಸಲು ಯತ್ನಿಸಿ, ಅಪಾರ್ಥಗಳನ್ನು ತಿಳಿದು ಬುದ್ಧಿಗೆಡುವ ಪ್ರಸಂಗವೂ ಬರಬಹುದು. ಆದ್ದರಿಂದ, ಗುರೂಪದಿಷ್ಟ ಎಲ್ಲೆಯೊಳಗಿರುತ್ತ, ಊಹೆಗಳಲ್ಲಿ ತೊಡಗಬೇಕಲ್ಲದೇ,

ಎಲ್ಲೆಯನ್ನು ಮೀರಿ, ಕೇವಲ ಕಲ್ಪನಾರಾಜ್ಯದಲ್ಲಿ ವಿಹರಿಸಲೆತ್ನಿಸುವುದು ವಿಪತ್ಕಾರಕವೆಂಬುದನ್ನು ಲಕ್ಷ್ಯದಲ್ಲಿಡಬೇಕು. ಜನಸಹಾಯ, ಅಧಿಕಾರ, ದ್ರವ್ಯಾನುಕೂಲಗಳೆಲ್ಲವೂ ಶ್ರೀಹರಿಯ ದಯದಿಂದಲೇ ದೊರೆತಿರುವುವೆಂದು ತಿಳಿದು, ಅವುಗಳನ್ನು ಆತನ ಪೂಜೆಗಾಗಿ ವಿನಿಯೋಗಿಸುವೆನೆಂಬ ದೀಕ್ಷೆಯುಳ್ಳವನಾಗಬೇಕು. ಆಢ್ಯತೆಗಾಗಿ ಆಡಂಬರದಿಂದ ಶಕ್ತಿಮೀರಿ ಐಶ್ವರ್ಯಾದಿಗಳನ್ನು ವಿನಿಯೋಗಿಸಬಾರದು. ಏಕಕಾಲದಲ್ಲಿ ಸರ್ವಸ್ವವನ್ನು ವಿನಿಯೋಗಿಸಿ, ಯೋಗ್ಯ ಕಾಲವಿಶೇಷಗಳಲ್ಲಿ ಮಾಡಬೇಕಾದ ದೇವಬ್ರಾಹ್ಮಣ ಪೂಜಾದಿರೂಪ ಶ್ರೀವಿಷ್ಣುಪೂಜೆಯು ನಿಲ್ಲುವಂತೆ ಮಾಡಿಕೊಳ್ಳಬಾರದು. ತತ್ಕಾಲದಲ್ಲಿ ಸರ್ವಸ್ವವನ್ನೂ ತ್ಯಜಿಸಿ, ಶ್ರೀಹರಿಯನ್ನೇ, ತಮ್ಮ ಮುಂದಿನ ಗತಿಯ ಬಗ್ಗೆ, ಶರಣುಹೊಂದುವ ಪುರಂದರದಾಸಾರ್ಯರೇ ಮೊದಲಾದ ಮಹಾಭಕ್ತರು ಅತಿವಿರಳ ಮತ್ತು ಅಂಥವರು ದೇವಾಂಶರೇ ಸರಿ. ಅವರಿಗೆ, ಸರ್ವಸ್ವ ವಿನಿಯೋಗವೂ 'ಯಥಾವೈಭವ'ವೇ ಆಗಬಹುದು—ಆ ಪಂಕ್ತಿಗೆ ಸೇರಿದವರು, ಗ್ರಂಥಕರ್ತರಾದ ಶ್ರೀರಾಘವೇಂದ್ರತೀರ್ಥರು.

(೫) ಮಹಾಮಹಿಮನೂ ಜೀವೋತ್ತಮನೂ ಆದ ಶ್ರೀಮುಖ್ಯಪ್ರಾಣನು, ಸ್ವತಂತ್ರನೂ ಸರ್ವಕರ್ತನೂ ಆದ ಶ್ರೀಹರಿಯ ಸಂಕಲ್ಪವನ್ನರಿತು ಆತನ ಪ್ರೇರಣಾನು- ಸಾರ ಸರ್ವವನ್ನೂ ಮಾಡಿ, ಸರ್ವರಿಂದ ಸರ್ವವನ್ನೂ ಮಾಡಿಸುವನೆಂಬ ಅನುಸಂಧಾನವುಳ್ಳವರಾಗಿ. ನಿತ್ಯ, ನೈಮಿತ್ತಿಕ, ಕಾಮ್ಯಾದಿ ಕರ್ಮಗಳನ್ನು ಶ್ರೀವಿಷ್ಣುಪ್ರೀತ್ಯರ್ಥವಾಗಿ ಆಚರಿಸಬೇಕೆಂಬ, ಈ ವಾಕ್ಯದಲ್ಲಿ ಉಕ್ತವಾಗಿರುವ ಉಪದೇಶವು, ಕರ್ಮಾಚರಣೆಯಲ್ಲಿ ಜೀವನಿಗಿರುವ ಕರ್ತೃತ್ವ ಸ್ಥಾನವನ್ನು ತಿಳಿಯಲು ಬಹು ಸಹಾಯಕವಾಗಿದೆ. *'ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ। ತಥಾಪಿ ಮತ್ಕೃತಾಪೂಜಾ ತ್ವತ್ಪ್ರಸಾದೇನ ನಾನ್ಯಥಾ॥'* ಎಂಬಲ್ಲಿ ಸಂಗ್ರಸಲಾದ ಪ್ರಮೇಯವು, ಆಪಾತತಃ ಸುಲಭಗ್ರಾಹ್ಯವೆಂದು ಕಂಡರೂ, ಒಳಹೊಕ್ಕು ವಿಚಾರಮಾಡಲಾರಂಭಿಸಿದರೆ ಬಹು ತೊಡಕಿನ ಪ್ರಶ್ನೆಯಾಗಿ ಪರಿಣಮಿಸುತ್ತದೆ. ಗ್ರಂಥವಿಸ್ತಾರ ಭಯದಿಂದ, ಈ ರಹಸ್ಯಪ್ರಮೇಯಕ್ಕೆ ಸಂಬಂಧಿಸಿದ ಮುಖ್ಯಾಂಶಗಳನ್ನು ಮಾತ್ರ, ಸಂಗ್ರಹವಾಗಿ ನಿರೂಪಿಸಲಾಗುತ್ತದೆ. ಮತ್ತು ಕೆಲವು ಪ್ರಧಾನ ಪ್ರಮಾಣಗಳನ್ನೂ ಉದಹರಿಸಿ, ವಿವರಿಸಲಾಗುತ್ತದೆ:

ಶ್ರೀಹರಿಯೇ ಸರ್ವಕರ್ತನು; ಹೀಗೆಂದು ಬಹುಶ್ರುತಿಪ್ರಮಾಣಸಿದ್ಧ. ಶ್ರೀಹರಿಯು ಸ್ವತಂತ್ರಕರ್ತನೂ ಆಗಿದ್ದಾನೆ. ಜೀವನು ಜಡಭಿನ್ನನು; ಜ್ಞಾನ, ಇಚ್ಛೆ, ಪ್ರಯತ್ನ (ಕ್ರಿಯಾಶಕ್ತಿ)ಗಳೇ ಸ್ವರೂಪಧರ್ಮಗಳಾಗಿ ಉಳ್ಳ ಚೇತನನು ಅಸ್ವತಂತ್ರನು. ವಿಧಿನಿಷೇಧಗಳು ಭಗವಂತನ ಆಜ್ಞೆಗಳು. ಸ್ವತಂತ್ರನು ವಿಧಿನಿಷೇಧಗಳಿಂದ ಬದ್ಧನಲ್ಲ—

ಪರಾಧೀನನೇ ಬದ್ಧನು; ಎಂದರೆ, ವಿಧಿನಿಷೇಧಗಳ ಪಾಲನೆಯಿಂದ ಅಥವಾ ಅವು-ಗಳನ್ನು ಅತಿಕ್ರಮಿಸುವುದರಿಂದ ಉಕ್ತವಾದ ಫಲಗಳಿಗೆ ಭಾಗಿಯಾಗುತ್ತಾನೆ. ಜೀವ-ಜಡ-ಈಶ್ವರರೆಂಬ ಮೂರರಲ್ಲಿ ಈಶ್ವರ ಮತ್ತು ಜಡಗಳಿಗೆ ವಿಧಿನಿಷೇಧಗಳು ಸಂಬಂಧಿಸುವುದಿಲ್ಲ—ಜೀವರು ಮಾತ್ರ ಅವುಗಳಿಂದ ಬದ್ಧರು—ಫಲವನ್ನು ಭೋಗಿಸುವವರು-ಕರ್ಮಬದ್ಧರು. ಯೋಗ್ಯಾಯೋಗ್ಯ ಸಕಲಕರ್ಮಗಳ ಘಟನೆಗೆ, (೧) ದೇಹ-ಭೂಮ್ಯಾದಿ ಅಧಿಷ್ಠಾನ-ಆಶ್ರಯಸ್ಥಾನ; (೨) ಕರ್ತಾ-ಕರ್ತೃತ್ವಶಕ್ತಿಯುಳ್ಳ ಜೀವ; (೩) ವಿವಿಧ ಇಂದ್ರಿಯಗಳು (ಕರಣಗಳು-ಕರ್ಮಸಾಧನಗಳು, (೪) ಕರಣ-ಗಳ ವಿವಿಧಚೇಷ್ಟೆಗಳು; (೫) ಅದೃಷ್ಟ ಪ್ರೇರಕನಾದ ಸ್ವತಂತ್ರ ಶ್ರೀಹರಿ; ಈ ಐದು ಕೂಡಿಯೇ ಕಾರಣವಾಗುತ್ತವೆ. ಹೀಗಿರಲು, ತಾನು ಮಾತ್ರ ಕರ್ಮಘಟನೆಗೆ ಕಾರಣನೆಂದು ತಿಳಿಯುವವನು ಜ್ಞಾನಶೂನ್ಯನಾದ ಮೂರ್ಖನು. ಈ ನಿರ್ಣಯವನ್ನು ಶ್ರೀಕೃಷ್ಣನು ಹೀಗೆ ನಿರೂಪಿಸಿದ್ದಾನೆ: *'ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ। ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಂಚಮಂ॥ ಶರೀರ-ವಾಙ್ಮನೋಭಿರ್ಯತ್ಕರ್ಮ ಕುರುತೇ ನರಃ। ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ॥ ತತ್ರೈವಂ ಸತಿ ಕರ್ತಾರಂ ಆತ್ಮಾನಂ ಕೇವಲಂ ತು ಯಃ॥ ಪಶ್ಯತ್ಯಕೃತ ಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ॥'* (ಗೀತಾ)

ಪಾಂಡವರು ಅರಣ್ಯವಾಸದಲ್ಲಿದ್ದಾಗ, ಭೀಮಸೇನನು, ಪ್ರತಿಜ್ಞಾತವಾದ ಅರಣ್ಯ-ವಾಸ ಅಜ್ಞಾತವಾಸಗಳನ್ನು ಕಳೆದ ನಂತರವಾದರೂ, ಯುದ್ಧಮಾಡಿ ತಮ್ಮ ರಾಜ್ಯವನ್ನು ಪಡೆಯುವ ವಿಷಯದಲ್ಲಿ ಧರ್ಮರಾಜನ ಸಮ್ಮತಿಯನ್ನು ಆಗಲೇ ಪಡೆಯುವ ಇಚ್ಛೆಯಿಂದ ಈ ವಿಷಯವನ್ನು ಯುಧಿಷ್ಠಿರನಲ್ಲಿ ಪ್ರಸ್ತಾಪಿಸಲು ದ್ರೌಪದಿಯನ್ನು ಕಳುಹಿಸುತ್ತಾನೆ. (ಸರ್ವಜ್ಞನಾದ ಭೀಮಸೇನನು ಯುದ್ಧವಿಲ್ಲದೇ ದುರ್ಯೋಧನನು ರಾಜ್ಯವನ್ನು ಕೊಡುವುದಿಲ್ಲವೆಂಬುದನ್ನು ಬಲ್ಲನು.) ದ್ರೌಪದಿಯು ಈ ಪ್ರಸ್ತಾಪವನ್ನೆತ್ತಲು ಧರ್ಮರಾಜನು, ಯುದ್ಧಕ್ಕೆ ಒಪ್ಪದೇ, ರಾಜ್ಯೈಶ್ವರ್ಯಾದಿ-ಗಳನ್ನು ತನ್ನ ಇಚ್ಛಾನುಸಾರ ಕೊಡುವಾತನು ಸ್ವತಂತ್ರನಾದ ಶ್ರೀಹರಿಯು; ಆದ್ದರಿಂದ ದುರ್ಯೋಧನಾದಿಗಳನ್ನು ಯುದ್ಧದಲ್ಲಿ ಕೊಂದು ರಾಜ್ಯವನ್ನು ಪಡೆಯುವಲ್ಲಿ ನನ್ನ ಮನವಿಲ್ಲ; ಎಂದು ಮುಂತಾಗಿ, ಕ್ಷಮಾಗುಣವನ್ನೇ ಎತ್ತಿಹಿಡಿದು ವಾದಿಸುತ್ತಾನೆ. ದ್ರೌಪದಿಯು ಸಂಯುಕ್ತಿತ ಪ್ರಮಾಣಗಳಿಂದ ಯುದ್ಧಮಾಡಬೇಕಾದ ಆವಶ್ಯಕತೆ-ಯನ್ನು ಸಾಧಿಸಿ ಮಾತನಾಡುತ್ತಿರಲು, ಆಕೆಯ ವಾದಗಳನ್ನು ಎದುರಿಸಲಾಗದೆ, ಧರ್ಮರಾಜನು *'ವಾಚಾಲುತಾ ನಾತಿತರಾಂ ಹಿ ಶೋಭತೇ ಸ್ತ್ರೀಣಾಂ'*—'ಅತಿ ಮಾತಾಡುವುದು ಹೆಂಗಸರಿಗೆ ಶೋಭಿಸುವುದಿಲ್ಲ'ವೆನ್ನುತ್ತಾನೆ. ಪತಿಯೆಂಬ ಗೌರವ-

ದಿಂದ ದ್ರೌಪದಿಯು ಸುಮ್ಮನಾಗಲು, ಭೀಮಸೇನನು ಪ್ರವೇಶಿಸಿ ವಾದವನ್ನು ಮುಂದುವರಿಸುತ್ತಾನೆ. ಸರ್ವಸ್ವಕ್ಕೆ ಸ್ವತಂತ್ರನಾದ ಶ್ರೀಹರಿಯೇ ಕಾರಣನಾದರೂ ಜೀವಪ್ರಯತ್ನಕ್ಕೆ ಸ್ಥಾನವುಂಟೆಂಬ ಪ್ರಮೇಯವನ್ನು ಧರ್ಮರಾಜನಿಂದ ಅಂಗೀಕಾರ ಮಾಡಿಸಿ, ಪ್ರತಿಜ್ಞಾತವಾದ ಅವಧಿ ಮುಗಿದ ನಂತರ ಯುದ್ಧವನ್ನಾದರೂ ಮಾಡಿ ರಾಜ್ಯವನ್ನು ಪಡೆಯಬೇಕೆಂಬುದಕ್ಕೆ ಆತನ ಒಪ್ಪಿಗೆ ಪಡೆಯುತ್ತಾನೆ. 'ಹಠವಾದ'-ವೆಂದು ಪ್ರಸಿದ್ಧವಾದ ತಾತ್ಪರ್ಯ ನಿರ್ಣಯದ ಈ ಭಾಗವನ್ನು ಆಳವಾಗಿ ಅಭ್ಯಸಿಸಿ-ದರೆ, ಸಕಲ ಸಂಶಯಗಳ ಪರಿಹಾರವಾಗುತ್ತದೆ. ಪುರುಷಪ್ರಯತ್ನದ ಸ್ಥಾನವನ್ನು ನಿರೂಪಿಸುವ ಪ್ರಧಾನ ಶ್ಲೋಕವು ಈ ಮುಂದಿನಂತಿದೆ:

*'ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ ಯಾಽನಾದಿಸಿದ್ಧಾ ಸರ್ವ ಜೀವೇಷು ನಿತ್ಯಾ। ಸಾ ಕಾರಣಾ ಪ್ರಥಮಂ ತು ದ್ವಿತೀಯಮನಾದಿಕರ್ಮೈವ ತಥಾ ತೃತೀಯಃ। ಜೀವಪ್ರಯತ್ನಃ ಪೌರುಷಾಖ್ಯಸ್ತದೇತತ್ ತ್ರಯಂ ವಿಷ್ಣೋರ್ವಶಗಂ ಸದೈವ। ಸ ಕಸ್ಯಚಿನ್ನ ವಶೇ ವಾಸುದೇವಃ ಪರಾತ್ಪರಃ ಪರಮೋಽಸೌ ಸ್ವತಂತ್ರಃ॥'* (ಭಾ.ತಾ)

ಭಾವಾರ್ಥ: ಜೀವಸ್ವಭಾವವೇ ಯೋಗ್ಯತೆಯು. ಇದು 'ಹಠ' ಎಂದು ಕರೆಯಲ್ಪಡುತ್ತದೆ. ಇದು, ಸರ್ವಜೀವರಲ್ಲಿ ಅನಾದಿಸಿದ್ಧ ಮತ್ತು ನಿತ್ಯ. ಜೀವರ ನಾನಾವಿಧ ಪ್ರವೃತ್ತಿಗೆ ಇದು ಮೊದಲಿನ ಕಾರಣವು. ಅನಾದಿಕರ್ಮವು ಎರಡನೇ ಕಾರಣ; ಪೌರುಷವೆಂದು ಕರೆಯಲ್ಪಡುವ ಜೀವಯತ್ನವು ಮೂರನೇ ಕಾರಣವು. ಈ ಮೂರು ಸರ್ವದಾ ಶ್ರೀವಿಷ್ಣುವಶದಲ್ಲಿವೆ—ವಿಷ್ಣು ಮಾತ್ರ ಯಾರ ವಶನೂ ಅಲ್ಲ— ಆತನು ಪರಾತ್ಪರನು—ರಮಾದೇವಿಗಿಂತ ಅನಂತಗುಣಾಧಿಕನು—ಸ್ವತಂತ್ರನು. ಹೀಗೆ ಕರ್ಮಕಾರಣಗಳನ್ನು ನಿರೂಪಿಸಿ, ಮುಂದೆ, ಭೀಮಸೇನನು, ಜೀವ ಯೋಗ್ಯತೆ ಮತ್ತು ಪೂರ್ವಕರ್ಮಾನುಸಾರವಾಗಿ ಶ್ರೀಹರಿಯಿಂದ ಪ್ರಾಪ್ತವಾಗಲಿರುವ ಫಲವನ್ನು ಪುರುಷ ಪ್ರಯತ್ನವು ಅಭಿವ್ಯಕ್ತಿಗೊಳಿಸುವುದೆಂದೂ, ಯತ್ನದ ಸ್ಥಾನವನ್ನೂ ನಿರ್ದೇಶಿ-ಸಿರುವನು.

ಜೀವರು ಅಸ್ವತಂತ್ರರಾದರೂ, ಕರ್ಮಮಾಡುವುದರಲ್ಲಿ ಶ್ರೀಹರಿಯಿಂದಲೇ ದತ್ತವಾದ ಕಿಂಚಿತ್ ಸ್ವಾತಂತ್ರ್ಯವುಳ್ಳವರೆಂದು, ಹರಿಕಥಾಮೃತಸಾರ ಮತ್ತು ವಿಷ್ಣು-ರಹಸ್ಯಗಳಲ್ಲಿ ಕಂಡುಬರುವ 'ದತ್ತಸ್ವಾತಂತ್ರ್ಯ'ದ ನಿರೂಪಣೆಯಿಂದಲೂ, *'ಕರ್ಮಣ್ಯೇ-ವಾಧಿಕಾರಸ್ತೇ ಮಾ ಫಲೇಷು ಕದಾಚನ'* (ಗೀತಾ) ಇತ್ಯಾದಿ ವಾಕ್ಯಗಳಿಂದಲೂ, ಕೆಲವರು ಭ್ರಮಿಸುತ್ತಾರೆ. ಆದ್ದರಿಂದ ಈ ಭ್ರಮೆಯ ನಿರಾಸಕ್ಕಾಗಿಯೂ, *'ತೇನ ವಿನಾ ತೃಣಮಪಿ ನ ಚಲತಿ'* (ಶ್ರುತಿ) ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗುವ, 'ಜೀವನು ಜಡದಂತೆ ಅಸ್ವತಂತ್ರನು' ಎಂಬ ನಿರ್ಣಯದ ಸಾಧುತ್ವವನ್ನು ಸಾಧಿಸಲಿಕ್ಕೂ, ಈ

ಪ್ರಕ್ರಿಯೆಯ ವಿವೇಚನೆಯನ್ನು ಸ್ವಲ್ಪ ವಿಸ್ತರಿಸಲಾಗುತ್ತದೆ. *'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ। ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ॥'* ಇತ್ಯಾದಿ ಶ್ರುತಿ, ಸ್ಮೃತಿವಾಕ್ಯಗಳು, ಜೀವಸ್ವರೂಪದ ಅಸ್ತಿತ್ವದಿಂದ ಆರಂಭಿಸಿ, ಆತನ ಸಕಲ ಪ್ರವೃತ್ತಿಗಳೂ ಶ್ರೀಹರಿಯ ಅಧೀನವೆಂದು ಸಾರುತ್ತವೆ. ಸರ್ವಕರ್ತನಾದ ಶ್ರೀಹರಿಯು ಮಾಡಿದುದನ್ನೇ, ಪರಾಧೀನನಾದ ಜೀವನೂ ಮಾಡುವುದರಿಂದ, ಜೀವನಲ್ಲಿ ಪರಾಧೀನ ಕರ್ತೃತ್ವವಿರುತ್ತದೆಂದು, *'ಯಥಾ ತಕ್ಷೋಭಯಥಾ'*, *'ಕರ್ತಾ ಶಾಸ್ತ್ರಾರ್ಥವತ್ವಾತ್'* ಇತ್ಯಾದಿ (ಬ್ರಹ್ಮಸೂತ್ರ) ಗಳಲ್ಲಿ ನಿರ್ಣಯಿಸಲಾಗಿದೆ. ಜಡದಂತೆ ಅಸ್ವತಂತ್ರನಾದರೂ, ಜೀವನು ಜಡನೇ ಅಲ್ಲ—ಇಚ್ಛಾಜ್ಞಾನಕ್ರಿಯಾ ಶಕ್ತಿಗಳು ಜೀವ ಸ್ವರೂಪಧರ್ಮಗಳೇ ಆಗಿವೆ. ಜೀವಸ್ವರೂಪವೂ ಶ್ರೀಹರಿಯ ನಿತ್ಯಾಧೀನವಾದ್ದರಿಂದ, ಜೀವನಿಂದಾಗುವ ಯಾವ ಕರ್ಮವೇ (ಕ್ರಿಯಾ-ಚೇಷ್ಟೆ) ಆಗಲಿ, ಶ್ರೀಹರಿಕೃತವೇ ಆಗಿರುವುದು. ಶ್ರೀಹರಿ ಮಾಡಿದರೆ ಮಾತ್ರ ಜೀವನು ಮಾಡುತ್ತಾನೆ—ಇಲ್ಲದಿದ್ದರೆ ಇಲ್ಲ. *'ತ್ರಿವಿಧಾ ಕರ್ಮಚೋದನಾ'* (ಗೀತಾ) ಎಂಬಲ್ಲಿ, ಕರ್ಮಚೋದನೆ (ಪ್ರೇರಣೆ)ಯಲ್ಲಿ, ನಿಮಿತ್ತಗಳು ತ್ರಿವಿಧವೆಂದು ಹೇಳಲಾಗಿದೆ. ಸದಾ ಜೀವನೊಂದಿಗಿರುವ ಬಿಂಬನಾದ ಶ್ರೀಹರಿಯು, ಜೀವನಿಗೆ, ಅವನ ಯೋಗ್ಯತೆಯನ್ನನು - ಸರಿಸಿ ತನ್ನ ಆಜ್ಞಾರೂಪಗಳಾದ ಶ್ರುತಿಸ್ಮೃತಿಗಳಿಂದ ಅವನ ಕರ್ತವ್ಯಜ್ಞಾನವನ್ನು ಹುಟ್ಟಿಸಿ, ಅವನ ಇಚ್ಛಾಪ್ರಯತ್ನಗಳನ್ನು ಪ್ರವೃತ್ತಿಗೊಳಿಸುತ್ತಾನೆ. (ಶ್ರೀಹರಿಯ ನಿತ್ಯ ಸಂಬಂಧವುಳ್ಳ ಜೀವನು 'ಪರಿಜ್ಞಾತಾ'; ಶ್ರುತಿಸ್ಮೃತಿ ವಾಕ್ಯಗಳಿಂದಾಗುವ ಅರಿವು, 'ಜ್ಞಾನ'; ಮತ್ತು ತನ್ನ ಕರ್ತವ್ಯಗಳನ್ನು ಮಾಡಿ ಫಲವನ್ನು ಹೊಂದಬೇಕೆಂಬ ಇಚ್ಛೆ ಮತ್ತು ಪ್ರಯತ್ನ ಸಹ 'ಜ್ಞೇಯ'; ಈ ಮೂರೂ ಕರ್ಮಪ್ರೇರಣೆಯಲ್ಲಿ ನಿಮಿತ್ತಗಳು). ಈ ಎಲ್ಲವೂ ಶ್ರೀಹರಿಕರ್ತೃಕವೇ ಆದರೂ, ಜೀವನು ತನ್ನ ಯೋಗ್ಯತೆಯಂತೆ ಶ್ರೀಹರಿ ಮಾಡಿದ್ದನ್ನು ಮಾಡುವ ಪರಾಧೀನ ಕರ್ತನಾದ್ದರಿಂದಲೂ, ಶ್ರೀಹರಿಯು ಜೀವ ಯೋಗ್ಯತೆಯನ್ನತಿಕ್ರಮಿಸದೇ ಎಲ್ಲವನ್ನೂ ಮಾಡಿಸುವುದರಿಂದಲೂ, ಶ್ರೀಹರಿಯು, ಸ್ವತಂತ್ರನೂ, ಪೂರ್ಣಕಾಮನೂ, ನಿರಪೇಕ್ಷನೂ ಆದ್ದರಿಂದಲೂ, ಜೀವನು ಮಾತ್ರ ಕರ್ಮಫಲಭಾಗಿಯಾಗುತ್ತಾನೆ. ಇಲ್ಲಿ ವಾ. ೧೩, ಪ್ರ.ವಿ.(೧.೩)ನ್ನು ಮತ್ತು ವಾ. ೨೭, ಪ್ರ.ವಿ.(೨)ನ್ನೂ ಓದಿಕೊಳ್ಳಬಹುದು.

ದತ್ತಸ್ವಾತಂತ್ರ್ಯದ ವಿಸ್ತಾರ ನಿರೂಪಣೆಯನ್ನು, ವಿಷ್ಣುರಹಸ್ಯ ಮತ್ತು ಹರಿಕಥಾಮೃತಸಾರಗಳಲ್ಲಿ ಕಾಣಬಹುದು. ಸ್ವಾತಂತ್ರ್ಯವೆಂಬುದು ಪರಮಾತ್ಮನಲ್ಲಿ ಮಾತ್ರವಿರುವ ಗುಣ. ಪರಮಾತ್ಮನಿಗೂ ಅವನ ಗುಣಗಳಿಗೂ ಯಾವ ಭೇದವೂ ಇಲ್ಲ—ಆತನು ಗುಣಸ್ವರೂಪನೇ ಆಗಿದ್ದಾನೆ—ತನ್ನ ಗುಣಗಳಿಂದ ಅಭಿನ್ನನು. ಆದ್ದರಿಂದ ಸ್ವಾತಂತ್ರ್ಯ-

ವನ್ನು ಅನ್ಯರಿಗೆ ದಾನ ಮಾಡುವುದೆಂದರೆ, ತಾನೇ ಅವರಲ್ಲಿರುವುದೆಂದರ್ಥ. ಅಪಾರವಾದ ತನ್ನ ಸ್ವಾತಂತ್ರ್ಯಗುಣದಲ್ಲಿ ಒಂದಂಶವನ್ನು ತೆಗೆದು, ಅದನ್ನು ನಾನಾ ಅಂಶಗಳನ್ನಾಗಿ ವಿಭಾಗಿಸಿದರೂ, ಆ ಅಂಶಗಳೆಲ್ಲವೂ, ಪ್ರತಿಯೊಂದೂ ಅಪರಿಮಿತವೇ ಆಗಿರುತ್ತದೆ. ಪರಮಾತ್ಮನ ಪ್ರತಿ ಅಂಶವೂ ಮೂಲರೂಪದಂತೆ ಪೂರ್ಣವೇ. ಸ್ವಾತಂತ್ರ್ಯದಾನವೆಂದರೆ *'ತಥಾ ಚ ಸ್ವಾತಂತ್ರ್ಯದಾನಂ ನಾಮ ತದ್ರೂಪೇಣ ಜೀವಪ್ರವೇಶಃ'* (ಛಲಾರಿ)—ದತ್ತಸ್ವಾತಂತ್ರ್ಯವೆಂಬ ರೂಪದಿಂದ ಜೀವನನ್ನು ಪ್ರವೇಶಿಸುವುದೇ ಆಗಿದೆ, ಎಂದೂ, *'ದತ್ತಸ್ವಾತಂತ್ರ್ಯನಾಮ್ನಾ ವೈ ಹರೇರೀಶೇನ ಸರ್ವದಾ। ಪ್ರೇರಿತಃ ಕರ್ಮಕುರ್ವಾಣೋ ನ ಮೇ ಶಕ್ತಿಃ ಕಥಂಚನ॥'* (ಪ್ರಕಾಶಸಂಹಿತಾ)—'ದತ್ತಸ್ವಾತಂತ್ರ್ಯನಾಮಕ' ಶ್ರೀಹರಿಯೇ ಕರ್ಮಗಳನ್ನು ಮಾಡಿ, ಪರಾಧೀನಕರ್ತನಾದ ಜೀವನಿಂದ ಮಾಡಿಸುವನೆಂದು ಈ ಪ್ರಮಾಣಗಳು ಹೇಳುತ್ತವೆ. ಇದನ್ನೇ, *'ಕವಿಭಿರೀಡಿತ ತನ್ನ ಕಲೆಗಳ ದಿವಿಜ ದಾನವ ಮಾನವರೊಳಿಟ್ಟ ವಿರತಗುಣ ತ್ರಯಜ ಕರ್ಮವ ಮಾಡಿ ಮಾಡಿಸುವ'* ಎಂದು ಹರಿಕಥಾಮೃತಸಾರದಲ್ಲಿ ಶ್ರೀಜಗನ್ನಾಥದಾಸರು ನಿರೂಪಿಸಿರುವರು—(ಕಲೆಗಳ ಅಂಶಗಳನ್ನು). *'ನ ತು ಅನ್ಯಾಧೀನ ಸತ್ತಾಕತ್ವರೂಪ ಸ್ವಾಭಿನ್ನ ಸ್ವಾತಂತ್ರ್ಯಸ್ಯ ಅನ್ಯನಿಷ್ಠತ್ವ ಸಂಪಾದನಂ। ಬಹುಮಾನವಿರೋಧಾತ್।'* ಎಂದು (ಜೀವಕರ್ತೃತ್ವ—ಗೌಡಗೆರೆ ವೆಂಕಟರಮಣಾಚಾರ್ಯರು) ವಿವರಿಸಿದ್ದಾರೆ. ತನ್ನ ಸ್ವಾತಂತ್ರ್ಯವನ್ನು ಅನ್ಯಾಧೀನ ಮಾಡುವುದೆಂಬರ್ಥದಲ್ಲಿ ದಾನವಲ್ಲ. ಸ್ವಗತ ಸ್ವಾತಂತ್ರ್ಯ, ಸರ್ವಸ್ವಾತಂತ್ರ್ಯ ನಾಮಕ ತನ್ನ ಸ್ವಾತಂತ್ರ್ಯಾಂಶಗಳನ್ನು ಸಹ ಜೀವರಲ್ಲಿಟ್ಟು ವಿವಿಧ ಸಾಧನೆಗಳನ್ನು ಶ್ರೀಹರಿಯು ಮಾಡಿಸುತ್ತಾನೆ. ಇವುಗಳ ವಿಶೇಷ ವಿವರಗಳನ್ನು ಗುರುದ್ವಾರಾ ತಿಳಿಯಬೇಕು. *'ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್। ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ॥'* ಇತ್ಯಾದಿ ಪ್ರಮಾಣಗಳು, ಸರ್ವತ್ರ ಸ್ಥಿತನಾದ ಶ್ರೀಹರಿಯು, ಅಲ್ಲಲ್ಲಿ (ಆಯಾ ಜೀವರಲ್ಲಿ)ರುವ, ಅವರವರ ಕ್ರಿಯಾಶಕ್ತಿಗಳನ್ನು ಉದ್ಬೋಧಗೊಳಿಸಿ, ಸ್ವತಂತ್ರವಾದ ತಾನೇ ಎಲ್ಲವನ್ನು ಮಾಡಿ ಮಾಡಿಸುತ್ತಾನೆಂದು ತಿಳಿಸುತ್ತವೆ.

(೬) ನನ್ನ ಆಜ್ಞಾನುವರ್ತಿಗಳಾದ ಶಿಷ್ಯರಿಂದಲೂ ಇತರ ಅನುಬಂಧಿಗಳಿಂದಲೂ ಸ್ವಯೋಗ್ಯಕರ್ಮಗಳನ್ನು ಮಾಡಿಸುತ್ತೇನೆಂಬ ಸಂಕಲ್ಪವನ್ನು ಸಹ, ಹಿಂದಿನ ವಾಕ್ಯ ೨೮ರಲ್ಲಿ ಹೇಳಿರುವ, *'ಶ್ರೀಭಾರತೀರಮಣೇನ ಮುಖ್ಯಪ್ರಾಣೇನ ಪ್ರೇರಿತಃ ಸನ್'* ಎಂಬ ಅನುಸಂಧಾನದಿಂದಲೇ ಮಾಡತಕ್ಕದ್ದೆಂದು ತಿಳಿಯಬೇಕು—ಅನ್ಯರಿಂದ ಮಾಡಿಸುವುದೂ ಶ್ರೀಹರಿಪ್ರೀತಿಜನಕ ಕರ್ಮವೇ. ಅದೂ ಸಹ ಶ್ರೀಭಾರತೀರಮಣ ಮುಖ್ಯಪ್ರಾಣನ ಪ್ರೇರಣೆಯಿಂದಲೇ ಆಗಬೇಕು. ಯೋಗ್ಯಜೀವರಿಂದ ಸ್ವವಿಹಿತ ಕರ್ಮಗಳನ್ನು

ವಿಷ್ಣುಪೂಜೆಯೆಂಬ ಸದನುಸಂಧಾನಪೂರ್ವಕ ಮಾಡಿಸುವುದೂ ಶ್ರೀವಿಷ್ಣುಪ್ರೀತಿಕರವಾದ ಕರ್ಮವೇ ಸರಿ.

ಇತಿ ಶ್ರೀರಾಘವೇಂದ್ರಾಖ್ಯಯತಿನಾ ಕೃತಮಂಜಸಾ।
ಪ್ರಾತಃಸಂಕಲ್ಪಗದ್ಯಂ ಸ್ಯಾತ್ ಪ್ರೀತ್ಯೈ ಮಾಧವಮಧ್ವಯೋಃ॥

ಪ್ರತಿಪದಾರ್ಥ: ಇತಿ — ಇಂತು (ಹೀಗೆ), ಶ್ರೀರಾಘವೇಂದ್ರಾಖ್ಯಯತಿನಾ — ಶ್ರೀರಾಘವೇಂದ್ರನೆಂಬ ನಾಮವುಳ್ಳ ಯತಿಯಿಂದ, ಅಂಜಸಾ — ಭಕ್ತಿಪೂರ್ವಕವಾಗಿ, ಕೃತಂ — ರಚಿಸಲ್ಪಟ್ಟ, ಪ್ರಾತಃಸಂಕಲ್ಪಗದ್ಯಂ — (ನಿತ್ಯ) ಪ್ರಾತಃಕಾಲದಲ್ಲಿ ಸರ್ವರೂ ಪಠಿಸತಕ್ಕ ಪ್ರಾತಃಸಂಕಲ್ಪಗದ್ಯವು (ಪ್ರಾತಃಕಾಲದಲ್ಲಿ ಮಾಡಬೇಕಾದ ಸಂಕಲ್ಪವನ್ನು ನಿರೂಪಿಸುವ ಗದ್ಯರೂಪದ ಈ ಕಾವ್ಯವು), ಮಾಧವಮಧ್ವಯೋಃ — ಶ್ರೀಹರಿವಾಯುಗಳ (ಲಕ್ಷ್ಮೀಪತಿಯಾದ ಶ್ರೀವೇದವ್ಯಾಸರ ಮತ್ತು ವಾಯ್ವವತಾರರಾದ ಶ್ರೀಮಧ್ವಾಚಾರ್ಯರ), ಪ್ರೀತ್ಯೈ ಸ್ಯಾತ್ — ಪ್ರೀತ್ಯರ್ಥವಾಗಿ ಆಗಲಿ (ಅವರನ್ನು ಸುಪ್ರೀತರನ್ನಾಗಿ ಮಾಡಲಿ).

॥ ಇತಿ ಶ್ರೀಮದ್ರಾಘವೇಂದ್ರಯತಿಶಿರೋಮಣಿಭಿರ್ವಿರಚಿತಂ
ಪ್ರಾತಃಸಂಕಲ್ಪಗದ್ಯಂ ಸಮಾಪ್ತಂ ॥

ಈ ರೀತಿಯಾಗಿ ಶ್ರೀಮದ್ರಾಘವೇಂದ್ರ ಯತಿಶಿರೋಮಣಿಗಳಿಂದ
ವಿರಚಿತವಾದ ಪ್ರಾತಃಸಂಕಲ್ಪಗದ್ಯವು ಮುಗಿದುದು.

॥ ಶ್ರೀಭಾರತೀಶಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

॥ ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥

## ಶ್ರೀರಾಘವೇಂದ್ರಸ್ವಾಮಿಗಳ ವೃಂದಾವನದಲ್ಲಿರುವ ಭಗವದ್ರೂಪಗಳು:

ತ್ರಿಪುಟತಾಳ

ನರಹರಿರೂಪನಾಗಿ ವಾಸವಾಗಿ ಇಲ್ಲಿ
ದುರಿತದುಷ್ಕೃತ ಬ್ರಹ್ಮಹತ್ಯಗಳ ದೂರೋಡಿಸುವ
ಸಿರಿರಾಮನಾಗಿ ವಾಸವಾಗಿ ಇಲ್ಲಿ ಪರಿ
ಪರಿಯಿಂದ ದೇಶಾಂತರ ಅನ್ನಕಳಕೊಂಡು
ನರರಿಲ್ಲಿ ಬಂದರೆ ಸ್ಥಿರಪಟ್ಟಗಟ್ಟುವ
ಸಿರಿಕೃಷ್ಣನಾಗಿ ವಾಸವಾಗಿ ಇಲ್ಲಿ
ಪರಿಪರಿಯಲ್ಲಿ ಬಂದ ಪರಮಾತುರರಿಗೆ
ವರವೀವ ಪುತ್ರೋತ್ಸವ ಮದುವೆ ಮುಂಜಿ
ಹರಕೆಗಳ ಕೈಕೊಂಡು ಹರುಷಬಡಿಸುವ-
ಪರವೇದವ್ಯಾಸನಾಗಿ ವಾಸವಾಗಿ ಇಲ್ಲಿ
ಭರದಿಂದಲಿ ಬಂದ ದುರ್ವಾದಿಗಳನ್ನೆಲ್ಲ
ದೂರ ಓಡಿಸಿ ಮುರಿದು ಅವರ ಕುಶಾಸ್ತ್ರವ
ಹರಿ ಸರ್ವೋತ್ತಮನೆಂದು ಇರುವನಿಲ್ಲ ತೋರಿ
ಶರಣಜನಕೆ ಇನ್ನು ವರಜ್ಞಾನಸುಧೆಯ
ಕರೆದುಕೊಡುತ ಇರುತಿಪ್ಪುವನಲ್ಲಿ
ಸಿರಿವಂದಿತವಾದ ಗೋಪಾಲವಿಠಲ
ಪರಿಪರಿಯಲಿ ಓಲಗ ಕೈಕೊಳುತಿಪ್ಪ

❖

ರಾ — ಎನ್ನ ದುರಿತರಾಶಿಗಳ ದಹಿಸುವ
ಘ — ಎನ್ನ ಘನಜ್ಞಾನ ಭಕುತಿ ಈವ
ವೇಂ — ಎನ್ನ ವೇಗದಿ ಜನನಮರಣ ದೂರ
ದ್ರ — ಎನ್ನ ದ್ರವಿಣಾರ್ಥ ಶ್ರುತಿಪ್ರತಿಪಾದ್ಯನ ಕಾಂಬ

**ಗೋಪಾಲದಾಸರು**

# ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ

ದಾವಣಗೆರೆ–577002 ದೂರವಾಣಿ : 08192–230340

## ಸಂಘದಲ್ಲಿ ದೊರೆಯುವ ಪುಸ್ತಕಗಳ ಪಟ್ಟಿ

| | | |
|---|---|---|
| 1. | ಶ್ರೀಸತ್ತತ್ತ್ವರತ್ನಮಾಲಾ | ರೂ. 210.00 |
| 2. | ಶ್ರೀವಿಷ್ಣುರಹಸ್ಯ (ಮರು ಪ್ರಕಟನೆ 2015) | ರೂ. 550.00 |
| 3. | ಶ್ರೀಮದ್ಭಾಗವತ ಸಾರೋದ್ಧಾರ | ರೂ. 80.00 |
| 4. | ಪ್ರಾತಃಸಂಕಲ್ಪಗದ್ಯಮ್ (ಮರುಪ್ರಕಟನೆ–2016) | ರೂ. 80.00 |
| 5. | ನಾರಾಯಣ ಶಬ್ದಾರ್ಥ | ರೂ. 30.00 |
| 6. | ಶ್ರೀ ಮುಕುಂದ ಗುಣಮಾಲಾ | ರೂ. 20.00 |
| 7. | ಶ್ರೀಮತ್ ಭಾಗವತ ಪ್ರದೀಪಿತ ಸೂತ್ರಾರ್ಥಸಾರ (ಪ್ರಕಟನೆ–2012) | ರೂ. 400.00 |
| 8. | ಶ್ರೀಕೃಷ್ಣಾರ್ಜುನ ಸಂವಾದ | ರೂ. 140.00 |
| 9. | ತತ್ತ್ವಸುವ್ವಾಲಿ–ವ್ಯಾಖ್ಯಾನ ಸಹಿತ (ಪ್ರಕಟನೆ 2012) | ರೂ. 140.00 |
| 10. | ಲಕ್ಷ್ಮೀಶೋಭನ ಹಾಡು–ವ್ಯಾಖ್ಯಾನ ಸಹಿತ | ರೂ. 50.00 |
| 11. | ವೈಕುಂಠವರ್ಣನೆ–ವ್ಯಾಖ್ಯಾನ ಸಹಿತ (ಪ್ರಕಟನೆ 2013) | ರೂ. 170.00 |
| 12. | ಉಪನ್ಯಾಸ ಭಾರತೀ (ಪ್ರಕಟನೆ 2013)<br>(ಸುಮಧ್ವವಿಜಯದ 15ನೇ ಸರ್ಗದಲ್ಲಿರುವ ಹಲವು ಮತಗಳ ವಿಮರ್ಶೆ) | ರೂ. 60.00 |
| 13. | ಶ್ರೀಮದೈತರೇಯೋಪನಿಷತ್ (ಭಾಷ್ಯಾರ್ಥ ಸಂಗ್ರಹ)<br>(ಪ್ರಕಟಣೆ : ನವೆಂಬರ್ 2013) | ರೂ. 110.00 |
| 14. | ಕೋಲುಹಾಡು ಮತ್ತು ಸಂಕೀರ್ಣ ಕೀರ್ತನೆಗಳು<br>(ಪ್ರಕಟಣೆ : ಜೂನ್ 2014) ವಿವರಣೆ ಸಹಿತ | ರೂ. 75.00 |
| 15. | ಗುಂಡಕ್ರಿಯೆ, ಹರಿಸರ್ವೋತ್ತಮಸಾರ ಮತ್ತು ಸ್ವಪ್ನಪದ<br>(ಪ್ರಕಟಣೆ : ನವೆಂಬರ್ 2014) ವಿವರಣೆ ಸಹಿತ | ರೂ. 135.00 |
| 16. | ಸಪ್ತ ಸುಳಾದಿಗಳು ಮತ್ತು ಶ್ರೀಹರಿಭಜನ ಪದ್ಧತಿ<br>(ಪ್ರಕಟಣೆ : ಏಪ್ರಿಲ್ 2015) ವಿವರಣೆ ಸಹಿತ | ರೂ. 70.00 |
| 17. | ಶ್ರೀಮದ್ ಬ್ರಹ್ಮ ಸೂತ್ರಾಣು ಭಾಷ್ಯಂ | ರೂ. 15.00 |
| 18. | ಮಾಧ್ವಭೂಷಣ ಶ್ರೀ ಬಿ. ಭೀಮರಾಯರು ಮತ್ತು<br>ಅವರ ಗ್ರಂಥಗಳ ಸಂಕ್ಷಿಪ್ತ ಪರಿಚಯ | ರೂ. 10.00 |

## ಈ ಕೃತಿಯ ಬಗೆಗೆ ನುಡಿಮುತ್ತುಗಳು

ಶ್ರೀಮದ್ರಾಘವೇಂದ್ರ ಸ್ವಾಮಿಗಳು ರಚಿಸಿರುವ 'ಪ್ರಾತಃಸಂಕಲ್ಪಗದ್ಯ'ವನ್ನು ನಿತ್ಯದಲ್ಲಿಯೂ ನಸುಕಿನಲ್ಲೇ ಹೇಳಿಕೊಳ್ಳಬೇಕು. ಅದು ಸರ್ವಮೂಲದ ಸಾರ ತುಂಬಿದ ಕಿರುಕೃತಿ. ಶ್ರೀಮದಾಚಾರ್ಯರು ತಿಳಿಸಿದ ಅನೇಕ ಪ್ರಮೇಯಗಳನ್ನು ಪುಟ್ಟಪದಗಳಲ್ಲಿ ಕಟ್ಟಿಹಾಕಿದ ಸುಂದರ ಮಾಲೆ.

ಸಂಸ್ಕೃತದಲ್ಲಿರುವ ಈ ಗದ್ಯದ ಅನುವಾದವನ್ನು ದಿ|| ಭೀಮರಾಯರು ಬಹಳ ಸುಂದರವಾಗಿ ತಿಳಿಸಿದ್ದಾರೆ. ಇದು ಜಿಜ್ಞಾಸುಗಳಿಗೆ ಉಪಯುಕ್ತ.

ಶ್ರೀ ಸತ್ಯಾತ್ಮತೀರ್ಥರು

ಶ್ರೀಮದುತ್ತರಾದಿಮಠಾಧೀಶರು

ಸಜ್ಜನರಿಂದ ಅವಶ್ಯ ಪಠನೀಯವಾದ ಈ ಕೃತಿಯನ್ನು ದಾವಣಗೆರೆ ಭೀಮರಾಯರು ಪ್ರತಿಪದಾರ್ಥ, ತಾತ್ಪರ್ಯ, ಪ್ರಮೇಯ ನಿರೂಪಣೆಗಳನ್ನು ಅತ್ಯಂತ ಸುಂದರವಾಗಿ ವಿವರಿಸಿದ್ದಾರೆ.

ಶ್ರೀವಿದ್ಯಾಮಾನ್ಯರು

ಶ್ರೀ ಫಲಿಮಾರು, ಭಂಡಾರಕೇರಿ ಮಠಾಧಿಪತಿಗಳು (೧೯೭೭ರಲ್ಲಿ)

ಗದ್ಯಮಯ ವಾಯುಸ್ತುತಿಯಾಗಿ ಶ್ರೀರಾಘವೇಂದ್ರಸ್ವಾಮಿಗಳು ರಚಿಸಿದ "ಪ್ರಾತಃಸಂಕಲ್ಪಗದ್ಯ" ವಾಗಿದೆ. ಸಮಗ್ರ ಸರ್ವಮೂಲಗಳಲ್ಲಿಯ ಹರಿವಾಯುಗಳ ಮಹಿಮೆ ಯನ್ನು ಸಾರುವ ಕೃತಿ – ಪ್ರಮೇಯ ಕೋಶ – ಇಂತಹ ಅಪರೂಪದ ಅನುಸಂಧಾನದ, ಅದ್ಭುತ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದ ರಾಜರ್ಷಿಗಳು, ಮಧ್ವಶಾಸ್ತ್ರಸಂಪನ್ನರಾದ ಶ್ರೀ ಭೀಮರಾಯರು.

ಪ್ರೊ|| ವಾ. ಜಯತೀರ್ಥಾಚಾರ್ಯ ಮಳಗಿ

ಶ್ರೀರಾಯರ ಒಂದೇ ಆಜ್ಞಾವಾಕ್ಯ-ಸಮಸ್ತ ಸಜ್ಜನ ಸಮೂಹದ ಒಳಿತಿಗಾಗಿ, ಅರಿವಿಗಾಗಿ, ಜ್ಞಾನಪ್ರಜ್ವಲನೆಗಾಗಿ ಇತ್ಯಾದಿ ಇತ್ಯಾದಿ ಎಂದು ದಾಖಲಿಸಬಹುದು... ಬದುಕಿನ ಪಥದ ಗುರಿ ತಲುಪುವುದರಲ್ಲಿ 'ಆ ವಾಕ್ಯ'ದ ಪಠನ ಒಂದು ಹೆಜ್ಜೆಯಾಗುತ್ತದೆ. ದಿ|| ಭೀಮರಾಯರ ವ್ಯಾಖ್ಯಾನದ ಸೊಬಗನ್ನು ಅರಿತಿರುವ ಜಿಜ್ಞಾಸುಗಳು-ತಮ್ಮಲ್ಲಿ ತತ್ವಜ್ಞಾನ ದೃಢವಾಯಿತೆಂದು ಹರ್ಷಪಡುತ್ತಾರೆ. ಈಗ ಕೈಯಲ್ಲಿರುವ ಪುಸ್ತಕವನ್ನು ಓದುವುದಕ್ಕೆ ಸಂಕಲ್ಪ ಮಾಡಿ ನಂತರ ಕಾರ್ಯರೂಪಕ್ಕೆ ಪರಿವರ್ತಿಸಿ. ಜಗದ್ಗುರುಗಳ ಅನುಗ್ರಹವನ್ನು ಸಂಪಾದಿಸಿ-ಮುಂದಿನ ಜವಾಬ್ದಾರಿ ನಿಮ್ಮದಾಗಿರುತ್ತದೆ ಎಂದು ಗುರುವೃಂದದಲ್ಲಿ ಶರಣು ಹೋಗೋಣ